# ತುಮಕೂರು ಜಿಲ್ಲೆಯಲ್ಲಿ ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳು

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ
ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕ
ಶ್ರೀನಿವಾಸ ಎಲ್.

ಮಾರ್ಗದರ್ಶಕರು
ಡಾ. ಕೆ.ಮೋಹನ್‌ಕೃಷ್ಣ ರೈ
ಮುಖ್ಯಸ್ಥರು, ಚರಿತ್ರೆ ವಿಭಾಗ



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಜೂನ್ ೨೦೦೭

# ತುಮಕೂರು ಜಿಲ್ಲೆಯಲ್ಲಿ ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳು

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ
ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕ
ಶ್ರೀನಿವಾಸ್ ಎಲ್.



ಮಾರ್ಗದರ್ಶಕರು
ಡಾ. ಕೆ.ಮೋಹನ್‌ಕೃಷ್ಣ ರೈ
ಮುಖ್ಯಸ್ಥರು, ಚರಿತ್ರೆ ವಿಭಾಗ





ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಜೂನ್ ೨೦೦೨

# ಮಾರ್ಗದರ್ಶಕರ ಪ್ರಮಾಣಪತ್ರ

ತುಮಕೂರು ಜಿಲ್ಲೆಯಲ್ಲಿ ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳು ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್.ಪದವಿಗಾಗಿ ಶ್ರೀನಿವಾಸ ಎಲ್. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಕೆ.ಮೋಹನ್‌ಕೃಷ್ಣ ರೈ
ಮಾರ್ಗದರ್ಶಕರು ಮತ್ತು ಮುಖ್ಯಸ್ಥರು
ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : ೨೮·೦೬·೦೭

# ಪ್ರಮಾಣ ಪತ್ರ

ತುಮಕೂರು ಜಿಲ್ಲೆಯಲ್ಲಿ ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳು ಎಂಬ ನಿಬಂಧವನ್ನು ಡಾ. ಕೆ.ಮೋಹನ್‌ಕೃಷ್ಣ ರೈ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಸಮಾಜವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

L. Sreenivasa

ಶ್ರೀನಿವಾಸ ಎಲ್.
ಸಂಶೋಧಕ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : ೨೮-೦೭-೦೭

# ಕೃತಜ್ಞತೆಗಳು

ತುಮಕೂರು ಜಿಲ್ಲೆಯಲ್ಲಿ ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳು ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್.ಪದವಿಗಾಗಿ ಸಲ್ಲಿಸಲು ಅವಕಾಶ ಕಲ್ಪಿಸಿಕೊಟ್ಟ ಮಾನ್ಯ ಕುಲಪತಿಗಳಾದ ಡಾ.ಬಿ.ಎ.ವಿವೇಕ ರೈ, ಮಾನ್ಯ ಕುಲಸಚಿವರಾದ ಶ್ರೀ ವಿ.ಶಂಕರ್ ಹಾಗೂ ಅಧ್ಯಯನಾಂಗದ ನಿರ್ದೇಶಕರಾದ ಡಾ.ಟಿ.ಆರ್.ಚಂದ್ರಶೇಖರ್ ಅವರಿಗೆ,

ನಿಬಂಧದ ವಿಷಯವನ್ನು ಸೂಚಿಸಿ ತಾಳ್ಮೆ ಮತ್ತು ಅಕ್ಕರೆಯಿಂದ ಸೂಕ್ತ ಸಲಹೆಗಳೊಂದಿಗೆ ಮಾರ್ಗದರ್ಶನ ನೀಡಿದ ಚರಿತ್ರೆ ವಿಭಾಗದ ಮುಖ್ಯಸ್ಥರು ಹಾಗೂ ಮಾರ್ಗದರ್ಶಕರು ಆದ ಡಾ.ಕೆ.ಮೋಹನ್‌ಕೃಷ್ಣ ರೈ ಅವರಿಗೆ, ಅಧ್ಯಯನ ಅವಧಿಯಲ್ಲಿ ಚರಿತ್ರೆಯ ವಿವಿಧ ಆಯಾಮಗಳನ್ನು ಬೋಧಿಸಿದ ಡಾ.ಸಿ.ಆರ್.ಗೋವಿಂದರಾಜು, ಪ್ರೊ.ಲಕ್ಷ್ಮಣ್ ತೆಲಗಾವಿ, ಡಾ.ವಿರೂಪಾಕ್ಷಿ ಪೂಜಾರಹಳ್ಳಿ, ಡಾ.ಎನ್.ಚಿನ್ನಸ್ವಾಮಿ ಸೋಸಲೆ, ಡಾ.ಟಿ.ವಿಜಯ್ ಪೂಣಚ್ಚ ಅವರಿಗೆ,

ಈ ಅಧ್ಯಯನಕ್ಕೆ ಪ್ರೋತ್ಸಾಹ ಮತ್ತು ಸಲಹೆಗಳನ್ನು ನೀಡಿದ ಪ್ರೊ.ಎಸ್.ಚಂದ್ರಶೇಖರ್, ಡಾ.ಷಡಾಕ್ಷರಯ್ಯ, ಡಾ.ಎಂ.ಜಮುನಾ, ಡಾ.ಅಶ್ವತ್ಥನಾರಾಯಣ, ಡಾ.ಎನ್.ಷೇಕ್ ಮಸ್ತಾನ್, ಡಾ.ಎಸ್.ನಾಗರತ್ನಮ್ಮ, ಡಾ.ಕೆ.ಎಲ್.ಎನ್.ಮೂರ್ತಿ, ಎಲ್.ಪಿ.ರಾಜು, ಡಾ.ವೀರೇಶ ಬಡಿಗೇರ ಅವರಿಗೆ,

ಕ್ಷೇತ್ರಕಾರ್ಯದಲ್ಲಿ ಸಲಹೆ-ಸಹಕಾರಗಳನ್ನು ನೀಡಿದ ಸ್ನೇಹಿತರಾದ ಫ್ರಾನ್ಸಿಸ್ ಪಿಂಟೋ, ಮೈಲಾರಯ್ಯ, ಈಶ್ವರಯ್ಯ, ವೀರೇಶ ಉತ್ತಂಗಿ, ಹೋಳಿ ಬಸಪ್ಪ, ಹನುಮಂತರಾಯ ದೊಡ್ಡಮನಿ, ಎಸ್.ಎ.ಮಲ್ಲಿಕಾರ್ಜುನ, ನಾಗರಾಜ್, ತಿಮ್ಮಣ್ಣ, ಗ್ರಂಥಾಲಯದಿಂದ ಪುಸ್ತಕಗಳನ್ನು ಒದಗಿಸಿ ಕೊಟ್ಟ ಗ್ರಂಥಪಾಲಕರಾದ ಡಾ.ರಾಧಾಕೃಷ್ಣ, ಡಾ.ನಾಗವೇಣಿ ಮತ್ತು ಸಿಬ್ಬಂದಿವರ್ಗದವರಾದ ನಾಗರಾಜ ನಾಯ್ಕ, ಗಣೇಶ, ಶಿವ ಹಾಗೂ ಚರಿತ್ರೆ ವಿಭಾಗದ ಬೋಧಕೇತರ ಸಿಬ್ಬಂದಿವರ್ಗ ದವರಾದ ಸೋಮಶೇಖರ ಎಸ್.ಕಣವಿ, ಗಂಗಾಧರ, ವೀರೇಶ್ ಅವರಿಗೆ,

ಸದಾ ಮಗನ ಏಳ್ಗೆಯನ್ನು ಬಯಸುವ ತಂದೆ-ತಾಯಿಗಳಾದ ಲಿಂಗಪ್ಪ ಮತ್ತು ಆದಮ್ಮ, ದೊಡ್ಡಮ್ಮನವರಾದ ಅಶ್ವತ್ಥಮ್ಮ ಹಾಗೂ ಸಹೋದರರಾದ ರಾಮಚಂದ್ರಪ್ಪ, ಕೇಶವಪ್ಪ, ಭಾವಮೈದನಾದ ಕೆ.ಎ.ಪ್ರಶಾಂತ್ ಅವರಿಗೆ,

ಅಕ್ಕರೆಯಿಂದ ಅಕ್ಷರ ಸಂಯೋಜನೆ ಮಾಡಿಕೊಟ್ಟ ಶ್ರೀಮತಿ ಬಿ.ರಶ್ಮಿ ಅವರಿಗೆ,

*ಕೃತಜ್ಞತೆಗಳು*

ಶ್ರೀನಿವಾಸ ಎಲ್.

# ಪರಿವಿಡಿ

## ಪ್ರಸ್ತುತ ಕರ್ನಾಟಕದಲ್ಲಿ ತುಮಕೂರು ಜಿಲ್ಲೆಯನ್ನು ಗುರುತಿಸಿರುವ ನಕ್ಷೆ




ಮೂಲ : ಸುವರ್ಣ ಕರ್ನಾಟಕ ದರ್ಶನ, ಕೆ.ಅನಂತರಾಮರಾವ್, ವಿದ್ಯಾ ಪಬ್ಲಿಕೇಷನ್ಸ್,
ಬೆಂಗಳೂರು, ೨೦೦೬, ಪು.೬೮

## ಪ್ರಸ್ತುತ ತುಮಕೂರು ಜಿಲ್ಲೆಯನ್ನು ಗುರುತಿಸಿರುವ ನಕ್ಷೆ




ಮೂಲ : ಜಯಮಂಗಲಿ, ೬೯ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ತುಮಕೂರು ೨೦೦೨ರ ಸ್ಮರಣ ಸಂಚಿಕೆ, ಕನ್ನಡ ಸಾಹಿತ್ಯ ಸಮ್ಮೇಳನ, ಬೆಂಗಳೂರು, ಪು.೫

೧

# ಪ್ರಸ್ತಾವನೆ

ಭಾರತವು ಬ್ರಿಟಿಷ್ ಭಾರತವಾಗಿ ಪರಿವರ್ತನೆಗೊಂಡಾಗಿನಿಂದ ವಸಾಹತು ಆಳ್ವಿಕೆಯ ವಿರುದ್ಧ ನಿರಂತರ ಹೋರಾಟಗಳು ಆರಂಭಗೊಂಡವು. ಪರಕೀಯರ ದಾಸ್ಯದಿಂದ ದೇಶವನ್ನು ಬಿಡುಗಡೆಗೊಳಿಸುವ ಪ್ರಯತ್ನಗಳು ದೇಶಾದಾದ್ಯಂತ ನಡೆದವು. ಕರ್ನಾಟಕದಲ್ಲಿಯೂ ಸಹಾ ಇಂತಹ ಹಲವಾರು ನಿದರ್ಶನಗಳನ್ನು ಕಾಣಬಹುದು. ಪರರ ದಬ್ಬಾಳಿಕೆ, ದಾಸ್ಯ ಸಂಕೋಲೆಯನ್ನು ಕಿತ್ತೊಗೆದು ಸ್ವಾತಂತ್ರ್ಯವಾಗಿ ಉಸಿರಾಡಲು ಟಿಪ್ಪುಸುಲ್ತಾನ್, ದೊಂಡಿಯ ವಾಘ, ಕಿತ್ತೂರಿನ ರಾಣಿ ಚೆನ್ನಮ್ಮ, ಸಂಗೋಳ್ಳಿ ರಾಯಣ್ಣ, ಸುರಪುರದ ವೆಂಕಟಪ್ಪನಾಯಕ, ಹಲಗಲಿಯ ಬೇಡರು ನಡೆಸಿದ ಪ್ರಯತ್ನಗಳು ಆಳುವ ವರ್ಗದ ಮುಂದೆ ವಿಫಲವಾದರೂ ಜಾಗೃತಿಯನ್ನುಂಟು ಮಾಡುವಲ್ಲಿ ಯಶಸ್ವಿಯಾದವು.

ಸ್ವಾತಂತ್ರ್ಯ ಪೂರ್ವದಲ್ಲಿ ಇಡೀ ಭಾರತವು ಬ್ರಿಟಿಷರ ಒಡೆದು ಆಳುವ ನೀತಿಯಿಂದಾಗಿ ಛಿದ್ರ ಛಿದ್ರವಾಗಿ ಹರಿದು ಹಂಚಿ ಹೋಗಿತ್ತು. ಇವರ ಆಧಿಪತ್ಯಕ್ಕೊಳಪಟ್ಟ ಮೇಲೆ ಭಾರತದ ೧೧ ಪ್ರಾಂತ್ಯಗಳು ಸುಮಾರು ೬೦೦ ಸಂಸ್ಥಾನಗಳಾಗಿ ಇಬ್ಭಾಗವಾಯಿತು. ಈ ಸಂಸ್ಥಾನಗಳಲ್ಲಿ ಮೈಸೂರು ಸಂಸ್ಥಾನವು ಒಂದು. ಸಂಸ್ಥಾನದಲ್ಲಿ ಅಂದಿನ ಶಿಕ್ಷಣ ವ್ಯವಸ್ಥೆ, ವೃತ್ತ ಪತ್ರಿಕೆಗಳು, ೧೮೮೫ರಲ್ಲಿ ಸ್ಥಾಪಿತವಾದ ರಾಷ್ಟ್ರೀಯ ಕಾಂಗ್ರೆಸ್ ಜನರಲ್ಲಿ ರಾಜಕೀಯ ಜಾಗೃತಿ ಮೂಡಿಸಲು ಪ್ರಮುಖ ಪಾತ್ರ ವಹಿಸಿದ್ದವು.[೧] ತಿಲಕರ ನಂತರ ಮಹಾತ್ಮ ಗಾಂಧೀಜಿಯವರ ನಾಯಕತ್ವದಲ್ಲಿ ಭಾರತದ ರಾಷ್ಟ್ರೀಯ ಹೋರಾಟ ದರ್ಶನವನ್ನೇ ಪಡೆಯಿತು. ಇವರು ಜನತೆಯ ರಾಷ್ಟ್ರೀಯ ನಾಯಕರು ಆಗಿದ್ದರಲ್ಲದೆ ಹೋರಾಟದ ಮಾರ್ಗದರ್ಶಕರು, ಸಮಾಜ ಸುಧಾರಕರೂ ಆಗಿಯೂ ದುಡಿದರು. ಇವರು ಸಾಮಾಜಿಕ, ಆರ್ಥಿಕ ಅಭಿಪ್ರಾಯಗಳನ್ನು ರೂಪಿಸುವಾಗ ಜನ ಸಮುದಾಯದ ಮೇಲೆ ಹೆಚ್ಚಿನ ಗಮನವನ್ನು ಕೇಂದ್ರೀಕರಿಸಿದರು. ರಾಷ್ಟ್ರದ ಜನತೆಯಲ್ಲಿ ಐಕ್ಯತೆಯನ್ನು ಸೃಷ್ಟಿಸಿ, ಜನತೆ ಉದ್ಯೋಗ ಕೈಗೊಳ್ಳುವಂತೆ ಮಾಡಿ, ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸುವ ಪ್ರಯತ್ನ ಮಾಡಿದರು. ಸಂಪೂರ್ಣ ಸ್ವಾತಂತ್ರ್ಯಗಳಿಸಲು ರಚನಾತ್ಮಕ ಕಾರ್ಯಗಳು ಅಗತ್ಯ ಎನ್ನುವುದನ್ನು ಮನಗಂಡ ಗಾಂಧೀಜಿಯವರು ರಚನಾತ್ಮಕ ಕಾರ್ಯಗಳ

ರೂಪ ರೇಷೆಗಳನ್ನು ಸಿದ್ಧಪಡಿಸಿದರು. ಶಾಂತಿಯ ತತ್ವವನ್ನು ಒಳಗೊಂಡ ಈ ಕ್ರಾಂತಿಯ ಕಾರ್ಯಗಳು, ಸರ್ವ ವ್ಯಾಪ್ತಿಯುಳ್ಳ ರಾಷ್ಟ್ರೀಯ ಯೋಜನೆಗಳಾಗಿದ್ದವು. ಇವುಗಳಲ್ಲಿ ಕೆಲವು ದೇಶದ ವಿಶಿಷ್ಟ ಸಮಸ್ಯೆಗಳನ್ನು ಬಗೆಹರಿಸುವಂತಿದ್ದರೆ, ಖಾದಿ ಮತ್ತು ಗ್ರಾಮೋದ್ಯೋಗ, ಮೂಲಶಿಕ್ಷಣ ಇವು ಇಡೀ ಜನತೆಯ ಅಭಿವೃದ್ಧಿಗೆ ಪೂರಕವಾಗಿದ್ದವು. ಅಷ್ಟೇ ಅಲ್ಲದೇ ರಾಷ್ಟ್ರೀಯ ಭಾಷೆ, ಆರ್ಥಿಕ ಸಮಾನತೆ,ಅಸ್ಪೃಶ್ಯತಾ ನಿವಾರಣೆ, ಪಾನನಿರೋಧ, ಗ್ರಾಮನೈರ್ಮಲ್ಯ, ಮಹಿಳೆಯರ ಏಳಿಗೆ, ವಯಸ್ಕರ ಶಿಕ್ಷಣ, ರೈತರ ಏಳಿಗೆ, ಕಾರ್ಮಿಕರ ಏಳಿಗೆ, ವಿದ್ಯಾರ್ಥಿಗಳ ಏಳಿಗೆ, ಆರೋಗ್ಯ ಶಿಕ್ಷಣ, ಗೋ-ಸಂರಕ್ಷಣೆ, ಕುಷ್ಟ ರೋಗ ನಿವಾರಣೆ ಇವು ಮುಖ್ಯವಾಗಿದ್ದವು. ಗಾಂಧೀಜಿಯವರ ಪ್ರಕಾರ ರಚನಾತ್ಮಕ ಕೆಲಸದಲ್ಲಿ ಯಾವುದಕ್ಕೆ ಪ್ರಥಮ, ದ್ವಿತೀಯ ಎಂಬ ಪ್ರಶ್ನೆಯೂ ಇಲ್ಲ. ಅಹಿಂಸಾ ಹೋರಾಟದಲ್ಲಿ ಪೂರ್ವ ಸಿದ್ಧತೆ ಅಗತ್ಯವಾದ್ದರಿಂದ ಈ ರಚನಾತ್ಮಕ ಕಾರ್ಯಕ್ರಮಗಳು ಪೂರ್ವ ಸಿದ್ಧತೆಗೆ ತಳಹದಿಯಾಗಿವೆ ಎಂಬುದು ಗಾಂಧೀಜಿಯವರ ದೃಢ ನಂಬಿಕೆ. ಬ್ರಿಟಿಷರೊಡನೆ ಸ್ವಾತಂತ್ರ್ಯ ಸಮರ ನಡೆಸುವಾಗ ರಾಷ್ಟ್ರವನ್ನು ಒಕ್ಕೂಟಕ್ಕೆ ತರುವುದಕ್ಕೂ, ಜನರ ಆರ್ಥಿಕ ಸ್ಥಿತಿ ಉತ್ತಮಗೊಳಿಸುವುದಕ್ಕೆ ಹಾಗೂ ನೈತಿಕ, ಧಾರ್ಮಿಕ ಸುಧಾರಣೆಯಗುವುದಕ್ಕೆ ಮಾಡಿದ ಒಂದು ವಿಧಾನ ರಚನಾತ್ಮಕ ಕಾರ್ಯಕ್ರಮ. ಗಾಂಧೀಜಿಯವರ ಪ್ರಕಾರ ಯಾವ ಮಾರ್ಗನುಸರಣೆ ರಾಷ್ಟ್ರ ಯೋಧರನ್ನು ಸಜ್ಜುಗೊಳಿಸಿ ಸ್ವಾತಂತ್ರ್ಯವನ್ನು ಗಳಿಸಿಕೊಡುತ್ತದೆಯೋ ಅದೇ ಮಾರ್ಗನುಸರಣೆ ಆ ಯೋಧರು ಬಲಿದಾನದಿಂದ ಗಳಿಸಿದ ಸ್ವಾತಂತ್ರ್ಯವನ್ನು ರಚಿಸಿ ಪೋಷಿಸಿ, ದೇಶದಲ್ಲಿ ಶಾಂತಿ ಸಮೃದ್ಧಿ ನೆಲೆಸುವಂತೆ ಸಹಾಯಕವಾಗುವುದೇ ರಚನಾತ್ಮಕ ಕಾರ್ಯಗಳ ಉದ್ದೇಶ. ಸತ್ಯ ಹಾಗೂ ಅಹಿಂಸೆಯಿಂದ ಲಭಿಸುವ ಪೂರ್ಣ ಸ್ವರಾಜ್ಯ ಅಥವಾ ಸಂಪೂರ್ಣ ಸ್ವಾತಂತ್ರ್ಯ, ರಚನಾತ್ಮಕ ಕೆಲಸಗಳ ಹೊರತಾಗಿ ಬರಲು ಸಾಧ್ಯವೇ ಇಲ್ಲ ಎಂಬುದು ಗಾಂಧೀಜಿಯವರ ನಂಬಿಕೆ ಸಹ ಆಗಿತ್ತು.[೨]

ಸತ್ಯ ಅಹಿಂಸೆಗಳ ಮೂಲಕ ಸ್ವರಾಜ್ಯ ಸಾಧಿಸುವ ಪಥವೇ ರಚನಾತ್ಮಕ ಕಾರ್ಯಕ್ರಮ, ಇದನ್ನು ಪೂರ್ಣವಾಗಿ ಸಾಧಿಸಿದರೆ, ಸಂಪೂರ್ಣ ಸ್ವಾತಂತ್ರ್ಯ ಕೈಗೂಡಿದಂತೆ, ಈ ಕಾರ್ಯಕ್ರಮ ದೇಶವನ್ನು ತಳದಿಂದ ಕಟ್ಟುವ ಪ್ರಯತ್ನ. ಅದೇ ನಿಜವಾದ ಸ್ವಾತಂತ್ರ್ಯ ಜೀವನ. ಹಳ್ಳಿಗಳೇ ಕೇಂದ್ರವಾಗಿ ನಡೆಸಲಾಗುವ ಸ್ವಾತಂತ್ರ್ಯ ಸಂಗ್ರಾಮಕ್ಕೆ ರಚನಾತ್ಮಕ ಕಾರ್ಯ ಅಗತ್ಯ. ಇದನ್ನು ಜನರೇ ಅರಿತು, ಅಂಗೀಕರಿಸಿ, ತಮ್ಮ ಮನಸ್ಸಿನಲ್ಲಿ ಚಿತ್ರಿಸಿಕೊಂಡು ಸಂಪೂರ್ಣವಾಗಿ ನಡೆಸಿದರೆ ಪೂರ್ಣ ಸ್ವಾತಂತ್ರ್ಯವನ್ನು ಶೀಘ್ರವಾಗಿ ಪಡೆಯಲು ಸಾಧ್ಯ ಎಂದು ಗಾಂಧೀಜಿ ನಂಬಿದ್ದರು.

೧೯೨೦ ಕ್ಕಿಂತ ಮೊದಲು ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ಚಟುವಟಿಕೆಗಳು ಬ್ರಿಟಿಷ್ ಇಂಡಿಯಾ ಪ್ರಾಂತ್ಯಗಳಿಗೆ ಮಾತ್ರ ಸೀಮಿತವಾಗಿದ್ದವು. ದೇಶಿಯ ಸಂಸ್ಥಾನಗಳ ಯೋಗಕ್ಷೇಮದ ಹೊಣೆಗಾರಿಕೆ ಆಯಾಯ ದೇಶೀಯ ರಾಜರುಗಳೇ ನಿರ್ವಹಿಸುತ್ತಿದ್ದರು.

ಆದ್ದರಿಂದ ಅವರನ್ನು ಗೌರವಿಸುವ ಭಾವನೆ ಕಾಂಗ್ರೆಸ್‌ನಲ್ಲಿ ಕಾಣಬಹುದಿತ್ತು. ಬ್ರಿಟಿಷ್ ಭಾರತದ ಪ್ರದೇಶಗಳು ಸ್ವಾತಂತ್ರ್ಯ ಪಡೆದರೆ ದೇಶೀಯ ಸಂಸ್ಥಾನಗಳು ಸುಲಭವಾಗಿ ಸ್ವಾತಂತ್ರ್ಯ ಪಡೆಯುತ್ತವೆ ಎಂಬುದು ಗಾಂಧೀಜಿಯವರ ಅಭಿಪ್ರಾಯವಾಗಿತ್ತು. ಆದುದ್ದರಿಂದ ಇವರು ಸಂಸ್ಥಾನದ ರಾಜಕೀಯ ವಿಷಯಗಳಲ್ಲಿ ಹಸ್ತಕ್ಷೇಪ ಮಾಡಲಿಲ್ಲ. ಪರಿಣಾಮವಾಗಿ ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ಶಾಖೆಗಳನ್ನು ಸಂಸ್ಥಾನಗಳಲ್ಲಿ ೧೯೨೦ ರವರೆಗೆ ಆರಂಭಿಸಿರಲಿಲ್ಲ.

ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ಅಧಿವೇಶನವು ೧೯೨೦ ರಲ್ಲಿ ನಾಗಪುರದಲ್ಲಿ ಸೇರಿತು. ಈ ಅಧಿವೇಶನದಲ್ಲಿ ಭಾಷೆಯ ಆಧಾರದ ಮೇಲೆ ೨೧ ಪ್ರಾಂತೀಯ ಕಾಂಗ್ರೆಸ್ ಸಮಿತಿಗಳನ್ನು ರಚಿಸಲಾಯಿತು. ಪ್ರತಿಯೊಂದು ಭಾಷಾ ಪ್ರಾಂತ್ಯಕ್ಕೂ ಒಂದು ಪ್ರಾಂತೀಯ ಕಾಂಗ್ರೆಸ್ ಸಮಿತಿ ಇರಬೇಕು ಎನ್ನುವ ಕೂಗು ಹಿಂದಿನಿಂದಲೇ ಇತ್ತು. ಭಾಷಾವಾರು ಪ್ರಾಂತ್ಯದ ನಿರ್ಮಾಣದ ಬೇಡಿಕೆಯನ್ನು ಸಮಾವೇಶ ಅನುಮೋದಿಸಿತು. ಈ ಎರಡೂ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಕರ್ನಾಟಕದಿಂದ ೮೦೦ ಮಂದಿ ಸಮಾವೇಶಕ್ಕೆ ಹೋಗಿದ್ದರು.[೨] ಈ ೨೧ ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆಗಳ ಜೊತೆ ಜೊತೆಯಲ್ಲಿ ಜಿಲ್ಲಾ ಮತ್ತು ಸ್ಥಳೀಯ ಕಾಂಗ್ರೆಸ್‌ನ ಸಂಸ್ಥೆಗಳು ರೂಪುಗೊಳ್ಳಲು ಅನುಮತಿಯನ್ನು ನೀಡಿತು. ಕಾಂಗ್ರೆಸ್‌ನ ರಚನಾತ್ಮಕ ಕಾರ್ಯಗಳನ್ನು ಆಯಾಯಾ ಕಾಂಗ್ರೆಸ್‌ನ ಶಾಖೆಗಳೇ ನಿರ್ವಹಿಸಿಕೊಂಡು ಹೋಗಬೇಕೆಂದು ತಿಳಿಸಿತು. ಇದರ ಪರಿಣಾಮವಾಗಿ ಮೈಸೂರು ಸಂಸ್ಥಾನದಲ್ಲಿ ಡಿಸ್ಟ್ರಿಕ್ಟ್ ಕಾಂಗ್ರೆಸ್‌ನ ಶಾಖೆಗಳು ಜನ್ಮತಾಳಿ ಕಾಂಗ್ರೆಸ್‌ನ ರಚನಾತ್ಮಕ ಕಾರ್ಯಗಳಲ್ಲಿ ತೊಡಗಿದವು.

೧೯೨೧ ರಲ್ಲಿ ಮೈಸೂರಿನಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಮೈಸೂರು ಜಿಲ್ಲಾ ಶಾಖೆಯನ್ನು ಮೈಸೂರು ಶ್ರೇಷ್ಟ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರಾಗಿದ್ದ ಎಸ್.ಎಸ್. ಸೆಟ್ಲೂರ್ ರವರು ಸ್ಥಾಪಿಸಿ ಅದರ ಅಧ್ಯಕ್ಷರಾದರು.[೯] ೧೯೨೩ ರಲ್ಲಿ ವಕೀಲರು ಪತ್ರಕರ್ತರು ಆದ ಕೆ. ರಂಗೈಯ್ಯಂಗಾರ್‌ರವರು ತುಮಕೂರು ಜಿಲ್ಲಾ ಕಾಂಗ್ರೆಸ್ ಕಮಿಟಿಯನ್ನು ಸ್ಥಾಪಿಸಿ ಅದರ ಅಧ್ಯಕ್ಷರಾದರು. ಇವರು ಈ ಸಮಿತಿಯ ಮೂಲಕ ತುಮಕೂರಿನಲ್ಲಿ ಕಾಂಗ್ರೆಸ್‌ನ ರಚನಾತ್ಮಕ ಕಾರ್ಯಕ್ರಮಗಳಲ್ಲಿ ತೊಡಗಿದರು. ಮೈಸೂರು ಜಿಲ್ಲಾ ಕಾಂಗ್ರೆಸ್ ಸ್ಥಾಪನೆಯಾದ ನಂತರ ಸಂಸ್ಥಾನದಲ್ಲಿ ಚಳುವಳಿ ಒಂದು ನಿರ್ದಿಷ್ಟ ರೂಪ ಪಡೆಯಿತು. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್, ಕಾಂಗ್ರೆಸ್‌ನ ಶಾಖೆಗಳ ಚಟುವಟಿಕೆಗಳು ಕೇವಲ ಗಾಂಧೀಜಿಯವರ ರಚನಾತ್ಮಕ ಕಾರ್ಯಗಳಿಗೆ ಮಾತ್ರ ಸೀಮಿತವಾಗಿರಬೇಕು ಮತ್ತು ಬ್ರಿಟಿಷ್ ಭಾರತದ ನಾಯಕರು ರಾಜ್ಯದ ಯಾವುದೇ ರಾಜಕೀಯ ಚಟುವಟಿಕೆಗಳಲ್ಲಿ ಹಸ್ತಕ್ಷೇಪ ಮಾಡಬಾರದೆಂದು ಸಲಹೆ ನೀಡಿತ್ತು.[೧೦]

೧೯೨೦ ರಿಂದ ಕಾಂಗ್ರೆಸ್ ಗಾಂಧೀಜಿಯವರ ನೇತೃತ್ವದಲ್ಲಿ ಅಸಹಕಾರ ಚಳುವಳಿಯ ಮಾರ್ಗ ಹಿಡಿಯಿತು. ಕರ್ನಾಟಕದಲ್ಲಿಯೂ ಸಹ ಗಾಂಧೀಜಿಯವರ ಪ್ರಭಾವಕ್ಕೆ ಜನ

ಒಳಗಾದರು. ಇದರಿಂದಾಗಿ ೧೯೨೦ ರಿಂದಲೇ ಗಾಂಧೀಯುಗ ಕರ್ನಾಟಕದಲ್ಲಿ ಆರಂಭವಾಯಿತು. ೧೯೨೪ ರಲ್ಲಿ ಬೆಳಗಾಂನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನಕ್ಕೆ ಕರ್ನಾಟಕದ ನಾನಾ ಭಾಗಗಳಿಂದ ಬಂದಿದ್ದ ಜನರನ್ನುದ್ದೇಶಿಸಿ ಗಾಂಧೀಜಿಯವರು ಈ ರೀತಿಯಾಗಿ ರಚನಾತ್ಮಕ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರಬೇಕೆಂದು ಕೇಳಿಕೊಂಡಿದ್ದರು. "ನಿಮ್ಮ ನಿಮ್ಮ ಜಿಲ್ಲೆಗಳಲ್ಲಿ ಪ್ರವಾಸ ಮಾಡಿ ಖಾದಿಯ ಸಂದೇಶವನ್ನು ಸಾರಿ, ಹಿಂದೂ-ಮುಸ್ಲಿಮ್ ಐಕ್ಯತೆಯ ಸಂದೇಶವನ್ನು ಸಾರಿ, ಹಾಗೂ ಅಸ್ಪೃಶ್ಯತೆಯ ನಿವಾರಣೆಯ ಸಂದೇಶವನ್ನು ಸಾರಿ" ಎಂದು ಘೋಷಿಸಿದರು. ಹೀಗೆ ಬೆಳಗಾಂನ ಕಾಂಗ್ರೆಸ್ ಅಧಿವೇಶನದ ಉತ್ಸವವನ್ನು ಸಾಕ್ಷಾತ್ತಾಗಿ ಕಂಡ ರಾಜ್ಯದ ನಾನಾ ಭಾಗದ ಜಿಲ್ಲೆಗಳ ಜನರು ಗಾಂಧೀಜಿಯವರ ಸಂದೇಶವನ್ನು ಹೊತ್ತು ಹೋದರು. ಇದರಿಂದ ಪ್ರಭಾವಿತರಾದ ತಗಡೂರು ರಾಮಚಂದ್ರರಾಯರು, ಕೆ.ಟಿ. ಭಾಷ್ಯಂ, ವೀರಣ್ಣಗೌಡ ಪಾಟೀಲ, ಟಿ.ಸುಬ್ರಮಣ್ಯಂ, ಕೆ. ರಂಗೈಯ್ಯಂಗಾರ್, ಎಂ.ಎನ್. ಜೋಯಿಸ್, ಹರ್ಡೇಕರ್ ಮಂಜಪ್ಪನವರು ರಾಜ್ಯದ ವಿವಿಧ ಕಡೆಗಳಲ್ಲಿ ಸಂಚರಿಸಿ ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರ ಮೂಲಕ ಜನತೆಯಲ್ಲಿ ರಾಷ್ಟ್ರ ಪ್ರಜ್ಞೆಯ ಅರಿವನ್ನು ಮೂಡಿಸಿದರು.[೬]

ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ನಡೆದ ಈ ಕಾಂಗ್ರೆಸ್ ಅಧಿವೇಶನವು ರಚನಾತ್ಮಕ ಕೆಲಸಗಳ ಕಲ್ಪನೆಯನ್ನು ಸಂಪೂರ್ಣವಾಗಿ ಸ್ಪಷ್ಟ ಪಡಿಸಿತು. ಈ ವೇಳೆಗಾಗಲೇ ಕನ್ನಡಿಗರು ಗಾಂಧೀಜಿಯವರ ರಚನಾತ್ಮಕ ಕೆಲಸಗಳಿಗೆ ಸಾಕಷ್ಟು ಸ್ಪಂದಿಸಿದ್ದರು. ಸಂಘ-ಸಂಸ್ಥೆಗಳ ಸ್ಥಾಪನೆ, ರಚನಾತ್ಮಕ ಅಂಶಗಳ ವಸ್ತು ಪ್ರದರ್ಶನ ಇವೆ ಮುಂತಾದವುಗಳನ್ನು ಏರ್ಪಡಿಸಿ ಗಾಂಧೀಜಿಯವರಿಂದ ಮೆಚ್ಚಿಗೆ ಸಹ ಪಡೆದರು.[೭]

ಗಾಂಧೀಜಿಯವರು ೧೯೨೭ ರಲ್ಲಿ ಖಾದಿ ಪ್ರಚಾರ, ೧೯೩೩ ರಲ್ಲಿ ದರಿದ್ರ ನಾರಾಯಣ ನಿಧಿ, ೧೯೩೬ ರಲ್ಲಿ ಅಸ್ಪೃಶ್ಯತಾ ನಿವಾರಣೆಗಾಗಿ ಪ್ರವಾಸ ಕೈಗೊಂಡು ಕರ್ನಾಟಕಕ್ಕೆ ಬಂದಾಗಲೆಲ್ಲಾ ಖಾದಿ ಮತ್ತು ಗ್ರಾಮೋದ್ಯೋಗ, ಅಸ್ಪೃಶ್ಯತಾ ನಿವಾರಣೆ, ಹಿಂದೂ-ಮುಸ್ಲಿಮ್ ಐಕ್ಯತೆ, ಮದ್ಯಪಾನ ನಿಷೇಧ, ಗ್ರಾಮ ನೈರ್ಮಲ್ಯ ಮುಂತಾದ ರಚನಾತ್ಮಕ ಕಾರ್ಯಕ್ರಮಗಳನ್ನು ಕುರಿತು ಮಾತನಾಡುತ್ತಿದ್ದರು. ಇದರಿಂದಾಗಿಯೂ ಸಹ ಕರ್ನಾಟಕದ ಅದರಲ್ಲಿಯೂ ಮೈಸೂರು ಸಂಸ್ಥಾನದ ಜನತೆ ರಚನಾತ್ಮಕ ಕಾರ್ಯಕ್ರಮಗಳಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಲಾರಂಭಿಸಿದರು. ಇದರಿಂದ ಪ್ರಭಾವಿತರಾದ ತುಮಕೂರು ಜಿಲ್ಲೆಯ ಕಾಂಗ್ರೆಸ್ಸಿಗರು ಸ್ವದೇಶಿ, ವಿದೇಶಿಬಹಿಷ್ಕಾರ, ಪಾನನಿರೋಧ, ಅಸ್ಪೃಶ್ಯತಾನಿವಾರಣೆ, ಹಿಂದಿಪ್ರಚಾರ, ಗ್ರಾಮೀಣಾಭಿವೃದ್ಧಿ, ಸರ್ವೋದಯ, ಗೋಹತ್ಯೆ ನಿಷೇಧ, ವಯಸ್ಕರ ಶಿಕ್ಷಣ, ಹಿಂದೂ ಮುಸ್ಲಿಮ್ ಐಕ್ಯತೆ, ರಾಷ್ಟ್ರೀಯ ಶಾಲೆಗಳ ಸ್ಥಾಪನೆಯಂತಹ ಕಾರ್ಯಗಳನ್ನು ವಿಶೇಷವಾಗಿ ಸ್ವೀಕರಿಸಿದರು. ರಚನಾತ್ಮಕ ಕಾರ್ಯಗಳಿಗೆ ಇಲ್ಲಿಯ ಕಾಂಗ್ರೆಸ್‌ನ ಮುಖಂಡರು ಹಾಗೂ ವಿವಿಧ ವರ್ಗದ ಜನರು ಹೇಗೆ ಸ್ಪಂಧಿಸಿ

ಸ್ವೀಕರಿಸಿ ಕಾರ್ಯ ರೂಪಕ್ಕೆ ತಂದರು ಎಂಬುದನ್ನು ಇಲ್ಲಿಯ ಕಾರ್ಯ ಚಟುವಟಿಕೆಯಿಂದ ಮಾತ್ರವೇ ಅಳೆಯಬೇಕಾಗಿದೆ.

ಸ್ವದೇಶಿ ಚಳುವಳಿಯಲ್ಲಿ ಕೇವಲ ಮೇಲ್ವರ್ಗದ ಜನರಷ್ಟೇ ಅಲ್ಲದೇ ಕೆಳವರ್ಗದ ಜನರೂ ಸಹ ಭಾಗವಹಿಸಿದರು. ಆದರೆ ಭಾರತದ ಸ್ವಾತಂತ್ರ್ಯ ಹೋರಾಟವನ್ನು ಮೇಲ್ವರ್ಗದ ಅಥವಾ ಜಾತಿಯ ಹೋರಾಟವನ್ನಾಗಿ ಚಿತ್ರಿಸಲಾಗಿದೆ. ಪ್ರಬಲ ವರ್ಗಗಳು ಸಬಾಲ್ಟರ್ನ್ ವರ್ಗಗಳನ್ನು ಶೋಷಣೆ ಮಾಡುವುದರ ಬಗೆಗಳನ್ನು ಇಟಲಿಯ ಮಾರ್ಕ್ಸಿಸ್ಟನಾದ ಆ್ಯಂಟೋನಿ ಗ್ರಾಂಸಿಯು "ಹೆಜಿಮನಿ" ಎನ್ನುವ ಪರಿಕಲ್ಪನೆಯ ಮೂಲಕ ತಿಳಿಸಿದ್ದಾನೆ. ಅಲಕ್ಷಿತ ಅಥವಾ ಕೆಳವರ್ಗಗಳನ್ನು ಆತ ಸಬಾಲ್ಟರ್ನ್ ವರ್ಗ ಎಂದು ಗುರುತಿಸಿದ್ದಾನೆ. ಆ್ಯಂಟೋನಿ ಗ್ರಾಂಸಿಯು ಈ ಅಲಕ್ಷಿತ ವರ್ಗಗಳನ್ನು ಚರಿತ್ರೆ ರಚನೆಗೆ ಪ್ರಾಮುಖ್ಯತೆ ನೀಡಿ ಅವು ಚರಿತ್ರೆಗೆ ಪ್ರವೇಶ ಪಡೆಯುವಂತೆ ಮಾಡಿದನು. ಅಲ್ಲಿಂದ ಈ ಸಬಾಲ್ಟರ್ನ್ ಚರಿತ್ರೆ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದುಕೊಂಡಿತು.[೮] ಅಲಕ್ಷಿತ ವರ್ಗಗಳನ್ನು ಕುರಿತು ಅಧ್ಯಯನ ನಡೆಸಿರುವ ರಂಜಿತ್ ಗುಹಾ ಅವರ ಪ್ರಕಾರ "ಭಾರತದ ರಾಷ್ಟ್ರೀಯ ಹೋರಾಟವೆಂದರೆ ಅದು ಕೇವಲ ಪ್ರಬಲ ವರ್ಗಗಳ ಹೋರಾಟವಷ್ಟೇ ಅಲ್ಲ. ಸಮಾಜದ ಅಂಚಿಗೆ ತಳ್ಳಲ್ಪಟ್ಟ ಜನ – ಸಮುದಾಯಗಳು ನಡೆಸಿದ ಹೋರಾಟ ಬಹುಮುಖ್ಯವಾದದ್ದು. ಸ್ವದೇಶಿ ಎನ್ನುವ ಕಲ್ಪನೆ ಬಲವಾಗಿದ್ದದ್ದೇ ಅವರಲ್ಲಿ. ಆದರೆ ಶ್ರೇಣೀಕೃತ ಸಮಾಜ ರಚನೆಯಲ್ಲಿ ಅವರು ಏನೇ ಮಾಡಿದರೂ ಅದು ಕೀಳುಮಟ್ಟದ್ದು ಅಥವಾ ಅನಾಗರೀಕವಾದುದು ಎಂಬ ನಂಬಿಕೆಯಿದೆ. ಇದರಿಂದ ಹೊರ ಬಂದಾಗ ಮಾತ್ರ ಅವರು ನಡೆಸಿದ ಹೋರಾಟಗಳ ಪ್ರಾಮುಖ್ಯತೆ ತಿಳಿದು ಬರಲು ಸಾಧ್ಯ". ಶಾಹಿದ್ ಅಮನ್, ಗುಡೆನ್ ರಾಮ್ ಪಾ, ಡೇವಿಡ್ ಅರ್ನಾಲ್ಡ್, ಗ್ಯಾನ್ ಪಾಂಡೆ, ದೀಪೇಕ್ ಚಕ್ರವರ್ತಿ, ಸುಮಿತ್ ಸರ್ಕಾರ್ ಮತ್ತು ಡೇವಿಡ್ ಹಾರ್ಡಿಮನ್ ಇನ್ನು ಮುಂತಾದವರು ಈ ಹಿನ್ನೆಲೆಯಲ್ಲಿಯೇ ತಮ್ಮ ವಿಚಾರಗಳನ್ನು ಮಂಡಿಸಿದರು.[೯]

ಕರ್ನಾಟಕ ಚರಿತ್ರೆ ಬರವಣಿಗೆಯು ಹೆಚ್ಚು ಕಡಿಮೆ ರಾಷ್ಟ್ರೀಯವಾದಿ ಮತ್ತು ಸಾಮ್ರಾಜ್ಯಶಾಹಿ ಪಂಥಗಳ ವಾದ–ಪ್ರತಿವಾದಗಳಿಗೆ ಸೀಮಿತವಾಗಿದ್ದು, ವೈಭವೀಕೃತ, ರಾಜಕೀಯ ಕೇಂದ್ರೀಕೃತ, ಜಾತಿ ಪ್ರಧಾನ ಬರವಣಿಗೆಗಳಿಗಷ್ಟೇ ಸೀಮಿತಗೊಂಡಿದೆ, ಮಾರ್ಕ್ಸವಾದಿ ಮತ್ತು ಸಬಾಲ್ಟರ್ನ್ ಹಿನ್ನೆಲೆಯ ಬರವಣಿಗೆಗಳು ಮತ್ತು ಕರ್ನಾಟಕದ ಸ್ವಾತಂತ್ರ್ಯ ಹೋರಾಟದ ಕುರಿತು ಬಂದಿರುವ ಪುಸ್ತಕಗಳಲ್ಲಿ ಹಾಗೂ ತುಮಕೂರು ಜಿಲ್ಲೆಯ ಸ್ವಾತಂತ್ರ್ಯ ಹೋರಾಟದ ಕುರಿತು ಬಂದಿರುವ ಪುಸ್ತಕಗಳಲ್ಲಿ ತುಮಕೂರು ಜಿಲ್ಲೆಯಲ್ಲಿ ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳನ್ನು ಕುರಿತು ಅಲ್ಲೊಂದು, ಇಲ್ಲೊಂದು ವಿವರಗಳಷ್ಟೇ ಸಿಗುತ್ತವೆ. ಭಾರತದ ಸಂದರ್ಭದಲ್ಲಿ ನಡೆದ ಸ್ವಾತಂತ್ರ್ಯ ಹೋರಾಟದ ಕುರಿತು, ಅದರಲ್ಲೂ ಸ್ವದೇಶಿ ಚಳುವಳಿಯನ್ನು

ಕುರಿತು ಅನೇಕ ಕೃತಿಗಳು ಬಂದಿವೆ. ಬಿಪನ್ ಚಂದ್ರ ಮತ್ತಿತರರು ಸೇರಿ ಬರೆದಿರುವ "ಇಂಡಿಯಾಸ್ ಸ್ಟ್ರಗಲ್ ಫಾರ್ ಇಂಡಿಪೆಂಡೆನ್ಸ್[೧೦] ಮತ್ತು ಫ್ರೀಡಮ್ ಸ್ಟ್ರಗಲ್",[೧೧] ಸುಮಿತ್ ಸರ್ಕಾರ್ ಅವರ "ಮಾಡರ್ನ್ ಇಂಡಿಯಾ[೧೨] ಮತ್ತು "ದಿ ಸ್ವದೇಶಿ ಮೂವ್‌ಮೆಂಟ್ ಇನ್ ಬೆಂಗಾಳ್",[೧೩] ಜೂಡಿತ್ ಎಂ. ಬ್ರೌನ್, ಅವರ "ಗಾಂಧೀ ಪ್ರಿಸನರ್ ಆಫ್ ಹೋಪ್"[೧೪] ಇವು ಈ ನಿಟ್ಟಿನಲ್ಲಿ ಹೆಸರಿಸಬಹುದಾದ ಕೆಲವು ಕೃತಿಗಳು.

ಕರ್ನಾಟಕದ ಸ್ವಾತಂತ್ರ್ಯ ಹೋರಾಟವನ್ನು ಕುರಿತು ಬಂದಿರುವ ಪುಸ್ತಕಗಳಲ್ಲಿ ತುಮಕೂರು ಜಿಲ್ಲೆಯಲ್ಲಿ ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳನ್ನು ಕುರಿತು ಮಾಹಿತಿ ನೀಡುವ ಕೆಲವು ಕೃತಿಗಳು ಲಭ್ಯವಿವೆ ಅವುಗಳೆಂದರೆ ಡಾ. ಸೂರ್ಯನಾಥ್ ಕಾಮತ್ ಅವರ "ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು"(ಸಂ) ೧, ೨, ೩,[೧೫] ಸಿದ್ಧವ್ವನಹಳ್ಳಿ ಕೃಷ್ಣಶರ್ಮರವರ "ಗಾಂಧಿ ಮತ್ತು ಕರ್ನಾಟಕ"[೧೬] ದೇ. ಜವರೇಗೌಡರವರ "ಸರ್ವೋದಯ ಪಥ",[೧೭] ಸಿ.ಎನ್. ಭಾಸ್ಕರಪ್ಪರವರ "ತುಮಕೂರು ಜಿಲ್ಲಾದರ್ಶನ",[೧೮] ಶ್ರೀಮತಿ ಬಿ.ಆರ್. ಪುಟ್ಟಗಂಗಮ್ಮರವರ "ಕೆ.ಎಸ್. ರಾಜಪ್ಪನವರ ಜೀವನ ಚರಿತ್ರೆ ಸಾಧನೆ ಮತ್ತು ಸಿದ್ಧಿ",[೧೯] ಮಾಲಿಮುದ್ದಣ್ಣನವರ "ಮಾಲಿಮರಿಯಪ್ಪ",[೨೦] ಕವಿತಾ ಕೃಷ್ಣರವರ "ಸ್ವಾತಂತ್ರ್ಯಶ್ರೀ"[೨೧] ಮತ್ತು "ಸರ್ವೋದಯ ಕಿರಣ", "ಟಿ.ಎ. ದಾಸಪ್ಪ",[೨೨] ತುಮಕೂರು ಜಿಲ್ಲೆಯ ಚಲೇ ಜಾವ್ ಚಳವಳಿಯ ೫೦ ನೇ ವಾರ್ಷಿಕೋತ್ಸವದ ಸ್ಮರಣ ಸಂಚಿಕೆ,[೨೩] ಬಿ. ನಂಜುಂಡಸ್ವಾಮಿಯವರ ಕಲ್ಪಸಿರಿ, ಅಖಿಲ ಭಾರತ ೬೯ನೇ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆ,[೨೪] ತಿರುಮಲೆ ಅನಂತರಂಗಾಚಾರ್‌ರವರ "ತುಮಕೂರು ಜಿಲ್ಲೆಯಲ್ಲಿ ಪೂಜ್ಯ ವಿನೋಭಾ",[೨೫] ಎಂ.ವಿ. ಮೂಡ್ಲ ಗಿರೀಶ್‌ರವರ "ಮಧುಗಿರಿ ಗಾಂಧಿ ಎಂ. ಪುಟ್ಟತಿಮ್ಮಯ್ಯ",[೨೬] ತಾಳೆಕೆರೆ ಸುಬ್ರಮಣ್ಯಂರವರ ಜನ್ಮ ಶತಮಾನೋತ್ಸವದ ಸ್ಮರಣ ಸಂಚಿಕೆ.[೨೭] ಸ್ವಾತಂತ್ರ್ಯ ಯೋಧರ ಮತ್ತು ಉತ್ತರಾಧಿಕಾರಿಗಳ ಕ್ವಿಟ್ ಇಂಡಿಯಾ ಚಳುವಳಿಯ ಸುವರ್ಣ ಮಹೋತ್ಸವದ ಸ್ಮರಣ ಸಂಚಿಕೆ,[೨೮] ಜಿಲ್ಲಾ ಹಿಂದಿ ಪ್ರಚಾರ ಸಮಿತಿಯ ರಜತ ಮಹೋತ್ಸವ ಸಂಚಿಕೆ,[೨೯] ಹೆಚ್.ಎಸ್. ದೊರೆಸ್ವಾಮಿಯವರ "ನೆನಪಿನ ಸುರುಳಿ ತೆರೆದಾಗ",[೩೦] ಮಾದೇವ್ ಭರಣೀಯವರ "ಶಿಕ್ಷಣ ಭೀಷ್ಮ"[೩೧] ಮುಂತಾದವು ಈ ನಿಟ್ಟಿನಲ್ಲಿ ಹೆಸರಿಸಬಹುದಾದ ಕೆಲವು ಕೃತಿಗಳು. ಈ ಕೃತಿಗಳ ಜೊತೆಗೆ ಖಾಸಗಿ ದಾಖಲೆಗಳು, ದಿನಪತ್ರಿಕೆಗಳು, ಮೌಖಿಕ ಸಂದರ್ಶನಗಳು ಮತ್ತು ಕ್ಷೇತ್ರಕಾರ್ಯ ಮುಂತಾದ ಆಕರಗಳನ್ನು ಪ್ರಸ್ತುತ ಅಧ್ಯಯನಕ್ಕೆ ಉಪಯೋಗಿಸಿಕೊಳ್ಳಲಾಗಿದೆ. ಅವುಗಳ ಮೂಲಕ ಈ ವಿಷಯಕ್ಕೆ ಸಂಬಂಧಪಟ್ಟ ಮಾಹಿತಿಗಳನ್ನು ಸಂಗ್ರಹಿಸಿಕೊಳ್ಳಲಾಗಿದೆ. ಆದರಲ್ಲೂ ತುಮಕೂರು ಜಿಲ್ಲೆಯಲ್ಲಿ ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳನ್ನು ಕುರಿತು ಅಧ್ಯಯನ ನಡೆಸಲಾಗಿದೆ.

## ಉದ್ದೇಶ

ತುಮಕೂರು ಜಿಲ್ಲೆಯಲ್ಲಿ ನಡೆದ ಗಾಂಧೀಜಿ ಅವರ ರಚನಾತ್ಮಕ ಕಾರ್ಯಕ್ರಮಗಳ ವಿವಿಧ ಮಜಲುಗಳನ್ನು ಗುರುತಿಸುವಾಗ ಬ್ರಿಟಿಷ್ ಬಂಡವಾಳಶಾಹಿ ಧೋರಣೆಯನ್ನು ತನ್ನ ಕಾರ್ಯಾಚರಣೆಯ ಮೂಲಕ ಇವು ಪ್ರಶ್ನಿಸಿರುವುದು, ಹಾಗೂ ಸಾಧ್ಯವಾದಷ್ಟು ಮಟ್ಟಿಗೆ ಪರ್ಯಾಯ ವ್ಯವಸ್ಥೆಯೊಂದನ್ನು ಹುಟ್ಟು ಹಾಕುವತ್ತ ಹೆಜ್ಜೆ ಹಾಕಿರುವುದು ತಿಳಿದು ಬರುತ್ತದೆ. ಈ ಕಾರ್ಯಕ್ರಮಗಳನ್ನು ಕುರಿತು ಹೆಚ್ಚಿನ ಅಧ್ಯಯನಗಳು ನಡೆದಿಲ್ಲ. ಕರ್ನಾಟಕದ ಸ್ವಾತಂತ್ರ್ಯ ಹೋರಾಟದ ಕುರಿತು ಬಂದಿರುವ ಪುಸ್ತಕಗಳಲ್ಲಿ ತುಮಕೂರು ಜಿಲ್ಲೆಯಲ್ಲಿ ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳನ್ನು ಕುರಿತು, ಅಲ್ಲೊಂದು ಇಲ್ಲೊಂದು ವಿವರಗಳಷ್ಟೇ ಸಿಗುತ್ತವೆ. ಪ್ರಸ್ತುತ ಅಧ್ಯಯನವು ತುಮಕೂರು ಜಿಲ್ಲೆಯಲ್ಲಿ ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳ ಸ್ವರೂಪವನ್ನು ಗುರುತಿಸುವ ಉದ್ದೇಶವನ್ನು ಇಟ್ಟುಕೊಂಡಿದೆ. ಹಾಗಾಗಿ ಪ್ರಸ್ತುತ ಅಧ್ಯಯನವು ಹಲವಾರು ಸೂಕ್ಷ್ಮ ವಿಚಾರಗಳತ್ತ ಗಮನ ಸೆಳೆಯುವ ಉದ್ದೇಶವನ್ನು ಇಟ್ಟುಕೊಂಡಿದೆ. ಪ್ರಸ್ತುತ ಅಧ್ಯಯನದಲ್ಲಿ ಒಟ್ಟು ೭ ಅಧ್ಯಾಯಗಳಿವೆ. ಅಧ್ಯಾಯ ಒಂದರಲ್ಲಿ ರಚನಾತ್ಮಕ ಕಾರ್ಯಕ್ರಮಗಳ ಪ್ರಸ್ತಾವನೆ ಮತ್ತು ಉದ್ದೇಶ ಮತ್ತು ವ್ಯಾಪ್ತಿ ಬಗ್ಗೆ ಚರ್ಚಿಸಲಾಗಿದೆ. ಅಧ್ಯಾಯ ಎರಡರಲ್ಲಿ ಸ್ವದೇಶಿ ಆಂದೋಲನ, ಖಾದಿ ಪ್ರಚಾರ, ವಿದೇಶಿ ಬಹಿಷ್ಕಾರ ಮತ್ತು ಗ್ರಾಮೋದ್ಯೋಗಗಳನ್ನು ಕುರಿತು ಚರ್ಚೆ ನಡೆಸಲಾಗಿದೆ. ಸ್ವದೇಶಿ ಎಂದರೆ ಸ್ವದೇಶಿಯದಲ್ಲಿ ತಯಾರಾದಂತಹ ವಸ್ತುಗಳನ್ನು ಮಾತ್ರ ಬಳಸುವುದು ಮತ್ತು ರಾಷ್ಟ್ರೀಯತೆಯನ್ನು ಜನರಲ್ಲಿ ಮೂಡಿಸುವುದು, ದೇಶದ ಬಗ್ಗೆ ಪ್ರೀತಿ ಮತ್ತು ಗೌರವ ಭಾವನೆ ಮೂಡುವಂತೆ ಜಾಗೃತಿಗೊಳಿಸುವುದು. ಸ್ವದೇಶಿ ಎಂದರೆ ಸ್ವಂತ ದೇಶದ ಕಲ್ಪನೆ ಎಂದು ಹೇಳಬಹುದು. ಸ್ವದೇಶಿ ಎಂಬ ಭಾವನೆ ಮೊದಲು ಕಾಣಿಸಿಕೊಂಡಿದ್ದು ಬಂಗಾಳದಲ್ಲಿ, ನಂತರ ಎಲ್ಲ ಪ್ರದೇಶಗಳಿಗೂ ಇದು ಪ್ರಭಾವ ಬೀರಿತು. ಸ್ವದೇಶಿಯಲ್ಲಿ ತಯಾರಾದಂತಹ ವಸ್ತುಗಳನ್ನು ಮಾತ್ರ ಉಪಯೋಗಿಸಬೇಕು ಎಂಬುದು ಸ್ವದೇಶಿಯ ಅರ್ಥ. ವಿದೇಶಿ ಎಂದರೆ ಹೊರಗಿನವರು, ಅನ್ಯರು ಅಥವಾ ಬ್ರಿಟಿಷರು, ಅವರ ವಸ್ತುಗಳನ್ನು ಬಹಿಷ್ಕರಿಸುವುದು ಇದರ ಉದ್ದೇಶ. ವಿದೇಶಗಳಲ್ಲಿ ತಯಾರಾದಂತಹ ವಸ್ತುಗಳನ್ನು ಸ್ವದೇಶದಲ್ಲಿ ಯಾರೂ ಉಪಯೋಗಿಸಬಾರದು. ಅದರ ಪ್ರಭಾವದಿಂದ ದೇಶಿಯ ವಸ್ತುಗಳು ಮೂಲೆ ಗುಂಪಾಗುತ್ತವೆ ಹಾಗೂ ದೇಶೀಯ ಬಂಡವಾಳದ ಬೆಳವಣಿಗೆಯೂ ಕುಂಠಿತವಾಗುತ್ತದೆ ಎನ್ನುವುದು ಸ್ವದೇಶಿ ಸಿದ್ಧಾಂತ. ಸ್ವದೇಶದಲ್ಲಿ ತಯಾರಾದಂತಹ ವಸ್ತುಗಳನ್ನು ಮಾತ್ರ ಉಪಯೋಗಿಸಬೇಕು, ವಿದೇಶಿ ವಸ್ತುಗಳನ್ನು ಬಹಿಷ್ಕರಿಸಬೇಕು ಎಂಬ ಮಂತ್ರ ರಾಷ್ಟ್ರೀಯ ನಾಯಕರದಾಗಿತ್ತು. ತುಮಕೂರು ಜಿಲ್ಲೆಯಲ್ಲಿನ ಖಾದಿ ಪ್ರಚಾರ, ವಿದೇಶಿ ಬಹಿಷ್ಕಾರ, ಗ್ರಾಮೋದ್ಯೋಗಗಳ ಬಗೆಗಿನ ವಿವರಣೆ ಬಹಳ ಕುತೂಹಲಕಾರಿಯಾಗಿದ್ದು ಅದರ ಸಂಕ್ಷಿಪ್ತ ವಿಶ್ಲೇಷಣೆಯನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

ಅಧ್ಯಾಯ ಮೂರರಲ್ಲಿ ಅಸ್ಪೃಶ್ಯತಾ ನಿವಾರಣೆಯ ಕುರಿತು ವಿಶ್ಲೇಷಣೆ ಮಾಡಲಾಗಿದೆ. ಅಸ್ಪೃಶ್ಯರು ಎಂದರೆ ಹರಿಜನರು, ದಲಿತವರ್ಗದವರು. ಇವರು ಮೇಲ್ವರ್ಗದವರ ಗುಲಾಮಗಿರಿ ಸೇವೆ ಹಾಗೂ ಅವರ ವಂಶಪಾರಂಪರ್ಯವಾಗಿರುವ ಸೇವೆಗಳಲ್ಲಿ ನಿರತರಾಗಿದ್ದವರು. ಗಾಂಧೀಜಿಯವರ ಯಂಗ್ ಇಂಡಿಯಾ ಪತ್ರಿಕೆಯಲ್ಲಿ ಹರಿಜನೋದ್ಧಾರದ ಬಗ್ಗೆ ಲೇಖನಗಳನ್ನು ಬರೆದರು, ಅಲ್ಲದೆ ೧೯೩೨ ರಲ್ಲಿ ಹರಿಜನರ ಸಮಸ್ಯೆ ನಿವಾರಣೆಗಾಗಿ ದೇವಾಲಯ ಪ್ರವೇಶ, ಸಹಪಂಕ್ತಿ ಭೋಜನ ಮುಂತಾದ ಆಂದೋಲನಗಳಲ್ಲಿ ತೊಡಗಿಸಿಕೊಂಡಾಗ ಇವರ ಪ್ರಭಾವಕ್ಕೆ ಒಳಗಾದ ತುಮಕೂರು ಜಿಲ್ಲೆಯ ಕಾಂಗ್ರೆಸ್ ಕಾರ್ಯಕರ್ತರು ಯಾವ ರೀತಿ ಸ್ಪಂದಿಸಿ ಕಾರ್ಯ ರೂಪಕ್ಕೆ ತಂದರು ಎಂಬುದನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಪಾನನಿರೋಧ ಚಳವಳಿಯನ್ನು ಕುರಿತು ವಿಶ್ಲೇಷಣೆ ಮಾಡಲಾಗಿದೆ. ಭಾರತದಲ್ಲಿ ಮಾದಕ ಪದಾರ್ಥಗಳಿಗೆ ಅವಕಾಶವಿರಕೂಡದು, ಹರಿಜನಾಭಿವೃದ್ಧಿಯಾಗ ಬೇಕಾದರೆ ಉತ್ತಮ ನಾಗರಿಕ ಸಾಂಸಾರಿಕ ವಾತಾವರಣವಿರಬೇಕಾದರೆ, ಬೆಳೆಯುತ್ತಿರುವ ಮಕ್ಕಳ ಗುಣ, ಉತ್ಕೃಷ್ಟ ರೂಪ ಪಡೆಯಬೇಕಾದಲ್ಲಿ ಪಾನ ನಿರೋಧವನ್ನು ಕಡ್ಡಾಯವಾಗಿ ಜಾರಿಗೆ ತರಬೇಕು ಎಂಬುದು ಗಾಂಧೀಜಿಯವರ ಅಭಿಪ್ರಾಯವಾಗಿತ್ತು. ಉಪ್ಪಿನ ಕಾನೂನು ಚಳುವಳಿಯ ಸಮಯದಲ್ಲಿ ತುಮಕೂರು ಜಿಲ್ಲೆಯ ಕಾಂಗ್ರೆಸ್ ಕಾರ್ಯಕರ್ತರು ಮದ್ಯದ ಅಂಗಡಿಗಳ ಮುಂದೆ ನಡೆಸಿದ ಪಿಕೆಟಿಂಗ್ ಕಾರ್ಯಕ್ರಮಗಳು ಮತ್ತು ತುಮಕೂರು ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಡಿಯಲ್ಲಿ ಮಾಲಿಮರಿಯಪ್ಪನವರು ಕೈಗೊಂಡ ಅರಣ್ಯ ಸತ್ಯಾಗ್ರಹ, ಕ್ವಿಟ್ ಇಂಡಿಯಾ ಚಳುವಳಿ ಮತ್ತು ಮೈಸೂರು ಚಲೋ ಚಳುವಳಿಯ ಸಮಯದಲ್ಲಿ ಜಿಲ್ಲೆಯಲ್ಲಿ ನಡೆದ ಪಾನನಿರೋಧ ಚಟುವಟಿಕೆಗಳನ್ನು ಕುರಿತು ಚರ್ಚಿಸಲಾಗಿದೆ.

ಅಧ್ಯಾಯ ಐದರಲ್ಲಿ ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮವಾದ ಹಿಂದಿ ಪ್ರಚಾರ ಕುರಿತು ಚರ್ಚಿಸಲಾಗಿದೆ. ಗಾಂಧಿ ತತ್ವಾನುಸಾರ ಕಾರ್ಯಕ್ರಮದಲ್ಲಿ ತೊಡಗಿ ರಾಷ್ಟ್ರ ಭಾಷಾ ಹಿಂದಿ ಪ್ರಚಾರ, ರಾಷ್ಟ್ರೀಯ ಭಾವೈಕ್ಯತೆ, ರಾಷ್ಟ್ರೀಯ ಉತ್ಸವಗಳನ್ನು ನಡೆಸುತ್ತಿರುವ ತುಮಕೂರು ಜಿಲ್ಲೆಯ ಹಿಂದಿ ಪ್ರಚಾರ ಸಮಿತಿಯು ಜಿಲ್ಲೆಯಲ್ಲಿ ನಡೆಸಿದ ಹಿಂದಿ ಪ್ರಚಾರ ಕಾರ್ಯಕ್ರಮಗಳು, ಕಾಂಗ್ರೆಸ್ಸಿನ ಕಾರ್ಯಕರ್ತರು ಕೈಗೊಂಡ ಹಿಂದಿ ಪ್ರಚಾರ ಕಾರ್ಯಗಳು, ಸ್ವಯಂ ಸೇವಕರು, ಸ್ವಯಂ ಪ್ರೇರಣೆಯಿಂದ ನಡೆಸಿದ ಹಿಂದಿ ಪ್ರಚಾರ ಕಾರ್ಯಕ್ರಮಗಳ ಬಗ್ಗೆ ಚರ್ಚಿಸಿಲಾಗಿದೆ.

ಅಧ್ಯಾಯ ಆರರಲ್ಲಿ ಗಾಂಧೀಜಿಯವರ ಪ್ರಮುಖ ರಚನಾತ್ಮಕ ಕಾರ್ಯಕ್ರಮಗಳಾದ ಗ್ರಾಮೀಣಾಭಿವೃದ್ಧಿ ಮತ್ತು ಸರ್ವೋದಯವನ್ನು ಕುರಿತು ವಿಶ್ಲೇಷಿಸಲಾಗಿದೆ. ನಿಜವಾದ ಭಾರತ ಇರುವುದು ತನ್ನ ಏಳು ಲಕ್ಷ ಹಳ್ಳಿಗಳಲ್ಲಿ, ಈ ಹಳ್ಳಿಗಳು ದೇಶದ ಬದುಕಿನಲ್ಲಿ ತಮ್ಮ ಸೂಕ್ತ

ಪಾತ್ರವನ್ನು ನಿರ್ವಹಿಸದಿದ್ದರೆ ಭಾರತಕ್ಕೆ ಭವಿಷ್ಯ ಎಂಬುದು ಇರುವುದಿಲ್ಲ, ಪ್ರತಿಯೊಂದು ಹಳ್ಳಿಯೂ ತನ್ನನ್ನು ತಾನು ಆಳಿಕೊಳ್ಳಬೇಕು. ಸ್ವಾವಲಂಬಿಯಾಗಿರಬೇಕು ಎಂಬುದು ಗಾಂಧೀಜಿಯವರ ಗ್ರಾಮ ಸ್ವರಾಜ್ಯದ ಯೋಜನೆ. ಜಿಲ್ಲೆಯಲ್ಲಿ ಗ್ರಾಮಸ್ವರಾಜ್ಯದ ಅಂಗವಾಗಿ ನಡೆದ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮವನ್ನು ಕಾಂಗ್ರೆಸ್ಸಿಗರು ಹೇಗೆ ಕಾರ್ಯಗತಗೊಳಿಸಿದರು ಎಂಬುದನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ. ರಾಷ್ಟ್ರೀಯ ಪ್ರಜ್ಞೆಯನ್ನು ವಿದ್ಯಾರ್ಥಿಗಳಲ್ಲಿ ಮೂಡಿಸುವ ದೃಷ್ಟಿಯಿಂದ ಜಿ.ವಿ. ನಾರಾಯಣಮೂರ್ತಿ ಮತ್ತು ಸಿ.ಹೆಚ್. ಲಿಂಗದೇವರು ಇಬ್ಬರು ೧೯೪೩ ರಲ್ಲಿ ಚಿಕ್ಕನಾಯಕನಹಳ್ಳಿಯಲ್ಲಿ ದೇಶೀಯ ವಿದ್ಯಾಪೀಠ ಎಂಬ ರಾಷ್ಟ್ರೀಯ ಶಿಕ್ಷಣ ಸಂಸ್ಥೆಯನ್ನು ಹಾಗೂ ಜಿ.ವಿ. ನಾರಾಯಣಮೂರ್ತಿ, ನರಸಿಂಹಯ್ಯನವರು ತುರುವೇಕೆರೆ ತಾಲ್ಲೂಕಿನ ಮಾಯಸಂದ್ರದಲ್ಲಿ ಸರ್ವೋದಯ ಶಿಕ್ಷಣ ಸಮಿತಿಯ ಸ್ಥಾಪನೆ ಮತ್ತು ಅದರ ಪ್ರಗತಿಯ ಬಗ್ಗೆ ವಿವರಿಸಲಾಗಿದೆ. ಸರ್ವೋದಯ ಚಳುವಳಿಯ ಅಂಗವಾಗಿ ಆಚಾರ್ಯ ವಿನೋಭಾ ಭಾವೆಯವರು ತುಮಕೂರು ಜಿಲ್ಲೆಯಲ್ಲಿ ನಡೆಸಿದ ಭೂದಾನ ಚಳುವಳಿಯ ಪ್ರಭಾವದಿಂದಾಗಿ ನಂತರ ಜಿಲ್ಲೆಯಲ್ಲಿ ನಡೆದ ಭೂದಾನ, ಸರ್ವೋದಯ ಕಾರ್ಯಕ್ರಮಗಳ ಬಗ್ಗೆ ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಗಾಂಧೀಜಿಯವರ ಪ್ರಮುಖ ರಚನಾತ್ಮಕ ಕಾರ್ಯಕ್ರಮಗಳಾದ ಗೋಹತ್ಯೆ ನಿಷೇಧ, ವಯಸ್ಕರ ಶಿಕ್ಷಣ, ರಾಷ್ಟ್ರೀಯ ಶಿಕ್ಷಣ, ಹಿಂದೂ-ಮುಸ್ಲಿಮ್ ಐಕತ್ಯೆ, ಗ್ರಾಮನೈರ್ಮಲ್ಯಗಳನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಕೊನೆಯ ಅಧ್ಯಾಯದಲ್ಲಿ ಒಟ್ಟಾರೆಯಾಗಿ ತುಮಕೂರು ಜಿಲ್ಲೆಯಲ್ಲಿ ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳು ಹೇಗೆ ಯಶಸ್ವಿಯಾಗಿ ನಡೆದವು ಎಂಬುದರ ಬಗ್ಗೆ ವಿವರಣೆ ನೀಡಲಾಗಿದೆ.

## ವ್ಯಾಪ್ತಿ

ತುಮಕೂರು ಕರ್ನಾಟಕದ ಒಂದು ಪ್ರಮುಖ ಜಿಲ್ಲೆ. ಇದು ಕರ್ನಾಟಕದ ಸ್ವಾತಂತ್ರ್ಯ ಚಳುವಳಿಯಲ್ಲಿ ಮತ್ತು ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಪ್ರಮುಖ ಪಾತ್ರ ವಹಿಸಿತು. ತುಮಕೂರು ಜಿಲ್ಲೆಯ ಪ್ರಮುಖ ಕೇಂದ್ರ ಸ್ಥಾನ. ಇದನ್ನು ಮೊದಲು ಕೈದಿಪುರ ಎಂದು ಕರೆಯಲಾಗಿತ್ತು. ಅಂದರೆ ಇಂದು ಚಿಕ್ಕಹಳ್ಳಿಯಾಗಿರುವ ಕೈದಾಳ. ಇದು ತುಮಕೂರಿನಿಂದ ದಕ್ಷಿಣಕ್ಕೆ ಮೂರು ಮೈಲಿ ದೂರದಲ್ಲಿದೆ.[೨]

ಈ ಜಿಲ್ಲೆಗೆ ತುಮಕೂರು ಎಂದು ಹೆಸರು ಬರಲು ಎರಡು ಕಾರಣಗಳಿವೆ. ಒಂದು ಟುಮಕಿ + ಊರು ಅಂದರೆ ಟುಮಕಿ (ಡಂಗರು) ಹೊಡೆಯುವ ಪ್ರಸಿದ್ಧ ನಗರ ಎಂದು,

ಮತ್ತೊಂದು ಪವಿತ್ರವಾದ ತುಂಬೆಗ + ಊರು ಅಂದರೆ ತುಂಬೆ ಹೂಗಳ ಊರು ಎಂದು ಆದ್ದರಿಂದ ಇದಕ್ಕೆ ತುಮ್ಮೂರು ಎಂದು ಕರೆಯಲಾಯಿತು.[೩೩] ಹತ್ತನೆಯ ಶತಮಾನದ ಶಾಸನ ಪ್ರಕಾರ ಮೈಸೂರು ಅರಸು ಮನೆತನದ ಸದಸ್ಯನಾದ ಕಂಟಿ ಅರಸು ಎಂಬುವರಿಂದ ಕಟ್ಟಲ್ಪಟ್ಟಿತೆಂದು ಹೇಳುತ್ತದೆ. ಈ ರೀತಿ ಈ ಜಿಲ್ಲೆಯನ್ನು ಟುಮಕೀಲೂರು, ತುಮ್ಮಲೂರು ಎಂದು ಕೊನೆಗೆ ತುಮಕೂರು ಎಂದು ಕರೆಯುವುದು ವಾಡಿಕೆಯಲ್ಲಿ ಬಂತು.

ಭೌಗೋಳಿಕವಾಗಿ ಪ್ರಸ್ತುತ ಅಧ್ಯಯನವು ತುಮಕೂರು ಜಿಲ್ಲೆಯ ೧೦ ತಾಲ್ಲೂಕುಗಳನ್ನು ಒಳಗೊಂಡಿದೆ. ತುಮಕೂರು ಕರ್ನಾಟಕ ರಾಜ್ಯದ ಒಂದು ಪ್ರಮುಖ ಜಿಲ್ಲೆಯಾಗಿದ್ದು ಜಿಲ್ಲೆಯ ಉತ್ತರಕ್ಕೆ ಆಂಧ್ರದ ಅನಂತಪುರ ಜಿಲ್ಲೆಯೂ, ಪೂರ್ವಕ್ಕೆ ಕೋಲಾರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಗಳೂ, ದಕ್ಷಿಣಕ್ಕೆ ಮಂಡ್ಯ ಜಿಲ್ಲೆಯೂ, ಪಶ್ಚಿಮಕ್ಕೆ ಚಿತ್ರದುರ್ಗ ಮತ್ತು ಚಿಕ್ಕಮಗಳೂರು, ಹಾಸನ ಜಿಲ್ಲೆಗಳಿಂದ ಆವೃತ್ತವಾಗಿದೆ.[೩೪] ಈ ಜಿಲ್ಲೆಯು ತುಮಕೂರು, ಮಧುಗಿರಿ, ಕೊರಟಗೆರೆ, ಶಿರಾ, ಪಾವಗಡ, ಚಿಕ್ಕನಾಯಕನಹಳ್ಳಿ, ಗುಬ್ಬಿ, ತಿಪಟೂರು, ತುರುವೇಕೆರೆ ಮತ್ತು ಕುಣಿಗಲ್ಲು ಎಂಬ ಹತ್ತು ತಾಲ್ಲೂಕುಗಳನ್ನೊಳಗೊಂಡಿದೆ. ಪೌರಾಣಿಕ ಕಾಲದಿಂದಲೂ ಪ್ರಸಿದ್ಧಿ ಪಡೆದಿರುವ ತುಮಕೂರು ಜಿಲ್ಲೆಯೂ ಪ್ರಾಕ್‌ಚಾರಿತ್ರಿಕ ಯುಗದ ಅವಶೇಷಗಳಿಗೂ ಪ್ರಸಿದ್ಧವಾಗಿದೆ. ಇತಿಹಾಸ ಕಾಲದಿಂದಲೂ ಕರ್ನಾಟಕ ರಾಜಕೀಯ ಇತಿಹಾಸಕ್ಕೆ ಈ ಜಿಲ್ಲೆಯ ಕೊಡುಗೆ ಗಣನೀಯವಾಗಿದೆ.

ತುಮಕೂರು ಜಿಲ್ಲೆಯ ಕಾಂಗ್ರೆಸ್ ಮುಖಂಡರಾದ ಕೆ. ರಂಗೈಯ್ಯಂಗಾರ್ ಮತ್ತು ಟಿ. ಸುಬ್ರಮಣ್ಯಂರವರು ೧೯೨೪ ರಲ್ಲಿ ನಡೆದ ಬೆಳಗಾಂ ಕಾಂಗ್ರೆಸ್ ಅಧಿವೇಶನಕ್ಕೆ ಹೋಗಿ ಅಲ್ಲಿ ಗಾಂಧೀಜಿಯ ನೇತೃತ್ವದಲ್ಲಿ ನಡೆದ ರಚನಾತ್ಮಕ ಕಾರ್ಯಕ್ರಮಗಳನ್ನು ಕಂಡು ಅವುಗಳನ್ನು ಪ್ರಚಾರ ಮಾಡುವ ಪ್ರತಿಜ್ಞೆಯನ್ನು ಕೈಗೊಂಡು ತುಮಕೂರು ಜಿಲ್ಲೆಗೆ ಬಂದ ನಂತರ ಖಾದಿ ಪ್ರಚಾರ, ಹರಿಜನೋದ್ಧಾರ, ಅಸ್ಪೃಶ್ಯತಾ ನಿವಾರಣೆ, ಪಾನನಿರೋಧ, ಹಿಂದೂ-ಮುಸ್ಲಿಮ್ ಐಕ್ಯತೆ, ಹಿಂದಿ ಪ್ರಚಾರ ಮುಂತಾದ ರಚನಾತ್ಮಕ ಕಾರ್ಯಕ್ರಮಗಳನ್ನು ಪ್ರಚಾರ ಮಾಡಿ ಯಶಸ್ವಿಗೊಳಿಸಿದರು. ಕಾಂಗ್ರೆಸ್ ನಾಯಕರು ಈ ಕಾರ್ಯಕ್ರಮಗಳನ್ನು ಸ್ವಾತಂತ್ರ್ಯ ಚಳವಳಿಯ ಜೊತೆಯಲ್ಲಿಯೇ ಪ್ರಚಾರ ಮಾಡಿ ಅನುಷ್ಠಾನಗೊಳಿಸುವ ಪ್ರಯತ್ನವನ್ನು ಮಾಡಿದುದರ ಬಗ್ಗೆ ಪ್ರಸ್ತುತ ಅಧ್ಯಯನದಲ್ಲಿ ಕೂಲಂಕುಷವಾಗಿ ಚರ್ಚಿಸಲಾಗಿದೆ.

ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳ ಸ್ವರೂಪ ಮತ್ತು ಅವುಗಳ ವಿವಿಧ ಆಯಾಮಗಳನ್ನು ಗುರುತಿಸುವ ಹಾಗೂ ತುಮಕೂರು ಜಿಲ್ಲೆಯ ಕಾಂಗ್ರೆಸ್ ಮುಖಂಡರು ಹಮ್ಮಿಕೊಂಡ ರಚನಾತ್ಮಕ ಕಾರ್ಯಕ್ರಮಗಳ ಆಯಾಮಗಳನ್ನು ಗುರುತಿಸುವ ಪ್ರಯತ್ನವನ್ನು ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ.

## ಅಡಿಟಿಪ್ಪಣಿಗಳು

೧. ವೀರತಪ್ಪ ಕೆ., ಮೈಸೂರು ಸಂಸ್ಥಾನದಲ್ಲಿ ಸ್ವಾತಂತ್ರ್ಯ ಚಳುವಳಿ, ಬೆಂಗಳೂರು, ೧೯೭೭, ಪು.೯

೨. ಮೌಲಾನ್ ಅಬ್ದುಲ್ ಕಲಾಂ ಅಜಾದ್ (ಸಂ), ಗಾಂಧೀಯನ್ ಔಟ್ ಲುಕ್ ಅಂಡ್ ಟೆಕ್ನಿಕ್ಸ್ ಭಾರತ ಸರ್ಕಾರ, ದೆಹಲಿ, ೧೯೫೩, ಪು.೩೪೯

೩. ಗೋಪಾಲರಾವ್ ಎಚ್.ಎಸ್.(ಸಂ), ಕರ್ನಾಟಕ ಏಕೀಕರಣ ಇತಿಹಾಸ, ನವಕರ್ನಾಟಕ ಪ್ರಕಾಶನ, ೧೯೯೬, ಪು.೭೩

೪. ಮುನ್ನೇಗೌಡ ಕೆ.ಎಸ್., ಡೆವಲಪ್‌ಮೆಂಟ್ ಆಫ್ ಕರ್ನಾಟಕ ಲೆಜಿಸ್ಲೇಚರ್, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ೧೯೮೮, ಪು.೧೦೦–೧೦೧

೫. ವೀರತಪ್ಪ ಕೆ., ರೀಡಿಂಗ್ಸ್ ಇನ್ ಮಾಡರ್ನ್ ಹಿಸ್ಟರಿ ಆಪ್ ಮೈಸೂರ್, ಎಸ್. ಚಂದ್ ಅಂಡ್ ಕಂಪನಿ ಲಿಮಿಟೆಡ್, ನ್ಯೂಡೆಲ್ಲಿ, ೧೯೮೫, ಪು.೬

೬. ಚಂದ್ರಶೇಖರ್ ಎಸ್.(ಸಂ.), ಕರ್ನಾಟಕ ಚರಿತ್ರೆ, ಸಂಪುಟ ೭, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೧೯೯೭, ಪು.೧೦೦–೧೦೧

೭. ಹಾಲಪ್ಪ ಜಿ.ಎಸ್., ಹಿಸ್ಟರಿ ಆಫ್ ಫ್ರೀಡಮ್ ಮೂವ್‌ಮೆಂಟ್ ಇನ್ ಕರ್ನಾಟಕ, ಸಂಪುಟ ೨, ಗೌರ್ನಮೆಂಟ್ ಆಫ್ ಮೈಸೂರು, ೧೯೬೪, ಪು.೧೨೩

೮. ಆ್ಯಂಟೋನಿ ಗ್ರಾಂಸಿ, ಸೆಲೆಕ್ಷನ್ ಫ್ರಂ ದ ಪ್ರಿಸನ್ ನೋಟ್ ಬುಕ್ಸ್, ಕ್ಲಿಂಟನ್ ಹೋರೆಗಿಯೋ ಫ್ರಿ ನಾವೆಲ್ ಸ್ಮಿತ್, ಲಂಡನ್, ೧೯೭೧

೯. ರಂಜಿತ್ ಗುಹಾ, ಸಬಾಲ್ಟರ್ನ್ ಸ್ಟಡಿಸ್, ಸಂಪುಟ ೧ರಿಂದ ೬, ಆಕ್ಸಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಡೆಲ್ಲಿ, ೧೯೮೫

೧೦. ಬಿಪನ್‌ಚಂದ್ರ ಮತ್ತು ಇತರರು, ಇಂಡಿಯಾಸ್ ಸ್ಟ್ರಗಲ್ ಫಾರ್ ಇಂಡಿಪೆಂಡೆನ್ಸ್, ಪೆಂಗ್ವಿನ್ ಬುಕ್ಸ್, ನ್ಯೂಡೆಲ್ಲಿ, ೧೯೮೮

೧೧. ಬಿಪನ್‌ಚಂದ್ರ, ಅಮಲೇಶ್ ತ್ರಿಪಾಟಿ, ಬರುನ್ ಡೇ, ಫ್ರೀಡಮ್ ಸ್ಟ್ರಗಲ್, ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ, ಹೊಸ ದೆಹಲಿ, ೧೯೭೨

೧೨. ಸುಮಿತ್ ಸರ್ಕಾರ್, ಮಾರ್ಡನ್ ಇಂಡಿಯಾ, ನ್ಯೂಡೆಲ್ಲಿ, ೧೯೮೩

೧೩. ಸುಮಿತ್ ಸರ್ಕಾರ್, ದಿ ಸ್ವದೇಶಿ ಮೂವ್‌ಮೆಂಟ್ ಇನ್ ಬೆಂಗಾಲ್ ೧೯೦೩–೧೯೦೮, ನ್ಯೂಡೆಲ್ಲಿ, ೧೯೭೩

೧೪. ಜ್ಯೂಡಿತ್ ಎಂ. ಬ್ರೌನ್, ಗಾಂಧೀ ಪ್ರಿಸನರ್ ಆಫ್ ಹೋಪ್, ಆಕ್ಸಫರ್ಡ್ ಯೂನಿವರ್ಸಿಟಿ ಪ್ರೆಸ್, ೧೯೯೨

೧೫. ಸೂರ್ಯನಾಥ ಕಾಮತ್(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂಪುಟ ೧, ೨, ೩, ಗೀತಾ ಬುಕ್ ಹೌಸ್, ಮೈಸೂರು, ೧೯೭೪, ೧೯೭೭, ೧೯೮೦

೧೬. ಸಿದ್ಧವ್ವನಹಳ್ಳಿ ಕೃಷ್ಣ ಶರ್ಮ(ಸಂ), ಗಾಂಧೀ ಮತ್ತು ಕರ್ನಾಟಕ, ಗಾಂಧೀ ಸ್ಮಾರಕ ನಿಧಿ, ಬೆಂಗಳೂರು, ೧೯೬೯

೧೭. ಜವರೇಗೌಡ ದೇ(ಸಂ), ಸರ್ವೋದಯಪಥ, ಜ.ವಿ.ನಾ. ಅಭಿನಂದನಾ ಗ್ರಂಥ ಸಮಿತಿ, ಚಿಕ್ಕನಾಯಕನಹಳ್ಳಿ, ೧೯೮೨,

೧೮. ಭಾಸ್ಕರಪ್ಪ ಸಿ.ಎನ್(ಸಂ), ತುಮಕೂರು ಜಿಲ್ಲಾದರ್ಶನ, ಟೈಮ್ಸ್ ಪಬ್ಲಿಕೇಷನ್ಸ್, ತುಮಕೂರು, ೧೯೮೧

೧೯. ಪುಟ್ಟಗಂಗಮ್ಮ ಬಿ.ಆರ್, ಕೆ.ಎಸ್. ರಾಜಪ್ಪನವರ ಜೀವನ ಚರಿತ್ರೆ, ಸಾಧನೆ ಮತ್ತು ಸಿದ್ಧಿ ಬೆಂಗಳೂರು, ೨೦೦೧

೨೦. ಮಾಲಿಮುದ್ದಣ್ಣ, ಮಾಲಿಮರಿಯಪ್ಪ, ಸಾಹಿತ್ಯಾಲಯ, ಗಾಂಧೀನಗರ, ತುಮಕೂರು, ೧೯೬೯

೨೧. ಕವಿತಾಕೃಷ್ಣ, ಸ್ವಾತಂತ್ರ್ಯ ಶ್ರೀ, ಕವಿತಾ ಪ್ರಕಾಶನ, ಕ್ಯಾತ್ಸಂದ್ರ, ತುಮಕೂರು, ೧೯೯೦

೨೨. ಕವಿತಾಕೃಷ್ಣ, ಸರ್ವೋದಯ ಕಿರಣ ಟಿ.ಎ. ದಾಸಪ್ಪ, ರಾಕ್‌ಲೈನ್ ಪ್ರಕಾಶನ, ತುಮಕೂರು, ೨೦೦೧

೨೩. ತುಮಕೂರು ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರ ಸಂಘ (ರಿ)] ತುಮಕೂರು ಜಿಲ್ಲೆಯ ಚಲೇಜಾವ್ ಚಳುವಳಿಯ ೫೦ ನೇ ವಾರ್ಷಿಕೋತ್ಸವದ ಸ್ಮರಣ ಸಂಚಿಕೆ ೧೯೯೨

೨೪. ನಂಜುಂಡಸ್ವಾಮಿ ಬಿ.(ಸಂ), ಕಲ್ಪಿಸಿರಿ, ಅಖಿಲ ಭಾರತ ೬೯ ಕನ್ನಡ ಸಾಹಿತ್ಯ ಸಮ್ಮೇಳನ ತುಮಕೂರು ೨೦೦೨ರ ಸ್ಮರಣ ಸಂಚಿಕೆ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೦೨

೨೫. ತಿರುಮಲೆ ಅನಂತರಂಗಾಚಾರ್(ಅನು), ತುಮಕೂರು ಜಿಲ್ಲೆಯಲ್ಲಿ ಪೂಜ್ಯ ವಿನೋಬಾ, ಗಾಂಧೀ ವಿಚಾರ ಪರಿಷತ್, ತುಮಕೂರು, ೧೯೫೭

೨೬. ಮೂಡ್ಲ ಗಿರೀಶ್ ಎಂ.ವಿ., ಮಧುಗಿರಿ ಗಾಂಧಿ ಎಂ. ಪುಟ್ಟತಿಮ್ಮಯ್ಯ, ಮಧುಗಿರಿ, ೨೦೦೨

೨೭. ತಾಳಕೆರೆ ಸುಬ್ರಮಣ್ಯಂ ರವರ ಜನ್ಮ ಶತಮಾನೋತ್ಸವ ಸ್ಮರಣ ಸಂಚಿಕೆ–೧೯೭೭

೨೮. ಸ್ವಾಂತಂತ್ರ್ಯ ಯೋಧರ ಮತ್ತು ಉತ್ತರಾಧಿಕಾರಿಗಳ ಕ್ವಿಟ್ ಇಂಡಿಯಾ ಚಳುವಳಿಯ ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆ, ಬೆಂಗಳೂರು, ೧೯೯೩

೨೯. ರಜತ ಮಹೋತ್ಸವ ಸಂಚಿಕೆ, ಜಿಲ್ಲಾ ಹಿಂದಿ ಪ್ರಚಾರ ಸಮಿತಿ, ತುಮಕೂರು, ೧೯೬೯,

೩೦. ದೊರೆಸ್ವಾಮಿ ಹೆಚ್.ಎಸ್. ನೆನಪಿನ ಸುರಳಿ ತೆರೆದಾಗ, ಸುವಿದ್ಯಾ ಪ್ರಕಾಶನ, ಕೆಂಪೇಗೌಡ ನಗರ, ಬೆಂಗಳೂರು, ೧೯೯೭

೩೧. ಮಾದೇವ್ ಭರಣಿ, ಶಿಕ್ಷಣ ಭೀಷ್ಮ, ಸಿದ್ಧಾರ್ಥ ಶಿಕ್ಷಣ ಸಂಸ್ಥೆ ಸಿದ್ಧಾರ್ಥ ನಗರ, ತುಮಕೂರು, ೧೯೯೪

೩೨. ಸೂರ್ಯನಾಥ್ ಕಾಮತ್(ಸಂ), ತುಮಕೂರು ಡಿಸ್ಟ್ರಿಕ್ಟ್ ಗ್ಯಾಸೆಟಿಯರ್, ಗೌರ್ನಮೆಂಟ್ ಪ್ರೆಸ್, ಮೈಸೂರ್, ೧೯೬೮, ಪು.೮

೩೩. ನನ್ನೂರು ನನ್ನ ಜನ ತುಮಕೂರು ಜಿಲ್ಲೆ, ತುಷಾರ, ಸೆಪ್ಟೆಂಬರ್ ೧೯೪೨, ಪು.-೪೬

೩೪. ಹಯವದನರಾವ್(ಸಂ), ಮೈಸೂರು ಸ್ಟೇಟ್ ಗ್ಯಾಸೆಟಿಯರ್, ಗೌರ್ನ್‌ಮೆಂಟ್ ಪ್ರೆಸ್, ಬೆಂಗಳೂರು, ೧೯೩೦, ಪು.೩೮೦

೨

# ಸ್ವದೇಶಿ ಮತ್ತು ವಿದೇಶಿ

## ೨.೧. ಸ್ವದೇಶಿ ಆಂದೋಲನ

ಭಾರತದ ರಾಷ್ಟ್ರೀಯ ಚಳುವಳಿಗಳಲ್ಲಿ ಸ್ವದೇಶಿ ಚಳುವಳಿ ವಿಶಿಷ್ಟವಾದ ಸ್ಥಾನವನ್ನು ಪಡೆದುಕೊಂಡಿದೆ. ಸ್ವದೇಶಿ ಚಳುವಳಿಯ ಮುಖ್ಯ ಉದ್ದೇಶ ಬ್ರಿಟಿಷ್ ಅರ್ಥ ವ್ಯವಸ್ಥೆಯನ್ನು ಪ್ರಶ್ನಿಸುವುದು. ಬ್ರಿಟಿಷ್ ಸಾಮ್ರಾಜ್ಯಶಾಹಿಯ ಅಡಿಪಾಯ ಅದರ ಅರ್ಥವ್ಯವಸ್ಥೆಯಾಗಿತ್ತು. ಅದನ್ನು ಬಲಯುತಗೊಳಿಸಲು ಬ್ರಿಟಿಷ್ ಸರಕಾರ ನಾನಾ ರೀತಿಯ ಪ್ರಯೋಗಗಳನ್ನು ಮಾಡಿತು. ಅದನ್ನು ಮನಗಂಡ ಗಾಂಧೀಜಿ ಸ್ವದೇಶಿ ಚಳುವಳಿಯೆನ್ನುವ ಪ್ರತಿ ತಂತ್ರವನ್ನು ಹೂಡಿದರು. ಇದು ಜನರನ್ನು ಅತಿ ಸುಲಭವಾಗಿ ತಲುಪಬಲ್ಲ ಚಳುವಳಿಯಾಗಿತ್ತು. ಪರದೇಶಿ ಸರಕುಗಳನ್ನು ಧಿಕ್ಕರಿಸುವುದು, ಪಶ್ಚಿಮದ ತಂತ್ರಜ್ಞಾನ ಆಧಾರಿತ ಉತ್ಪಾದನೆ ಹಾಗೂ ಅದು ಹುಟ್ಟು ಹಾಕಬಹುದಾದ ಸಮಾಜ, ಮೌಲ್ಯಗಳು ಮುಂತಾದವುಗಳನ್ನು ವಿರೋಧಿಸುವುದು ಗಾಂಧೀಜಿಯವರ ಸ್ವದೇಶಿಯ ಕಾರ್ಯಕ್ರಮಗಳಾಗಿದ್ದವು. ಅವರ ಪ್ರಕಾರ ಭಾರತದ ಅರ್ಥ ವ್ಯವಸ್ಥೆಯ ಅಡಿಪಾಯ ಇಲ್ಲಿನ ಗ್ರಾಮೀಣ ಉದ್ದಿಮೆಗಳು, ಗುಡಿ ಕೈಗಾರಿಕೆಗಳು ಮತ್ತು ಸಾಂಪ್ರದಾಯಿಕ ಕಸಬುಗಳು. ಬ್ರಿಟಿಷ್ ಸರಕಾರ ಇವುಗಳನ್ನು ನಾಶ ಮಾಡಿ ತನ್ನ ಮಾರುಕಟ್ಟೆ ಕೇಂದ್ರಿತ ಹಾಗೂ ಬಂಡವಾಳಶಾಹಿ ಪ್ರಾಧಾನ್ಯದ ವ್ಯವಸ್ಥೆಯೊಂದನ್ನು ಹುಟ್ಟು ಹಾಕಿತು.

೧೮೭೪ರಷ್ಟು ಮುಂಚೆಯೇ ಬ್ರಿಟಿಷ್ ವಾಣಿಜ್ಯ ನೀತಿಯಿಂದ ಹಾಳಾಗಿದ್ದ ಭಾರತದ ಉದ್ಯಮಗಳನ್ನು ಪುನಶ್ಚೇತನಗೊಳಿಸುವುದಕ್ಕೆ ಬಹಿಷ್ಕಾರವನ್ನು ಒಂದು ಅಸ್ತ್ರವನ್ನಾಗಿ ಬಳಸಬೇಕೆಂಬ ಸಲಹೆಯನ್ನು ಮಾಡಲಾಗಿತ್ತು. ಬೊಂಬಾಯಿಯಲ್ಲಿ ಹೊಸದಾಗಿ ಆರಂಭಿಸಲ್ಪಟ್ಟ ಗಿರಣಿಗಳ ಮೇಲಿನ ಮ್ಯಾಂಚೆಸ್ಟರ್‌ನ ವಿರೋಧದಿಂದಾಗಿ, ಮ್ಯಾಂಚೆಸ್ಟರ್‌ನಲ್ಲಿ ತಯಾರಾದ ಬಟ್ಟೆಯನ್ನು ಬಹಿಷ್ಕರಿಸಬೇಕೆಂದು ೧೮೭೫, ೧೮೭೬ ಹಾಗೂ ೧೮೭೮ರಲ್ಲಿ ಕರೆ ನೀಡಲಾಗಿತ್ತು. ಬ್ರಿಟಿಷ್ ವಸ್ತುಗಳ ಬಹಿಷ್ಕಾರವನ್ನು ಬೋಧಿಸಿದುದಲ್ಲದೇ ಅದನ್ನು ಸ್ವಲ್ಪಮಟ್ಟಿಗೆ ಆಚರಣೆಗೂ ತಂದಿದ್ದರು. ಆದರೆ ಈ ಯೋಜನೆಗಳನ್ನು ಗಂಭೀರವಾಗಿ ಮುಂದೆ ೧೯೦೫ರಲ್ಲಿ ಚೀನಿ ವಲಸೆಗಾರರನ್ನು ಅಮೆರಿಕ ಸಂಯುಕ್ತ ಸಂಸ್ಥಾನದಿಂದ ಹೊರದೂಡಿದ್ದುದರ ವಿರುದ್ಧ ಚೀನಿಯರು ಅಮೆರಿಕದ ವಸ್ತುಗಳ ವಿರುದ್ಧ ಬಹಿಷ್ಕಾರವನ್ನು ನಡೆಸಿದ್ದರು.[೧]

ಸ್ವದೇಶಿ ಚಳುವಳಿ ೧೯೦೫ರಲ್ಲಿ ಸ್ಪಷ್ಟವಾಗಿ ಕಂಡು ಬಂದಿತಾದರೂ ಅದಕ್ಕೆ ಮುಂಚಿನ ದಶಕಗಳಲ್ಲಿಯೇ ಪೂರ್ವ ಸಿದ್ಧತೆ ಆಗಿದ್ದನ್ನು ಕಾಣಬಹುದು. ಪ್ರಪ್ರಥಮವಾಗಿ ಸ್ವದೇಶಿ ಕಲ್ಪನೆ ಕಂಡು ಬಂದಿದ್ದು ೧೮೪೯ ರಲ್ಲಿ. ೧೮೪೯ರಲ್ಲಿ ಪೂನಾದ ಗೋಪಾಲ್ ರಾವ್ ದೇಶ್‌ಮುಖ್ ಎಂಬುವರು ಸ್ವದೇಶಿ ವಸ್ತುಗಳನ್ನು ಉಪಯೋಗಿಸಬೇಕೆಂದು ಪ್ರಚಾರ ಕೈಗೊಂಡರು. ಅನಂತರ ೧೮೭೦ರ ದಶಕದಲ್ಲಿ ಸ್ವದೇಶಿ ಹೆಚ್ಚು ಜನಪ್ರಿಯವಾಯಿತು. ಬೆಂಗಳೂರಿನಲ್ಲಿ ೧೮೭೪ ರಲ್ಲಿ ಭಾರತದಲ್ಲಿಯೇ ತಯಾರಾದ ಹತ್ತಿ ಬಟ್ಟೆಗಳನ್ನು ವ್ಯಾಪಾರ ಮಾಡಲೆಂದೇ ಒಂದು ಕಂಪನಿಯನ್ನು ಆರಂಭಿಸಲಾಯಿತು. ಅನಂತರ ವಿದೇಶಿ ಪದಾರ್ಥಗಳನ್ನು ಮಾರುವುದಿಲ್ಲ ಎಂದು ಈ ಕಂಪನಿ ತೀರ್ಮಾನ ಮಾಡಿತು. ಹತ್ತಿ ಬಟ್ಟೆ ಮೇಲಿನ ಸುಂಕದ ವಿರುದ್ಧ ಜನಗಳ ಪ್ರತಿಭಟನೆ ಸ್ವಲ್ಪ ಕಡಿಮೆ ಆದಾಗ ಸ್ವದೇಶಿ ವಸ್ತುಗಳಿಗಾಗಿಯೂ ಚಳುವಳಿ ಸ್ವಲ್ಪ ಕಡಿಮೆಯಾಯಿತು. ಆದರೆ ಸಂಪೂರ್ಣವಾಗಿ ಸ್ವದೇಶಿ ಚಳುವಳಿ ನಿಂತು ಹೋಗಲಿಲ್ಲ. ಭಾರತೀಯ ದೇಶೀಯ ಕೈಗಾರಿಕೆಗಳು ಕುಂಠಿತವಾದದ್ದರ ವಿರುದ್ಧದ ಪ್ರತಿಭಟನೆಯ ದ್ಯೋತಕವಾಗಿ ಸ್ವದೇಶಿ ಚಳುವಳಿ ಪ್ರಾರಂಭವಾಯಿತು ಎನ್ನಬಹುದು. ಹೊಸ ಕೈಗಾರಿಕೆಗಳನ್ನು ಅಭಿವೃದ್ಧಿ ಪಡಿಸಲು ಮತ್ತು ಅವನತಿ ಹೊಂದುತ್ತಿರುವ ಕೈಗಾರಿಕೆಗಳನ್ನು ಪುನಶ್ಚೇತನಗೊಳಿಸುವ ಮಾರ್ಗದಲ್ಲಿ ಈ ಚಳುವಳಿ ಒಂದು ಪ್ರತಿಭಟನೆಯ ರೂಪದಲ್ಲಿ ಆರಂಭವಾಯಿತು. ಮೇಲ್ವರ್ಗದ ಹಾಗೂ ಮಧ್ಯಮ ವರ್ಗದ ಮಂದಿ ತಮ್ಮ ಎಂದಿನ ವಿದೇಶಿ ವಸ್ತುಗಳ ಆಕರ್ಷಣೆಗೆ ಒಳಗಾಗುವುದನ್ನು ಸ್ವಲ್ಪ ಮರೆತು ಅಷ್ಟೇನೂ ಉತ್ತಮವಲ್ಲದ ಭಾರತೀಯ ವಸ್ತುಗಳನ್ನು ಉಪಯೋಗಿಸುವದಕ್ಕೆ ಸಿದ್ಧವಾಗಬೇಕಾಯಿತು. ಹಾಗಾಗಿ ವಿದೇಶಿ ವಸ್ತು ನಿಷೇಧ ಹಾಗೂ ಸ್ವದೇಶಿ ಒಂದೇ ನಾಣ್ಯದ ಎರಡು ಮುಖಗಳಾಗಿ ಗೋಚರವಾಗುತ್ತವೆ. ಸ್ವದೇಶಿಯ ವಸ್ತುಗಳನ್ನು ಬಳಸುವುದರಿಂದ ದೇಶದ ಆರ್ಥಿಕ ಮಟ್ಟ ಹೆಚ್ಚುತ್ತದೆ ಎಂಬ ಭಾವನೆ ಮೂಡಿತು. ಸ್ವದೇಶಿ ಚಳುವಳಿಯು ಒಂದೇ ಕ್ರಿಯೆಯ ಧನಾತ್ಮಕ ಮುಖವಾದರೆ ವಿದೇಶಿ ವಸ್ತುಗಳು ನಿಷೇಧ ಋಣಾತ್ಮಕ ಮುಖವಾಗಿ ಕಂಡಿತು.[೨]

೧೯೦೫ರಲ್ಲಿ ಬಂಗಾಳದ ವಿಭಜನೆಯಾದಾಗ ಭಾರತ ಸ್ವಾತಂತ್ರ್ಯ ಹೋರಾಟಕ್ಕೆ ಒಂದು ಹೊಸ ಹುರುಪು ಮೂಡಿತು. ಈ ಸಮಯದಲ್ಲಿ ಆರಂಭವಾದ ವಂಗಭಂಗ ವಿರೋಧಿ ಚಳುವಳಿಯ ಅಂಗ ಸ್ವದೇಶಿ ಚಳುವಳಿ. ಇದು ಸ್ವಾವಲಂಬನೆಯ ಮಾರ್ಗ ತೋರಿಸಿತು. ಬ್ರಿಟಿಷ್ ಸರಕಾರ ವಂಗ ವಿಭಜನೆ ಮಾಡಲು ನಿಶ್ಚಯಿಸಿದಾಗ ಕಾಂಗ್ರೆಸ್ಸಿನಲ್ಲಿದ್ದ ಉಗ್ರ ಹಾಗೂ ಸೌಮ್ಯವಾದಿಗಳು ಇಬ್ಬರೂ ವಿರೋಧಿಸಿದರು. ದಾದಾಬಾಯಿನವರೋಜಿ, ಗೋಪಾಲಕೃಷ್ಣ ಗೋಖಲೆ, ತಿಲಕ್, ಲಾಲ್‌ಲಜಪತ್‌ರಾಯ್, ಬಿಪಿನಚಂದ್ರಪಾಲ್ ಇವರೆಲ್ಲ ಇದರ ಮುಂದಾಳುಗಳು. ಬ್ರಿಟಿಷರಿಂದ ತಯಾರಿಸಲ್ಪಟ್ಟ ಪದಾರ್ಥಗಳನ್ನು ಬಹಿಷ್ಕಾರ ಮಾಡುವ

ನಿರ್ಧಾರ ಕೈಗೊಂಡರು. ಬಂಗಾಳದ ಜನಪ್ರಿಯ ನಾಯಕ ಕೃಷ್ಣಕುಮಾರಮಿತ್ರ "ಸ್ವದೇಶಿ ಪದಾರ್ಥಗಳು ದೊರೆಯುವಾಗ ಎಷ್ಟೇ ಅನಾನುಕೂಲತೆಗಳಿದ್ದರೂ ಎಂದಿಗೂ ವಿದೇಶಿ ಪದಾರ್ಥಗಳನ್ನು ಬಳಸುವುದಿಲ್ಲ ಎಂದು ತಾಯಿನಾಡಿನ ಹೆಸರಿನಲ್ಲಿ ದೇಶದ ಒಳತಿಗಾಗಿ, ಹೀಗೆ ಪ್ರತಿಜ್ಞೆ ಕೈಗೊಳ್ಳೋಣ ಎಂದು ಕರೆ ಇತ್ತರು. ಆದರೆ ಬ್ರಿಟಿಷ್ ಸರಕಾರ ಈ ಬೆದರಿಕೆಗೆ ಮಣಿಯದೆ ಬಂಗಾಳವನ್ನು ವಿಭಜಿಸಿತು.[೩] ಇದರಿಂದ ಸ್ವಾತಂತ್ರ್ಯ ಚಳುವಳಿ ಹಬ್ಬಿತು. ಸ್ವದೇಶಿ ಕಲ್ಪನೆ ಜನರ ಮನಸ್ಸಿನಲ್ಲಿ ನಾಟಿತು. ಅಲ್ಲಲ್ಲಿ ಬೆಂಕಿ ಉರಿಸಿ ಜನ ವಿದೇಶಿ ಬಟ್ಟೆಗಳನ್ನು ಸುಟ್ಟರು. ವಿದೇಶಿ ಸಾಮಾನುಗಳನ್ನು ಮಾರುವ ಅಂಗಡಿಗಳು ಮಾರಾಟ ನಡೆಸದಂತೆ ತಡೆ ಕಾವಲು ಹಾಕಿದರು. ಪಾಶ್ಚಾತ್ಯ ವಿದ್ಯಾಸಂಸ್ಥೆಗಳನ್ನು ಬಹಿಷ್ಕರಿಸಿದರು. ಕೈಮಗ್ಗ ಉದ್ಯಮ ಮತ್ತೆ ಚಿಗುರಿತು. ಕಾಲೇಜು ವಿದ್ಯಾರ್ಥಿಗಳು ಬ್ರಿಟನ್ನಿನಲ್ಲಿ ತಯಾರಾದ ಕಾಗದದ ಮೇಲೆ ಬರೆಯಲು ನಿರಾಕರಿಸಿದರು. ಸ್ವದೇಶಿ ಚಳುವಳಿಯಿಂದ ಭಾರತದ ದೇಶಿ ಉದ್ಯಮಕ್ಕೆ ಉತ್ಸಾಹ ಕೊಟ್ಟಂತಾಯಿತು. ದೇಶದಲ್ಲಿ ಅನೇಕ ದೇಶಿ ಕೈಗಾರಿಕೆಗಳು ತಲೆಯೆತ್ತಿದ್ದವು.[೪]

೧೯೦೫ರಲ್ಲಿ ಜನತೆಯ ಭಾವನೆಗಳಿಂದಾಗಿ ಉದಯಿಸಿದ ಸ್ವದೇಶಿ ಹಾಗೂ ವಿದೇಶಿ ವಸ್ತು ಬಹಿಷ್ಕಾರ ಎಂಬ ಕಲ್ಪನೆಗಳು ಹೊಸದೇನಲ್ಲ. ಇದಕ್ಕೂ ಮುಂಚಿತವಾಗಿ ಅಮೆರಿಕನ್ನರು, ಚೀನಿಯರು, ಐರಿಸ್ ಜನ ಅನುಸರಿಸಿದ್ದರು. ಭಾರತೀಯ ಕೈಗಾರಿಕೆಯ ಅಭಿವೃದ್ಧಿಗೆ ಆರ್ಥಿಕವಾದ ಕ್ರಮ ಸ್ವದೇಶಿ. ಇದನ್ನು ಮಹಾರಾಷ್ಟ್ರದ ಪೂನಾದ ಗೋಪಾಲರಾವ್ ದೇಶಮುಖ್, ಜಿ.ವಿ. ಜೋಷಿ ಮತ್ತು ಎಂ.ಜಿ. ರಾನಡೆ, ಬಂಗಾಳದ ರಾಜನಾರಾಯಣಬೋಸ್, ನಬಗೋಪಾಲಮಿತ್ರ, ಮತ್ತು ರವೀಂದ್ರನಾಥ ಠಾಕೂರರ ಮನೆತನದವರು ಉಪದೇಶಿಸಿದರು. ಇದೇ ರೀತಿ ಬೊಲಾನಾಥಚಂದ್ರ ೧೮೭೦ರಲ್ಲಿ ಬ್ರಿಟಿಷ್ ಜನತೆಯ ಮೇಲೆ ಆರ್ಥಿಕ ಒತ್ತಡ ತರುವ ಸಲುವಾಗಿ ಬಹಿಷ್ಕಾರವನ್ನು ಶಿಫಾರಸ್ಸು ಮಾಡಿದರು. ೧೮೯೬ರಲ್ಲಿ ತಿಲಕರು ಪೂರ್ಣ ಪ್ರಮಾಣದ ಬಹಿಷ್ಕಾರ ಚಳುವಳಿಯನ್ನೇ ಮಾಡಿದ್ದರು. ಸ್ವದೇಶಿಯೂ ಹಾಗೂ ವಿದೇಶಿ ವಸ್ತು ಬಹಿಷ್ಕಾರವೂ ಪರಸ್ಪರ ಪೂರಕವಾದವು ಒಂದಿಲ್ಲದೆ ಇನ್ನೊಂದು ಯಶಸ್ವಿಯಾಗುತ್ತಿರಲಿಲ್ಲ. ಬಂಗಾಳದ ವಿಭಜನೆ ವಿರೋಧಿ ಚಳುವಳಿಯಿಂದಾಗಿ ಈ ಹಿಂದಿನ ಕಲ್ಪನೆಗಳಿಗೆ ಹೊಸ ಚೈತನ್ಯ ಮೂಡಿತು. ಆದರೆ ಮಿತಗಾಮಿಗಳಿಗೂ ಮತ್ತು ತೀವ್ರಗಾಮಿಗಳಿಗೂ ಇದ್ದ ಭಿನ್ನಾಭಿಪ್ರಾಯವನ್ನು ಅದು ಬೆಳಕಿಗೆ ತಂದಿತು. ಮುಂಬಯಿಯ ಮಿತಗಾಮಿಗಳೂ ಸ್ವದೇಶಿ ತತ್ವವನ್ನು ಸ್ವೀಕರಿಸಿದರು. ರಾಜಕೀಯದ ಸಾಮಾನ್ಯ ಅಸ್ತ್ರವಾಗಿ ವಿದೇಶಿ ವಸ್ತು ಬಹಿಷ್ಕಾರದ ತತ್ವವನ್ನು ವಿರೋಧಿಸಿದರು. "ಇನ್ನೊಬ್ಬನನ್ನು ಘಾಸಿಗೊಳಿಸಬೇಕೆಂಬ ಸೇಡಿನ ಭಾವನೆ ಇರುವುದರಿಂದಲೂ ನಮ್ಮ ನಮ್ಮಲ್ಲಿಯೇ ಅನಾವಶ್ಯಕವಾದ ಅಸಮಾಧಾನಗಳನ್ನು ಉದ್ಭವಿಸುವುದಾದ್ದರಿಂದಲೂ ಗೋಖಲೆ ಬಹಿಷ್ಕಾರ ಎಂಬ ಶಬ್ದವನ್ನೇ ಕೈ ಬಿಡಬೇಕೆಂದರು.

ಆ ಸಮಯದಲ್ಲಿ ನಡೆದಿರುವ ಅನ್ಯಾಯವನ್ನು ಸರಿಪಡಿಸಬೇಕೆಂದು ಹೋರಾಡುವುದಕ್ಕೆ ಬಹಿಷ್ಕಾರ ಒಂದು ವಿಶೇಷವಾದ ಕ್ರಮ ಎಂದು ಸುರೇಂದ್ರನಾಥ ಬ್ಯಾನರ್ಜಿ ಭಾವಿಸಿದರು. ಲಾಲ್‌ಲಜಪತ್‌ರಾಯ್ ಬ್ರಿಟಿಷರ ಗಮನವನ್ನು ಭಾರತೀಯರ ದುಃಖ ಸಂಕಟಗಳ ಕಡೆಗೆ ತಿರುಗುವಂತೆ ಮಾಡಬೇಕಾದರೆ, ಅವರ ಖಜಾನೆಗೆ ನೇರವಾಗಿ ಬೆದರಿಕೆಯೊಡ್ಡಬೇಕು ಎಂದರು. ತಿಲಕ್, ಪಾಲ್ ಹಾಗೂ ಅರವಿಂದೋ ಇವರಿಗಾದರೂ ಬಹಿಷ್ಕಾರ ಎಂಬ ವಿಚಾರ ಅನೇಕ ಅಂಶಗಳನ್ನು ಒಳಗೊಂಡಿತ್ತು. ಮ್ಯಾಂಚೆಸ್ಟರಿನ ಮೇಲೆ ಹಾಕಿದ ಆರ್ಥಿಕ ಒತ್ತಡ, ಸಾಮ್ರಾಜ್ಯಶಾಹಿಯ ವಿರುದ್ಧ ರಾಜಕೀಯ ಚಳುವಳಿ, ಸ್ವರಾಜ್ಯದ ಗಳಿಕೆಗೆ ಸ್ವ ಸಂಪೂರ್ಣತೆಯಲ್ಲಿ ಶಿಕ್ಷಣ ಇತ್ಯಾದಿ ತಾತ್ಕಾಲಿಕವಾಗಿ ಭಿನ್ನಾಭಿಪ್ರಾಯಗಳನ್ನು ಸಮಾಧಾನ ಪಡಿಸಿಕೊಳ್ಳಲಾಯಿತು. ವಿಭಜನ ವಿರೋಧಿ ಚಳುವಳಿಯು ಸ್ವದೇಶಿ ಚಳುವಳಿಯಾಗಿ ಬೆಳೆದು ಬೇರೆ ಬೇರೆಯಾಗಿದ್ದ ಮತ್ತು ದುರ್ಬಲವಾಗಿದ್ದ ಶಕ್ತಿಗಳಿಗೆ ಒಂದು ನೂತನ ಶಕ್ತಿಯನ್ನು ಉತ್ಸಾಹವನ್ನುಂಟು ಮಾಡಿತು. ಸ್ವದೇಶಿ ಚಳುವಳಿಯು ಜಾತಿ ಪಂಥಗಳ ಭೇದವಿಲ್ಲದೆ ಹೊಸ ಹೊಸ ಜನ ವರ್ಗಗಳನ್ನು ರಾಜಕೀಯಕ್ಕೆ ತಂದಿತು. ತಿಲಕರು ಸ್ವದೇಶಿ ವಸ್ತುಗಳ ಬಳಕೆ, ವಿದೇಶಿ ವಸ್ತು ಬಹಿಷ್ಕಾರ ಮತ್ತು ರಾಷ್ಟ್ರೀಯ ಶಿಕ್ಷಣಗಳ ಮೂಲ ಗುರಿ ಸ್ವರಾಜ್ಯದ ಸಾಧನೆ ಎಂದು ಒತ್ತಿ ಹೇಳಿದರು. ಇಡೀ ಬಂಗಾಳ ಪೂರ್ತಿಯಾಗಿ ಮತ್ತು ಭಾರತದ ಅನೇಕ ನಗರಗಳಲ್ಲಿ, ಪಟ್ಟಣಗಳಲ್ಲಿ ಬಹಿರಂಗ ಸಭೆಗಳು ನಡೆದು ಬಹಿಷ್ಕಾರ ಮತ್ತು ಸ್ವದೇಶಿ ಕರೆ ನೀಡಿದವು. ಆದಕ್ಕೆ ಎರಡು ಮಾರ್ಗಗಳಿದ್ದವು. ಒಂದು ಕಡೆ ಬ್ರಿಟಿಷ್ ವಸ್ತುಗಳನ್ನು ಬಹಿರಂಗವಾಗಿ ಸುಡಲಾಗುತ್ತಿತ್ತು. ಅವುಗಳನ್ನು ಮಾರುವ ಅಂಗಡಿಗಳ ಮುಂದೆ ಪಿಕೆಟಿಂಗ್ ಮಾಡಲಾಗುತ್ತಿತ್ತು. ಮತ್ತೊಂದು ಕಡೆ ಸ್ವದೇಶಿ ವಸ್ತುಗಳ ಉತ್ಪಾದನೆ ಮತ್ತು ಮಾರಾಟಗಳನ್ನು ಅಭಿವೃದ್ಧಿ ಮಾಡಲು ಬಿರುಸಾದ ಕ್ರಮ ಕೈಗೊಳ್ಳಲಾಗುತ್ತಿತ್ತು. ಸಿಹಿ ತಿಂಡಿ ಮಾಡುವವರು ವಿದೇಶಿ ಸಕ್ಕರೆ ಬಳಸುವುದಿಲ್ಲ ಎಂದರು. ಬಟ್ಟೆ ತೊಳಿಯುವವರು ವಿದೇಶಿ ಬಟ್ಟೆಗಳನ್ನು ತೊಳೆಯುವುದರ ವಿರುದ್ಧವಾದರು. ಪುರೋಹಿತರು ವಿದೇಶಿ ವಸ್ತುಗಳನ್ನು ಉಪಯೋಗಿಸಿ ಪೂಜೆ ಮಾಡುವುದಿಲ್ಲ ಎಂದು ಪ್ರತಿಜ್ಞೆ ಮಾಡಿದರು. ದಕ್ಷಿಣದ ಮತ್ತು ಬಂಗಾಳದ ಸ್ತ್ರೀಯರು ವಿದೇಶಿ ಬಳೆಗಳನ್ನು ಗಾಜಿನ ಪಾತ್ರೆಗಳನ್ನು ಉಪಯೋಗಿಸುವುದನ್ನು ಬಿಟ್ಟರು. ವಿದ್ಯಾರ್ಥಿಗಳು ವಿದೇಶಿ ಕಾಗದವನ್ನು ಬಳಸಲು ನಿರಾಕರಿಸಿದರು. ವಕೀಲರು, ಡಾಕ್ಟರರು ಕೂಡ ಬ್ರಿಟಿಷ್ ಉತ್ಪಾದನೆಗಳನ್ನು ಮಾರುತ್ತಿದ್ದವರಿಗೆ ಪ್ರೋತ್ಸಾಹ ಕೊಡಲಿಲ್ಲ. ಪಿಕೆಟಿಂಗ್ ಜೊತೆಗೆ ಸಾಂಪ್ರದಾಯಿಕ ವಿಧಾನದ ಸಾಮಾಜಿಕ ಬಹಿಷ್ಕಾರವು ಸೇರುತ್ತಿತ್ತು. ಬಾರಿಸಾಲ್‌ನಂತಹ ಪ್ರಮುಖ ಸ್ಥಳಗಳಲ್ಲಿ ವರ್ತಕರು ಉಪ್ಪು ಮತ್ತು ಬಟ್ಟೆಗಳನ್ನು ನಾಶ ಮಾಡಲು ಸ್ವ ಇಚ್ಛೆಯಿಂದ ಒಪ್ಪಿಗೆ ಕೊಟ್ಟರು. ಆದಕ್ಕಾಗಿ ಪುಂಡು ದಂಡನೆಯ ಪೋಲಿಸರಿಂದ ಶಿಕ್ಷೆಯನ್ನು ಬರಮಾಡಿ ಕೊಂಡರು.

ಚಳವಳಿಯು ತನ್ನ ವಾಸ್ತವ ಮುಖದಲ್ಲಿ ಗೃಹ ಕೈಗಾರಿಕೆಗಳಿಗೂ ಅನೇಕ ಬಗೆಯ ಬೃಹತ್ ಪ್ರಮಾಣದ ಉದ್ಯಮಗಳಿಗೂ ಒಂದು ಪ್ರಚೋದನೆಯನ್ನು ನೀಡಿತು. ಎಲ್ಲೆಲ್ಲೂ ಸ್ವದೇಶಿ ಬಟ್ಟೆ ಗಿರಣಿಗಳು, ಬೆಂಕಿಪೊಟ್ಟಣ ಮತ್ತು ಸೋಪು ಕಾರ್ಖಾನೆಗಳು, ಮಡಿಕೆ ಕುಡಿಕೆಗಳು ಮತ್ತು ಚರ್ಮಗಾರಿಕೆಗಳ ಕಾರ್ಖಾನೆಗಳು ಬೆಳೆದವು. ಆಚಾರ್ಯ ಪಿ.ಸಿ. ರೇ ತಮ್ಮ ಬೆಂಗಾಲ್ ಕೆಮಿಕಲ್ ಸ್ವದೇಶಿ ಮಳಿಗೆಯನ್ನು ಪ್ರಾರಂಭಿಸಿದರು. ಅದು ಬಹು ಬೇಗ ಪ್ರಸಿದ್ಧಿಯನ್ನು ಪಡೆಯಿತು. ಗುರುದೇವ ಠಾಕೂರರೇ ಒಂದು ಸ್ವದೇಶಿ ಮಳಿಗೆಯನ್ನು ಸ್ಥಾಪಿಸಲು ನೆರವಾದರು. ಟಾಟಾ ಐರನ್ ಅಂಡ್ ಸ್ಟೀಲ್ ಕಂಪನಿಯ ಇಡೀ ಬಂಡವಾಳವನ್ನು ಭಾರತೀಯರೇ ಯಾವುದೇ ಬಗೆಯ ಸರ್ಕಾರ ಹಾಗೂ ವಿದೇಶಿ ನೆರವಿಲ್ಲದೇ ಮೂರೇ ತಿಂಗಳಲ್ಲಿ ತುಂಬಿದರು. ದೊಡ್ಡ ಜಮೀನ್ದಾರರು ಮತ್ತು ವರ್ತಕರು ರಾಜಕೀಯ ನಾಯಕರೊಂದಿಗೆ ಜೊತೆಗೂಡಿ ಬ್ಯಾಂಕುಗಳನ್ನು, ಜೀವವಿಮಾ ಕಂಪನಿಗಳನ್ನು ಸ್ಥಾಪಿಸಿದರು. ಉಗಿ ಹಡಗುಗಳ ಸಂಚಾರದ ವ್ಯವಹಾರಗಳನ್ನು ಆರಂಭಿಸಿದರು. ಸ್ವದೇಶಿ ಚಳುವಳಿಯು ಸಂಸ್ಕೃತಿಯ ಕ್ಷೇತ್ರದಲ್ಲಿ ಹೊಸ ಮಾರ್ಗಗಳನ್ನು ಉಂಟು ಮಾಡಿತು. ಹೊಸ ಹೊಸ ಮಾದರಿಯ ಗದ್ಯ, ಕಾವ್ಯ ಮತ್ತು ಪತ್ರಿಕೋದ್ಯಮ ಮುಂತಾದವು ಉದಯಿಸಿದವು. ರವೀಂದ್ರನಾಥಠಾಕೂರ್, ರಜನೀಕಾಂತ್‌ಸೇನ್, ಮುಕುಂದದಾಸ್ ಮೊದಲಾದ ಕವಿಗಳು ರಚಿಸಿದ ರಾಷ್ಟ್ರ ಭಕ್ತಿ ಗೀತೆಗಳು ಆ ಸಮಯದಲ್ಲಿ ಅತ್ಯಂತ ಪರಿಣಾಮಕಾರಿಯಾಗಿದ್ದವು. ಸ್ವದೇಶಿ ಮತ್ತು ರಾಷ್ಟ್ರೀಯತಾ ಚಳುವಳಿಗಳ ಫಲವಾದ ರಾಜಕೀಯ ಪತ್ರಿಕೋದ್ಯಮವು ಸ್ವಾತಂತ್ರ್ಯ, ಸ್ವರಾಜ್ಯ ಮತ್ತು ಆತ್ಮಾವಲಂಬನಗಳು ಕೆಲವು ಶ್ರೇಷ್ಠ ಕೃತಿಗಳನ್ನು ಹುಟ್ಟ ಹಾಕಿತು.

ಸ್ವದೇಶಿ ಆಚರಣೆಗಳನ್ನು ತಿಲಕರು ಪಶ್ಚಿಮ ಭಾರತಕ್ಕೆ ತಂದರು. ಪೂನದಲ್ಲಿ ಒಂದು ಭಾರೀ ಪ್ರಮಾಣದ ವಿದೇಶಿ ವಸ್ತ್ರದಹನ ಕಾಂಡವನ್ನು ಅವರೇ ನಿಂತು ನಡೆಸಿದರು. ಸ್ವದೇಶಿ ವಸ್ತು ಪ್ರಚಾರ ಸಭೆಯ ಮುಖ್ಯವಾಗಿ ಅವರು ಒಂದು ಸಹಕಾರಿ ಮಳಿಗೆಯನ್ನು ಪ್ರಾರಂಭಿಸಿದರು. ಮುಂಬಯಿಯ ಮಿಲ್ ಮಾಲೀಕರನ್ನು ಕಡಿಮೆ ದರಗಳಲ್ಲಿ ದೋತಿಗಳನ್ನು ಒದಗಿಸುವಂತೆ ಪ್ರೇರೇಪಿಸಿದರು. ಪೂನಾದಲ್ಲಿ ಒಂದು ಸ್ವದೇಶಿ ನೇಯ್ಗೆ ಕಂಪನಿಯು ರೂಪುಗೊಂಡಿತು.

ಪಂಜಾಬಿನಲ್ಲಿ ವಿದೇಶಿ ಸಕ್ಕರೆಯ ಬಳಕೆಯ ವಿರುದ್ಧವಾದ ಒಂದು ದೊಡ್ಡ ಚಳುವಳಿಯ ಅಲೆ ಇಡೀ ಪಂಜಾಬನ್ನು ರಭಸದಿಂದ ಕೊಚ್ಚಿ ಹಾಕಿತು. ವಿದೇಶಿ ಸಕ್ಕರೆಯ ಆಮದು ಸ್ಥಳೀಯ ಸಕ್ಕರೆಯ ಕೈಗಾರಿಕೆಯನ್ನು ಹಾಗೂ ಕಬ್ಬಿನ ಬೆಳೆಯನ್ನು ಕುಂಟಿತಗೊಳಿಸಿತ್ತು. ರಾವಲ್ಪಿಂಡಿಯ ವರ್ತಕರು ವಿದೇಶಿ ಸಕ್ಕರೆಯನ್ನು ಮಾರುವುದಿಲ್ಲ ಎಂದು ಪ್ರತಿಜ್ಞೆ ಮಾಡಿದರು. ಮುಲ್ತಾನಿನ ಬ್ರಾಹ್ಮಣ ಪುರೋಹಿತರು ಅದನ್ನು ಒಳಗೊಂಡ ನೈವೇದ್ಯಗಳನ್ನು ದೇವಾಲಯಗಳಲ್ಲಿ ಬಹಿಷ್ಕರಿಸಿದರು. ಚಳುವಳಿ ಹರಿದ್ವಾರ, ದೆಹಲಿ, ಕಾಂಗ್ರಾ ಮತ್ತು ಜಮ್ಮುಗಳಿಗೆ ಹರಡಿತು.

ದೆಹಲಿಯಲ್ಲಿ ಸ್ವದೇಶಿ ಚಳುವಳಿಯ ಜೀವನಾಡಿ ಆಗಿದ್ದವರು ಸಯ್ಯದ್ ಹೈದರ್ ರೆಜಾ. ಚಿದಂಬರಂ ಪಿಳ್ಳೈ ಮದರಾಸ ಪ್ರಾಂತ್ಯದ ಕೋರಮಂಡಲ ಕರಾವಳಿಯ ಟ್ಯೂಟಿಕಾರಿನ್‌ನಲ್ಲಿ ಸ್ವದೇಶಿ ಸ್ಟೀಮ್ ನ್ಯಾವಿಗೇಷನ್ ಕಂಪನಿಯನ್ನು ಪ್ರಾರಂಭಿಸಿದರು.

"ನಮ್ಮ ರಾಷ್ಟ್ರವು ಒಂದು ಮರದಂತಿದೆ", ತಿಲಕರು ಕೇಸರಿಯಲ್ಲಿ ಬರೆದರು: ``ಅದರ ಕಾಂಡ ಸ್ವರಾಜ್ಯ, ಕೊಂಬೆಗಳು ಸ್ವದೇಶಿ ಮತ್ತು ವಿದೇಶಿ ವಸ್ತು ಬಹಿಷ್ಕಾರ". ವಾಸ್ತವವಾಗಿ ಸ್ವದೇಶಿಯು ಸ್ವರಾಜ್ಯಕ್ಕೆ ದಾರಿ. ಆದ್ದರಿಂದ ವಿಭಜನ ವಿರೋಧಿ ಸ್ವರೂಪದ ಚಳುವಳಿಯನ್ನು ಎಲ್ಲಾ ಬಗೆಯ ವಿದೇಶಿ ಆಡಳಿತದ ವಿರೋಧವಾದ ನಿಷ್ಕ್ರಿಯ ಪ್ರತಿಭಟನೆಯಾಗಿ ವಿಸ್ತರಿಸಬೇಕಾಗಿತ್ತು. ಅದರ ಅರ್ಥ ಬ್ರಿಟಿಷ್ ವಸ್ತುಗಳು ಮತ್ತು ಶಾಲೆಗಳ ಬಹಿಷ್ಕಾರ ಮಾತ್ರವಲ್ಲ, ನ್ಯಾಯಾಲಯಗಳು, ಪುರಸಭೆಗಳು, ಶಾಸನ ಸಭೆಗಳು ಸಂಕ್ಷೇಪವಾಗಿ ಹೇಳಬೇಕೆಂದರೆ, ಸರ್ಕಾರದೊಂದಿಗೆ ಎಲ್ಲ ಸಂಬಂಧಗಳನ್ನು ಬಹಿಷ್ಕರಿಸುವುದಾಗಿತ್ತು. ಬ್ರಿಟಿಷ್ ಘನತೆಯ ಬುಡಕ್ಕೆ ಪೆಟ್ಟುಕೊಟ್ಟು, ಅದರ ಮೋಹಕತೆಯನ್ನು ತೊಲಗಿಸಬೇಕಾಗಿತ್ತು. ಬ್ರಿಟಿಷ್ ವಾಣಿಜ್ಯವು ಸುಲಿಗೆ ಮಾಡುವುದನ್ನು, ಬ್ರಿಟಿಷ್ ಅಧಿಕಾರಿಶಾಹಿಯು ಭಾರತದ ಜನರನ್ನು ತುಳಿಯುವುದನ್ನು ಒಂದು ಯೋಜಿತ ರೀತಿಯಲ್ಲಿ ನಿರಾಕರಿಸುವುದರ ಮೂಲಕ ಆಡಳಿತವು ಅಸಾಧ್ಯವಾಗುವಂತೆ ಮಾಡಬೇಕತ್ತು."[೫]

ಮೊತ್ತ ಮೊದಲ ಬಾರಿಗೆ ಮುಸ್ಲಿಂ ಮಹಿಳೆಯರು ಪರದೆ ಬಿಟ್ಟು ಬಂದು ಮೆರವಣಿಗೆ ಪಿಕೆಟಿಂಗ್‌ಗಳಲ್ಲಿ ಪಾಲ್ಗೊಂಡರು. ಬಹಿಷ್ಕಾರವನ್ನು ಸೂಚಿಸುವ ಮೊದಲಿಗರಲ್ಲಿ ಒಬ್ಬರು ಪಾಟ್ನಾದ ಲಿಯಾಖತ್‌ಹುಸೇನ್, ಈಸ್ಟ್ ಇಂಡಿಯನ್ ರೈಲ್ವೆ ಮುಷ್ಕರವನ್ನು ವ್ಯವಸ್ಥೆಗೊಳಿಸಿದವರಲ್ಲಿ ಅವರು ಒಬ್ಬರು. ಸರ್ಕಾರದ ದಮನಕಾರಿ ವಿಧಾನಗಳು ಅದರಲ್ಲೂ ವಿಶೇಷವಾಗಿ ಬಾರಿಸಾಲ್ ಸಮ್ಮೇಳನದ ಪ್ರತಿನಿಧಿಗಳ ಮೇಲೆ ಪೋಲೀಸರು ನಡೆಸಿದ ಅತ್ಯಾಚಾರ ಇವು ಹೋರಾಟವನ್ನು ಮುಂದುವರಿಸಬೇಕೆಂದು ತೀವ್ರಗಾಮಿಗಳ ನಿರ್ಧಾರವನ್ನು ಬಲಪಡಿಸಿದವು. ಕಲ್ಕತ್ತ ಕಾಂಗ್ರೆಸ್ಸಿನಲ್ಲಿ ದಾದಾಬಾಯಿ ನವರೋಜಿ ಅವರು ಸ್ವಯಂಮಾಡಳಿತ ಅಥವಾ ವಸಾಹತುಗಳಲ್ಲಿರುವಂತಹ ಸ್ವರಾಜ್ಯವೇ ಕಾಂಗ್ರೆಸ್ಸಿನ ಗುರಿ ಎಂಬುದಾಗಿ ತೀವ್ರಗಾಮಿಗಳ ಭಾವನೆಯನ್ನು ಘೋಷಣೆ ಮಾಡಿದರು.[೬]

ಅಖಿಲ ಭಾರತ ಮಟ್ಟದ ವಸಾಹತು ವಿರೋಧಿ ರಾಷ್ಟ್ರೀಯ ಚಟುವಟಿಕೆಯು ದಕ್ಷಿಣ ಭಾರತದ ಮೇಲೆ ಏನೂ ಪರಿಣಾಮವುಂಟು ಮಾಡಲಿಲ್ಲವೆಂದು ಹೇಳಲಾಗುವುದಿಲ್ಲ. ಸಂಪತ್ತಿನ ಸೂರೆಯ ಪರಿಣಾಮ ಇದ್ದೇ ಇತ್ತು. ಜಿ. ಸುಬ್ರಮಣ್ಯ ಅಯ್ಯರ್ ಈ ತತ್ವದ ಪ್ರಮುಖ ಪ್ರತಿಪಾದಕರಾಗಿದ್ದರು. ಈ ವಿಷಯದಲ್ಲಿ ದೇಶೀಯ ಸಂಸ್ಥಾನಗಳ ರಾಷ್ಟ್ರೀಯವಾದಿಗಳು ಹಿಂದೆ ಬೀಳಲಿಲ್ಲ. ಅದೇ ಪ್ರಕಾರವಾಗಿ ಸ್ವದೇಶಿ ಚಳುವಳಿಯನ್ನು ಸಹ ಪ್ರತಿಪಾದಿಸಲಾಯಿತು.

ಆದರೆ ಸಾಮಾನ್ಯವಾಗಿ ಆ ಚಟುವಟಿಕೆ ಅಷ್ಟು ಚುರುಕಾಗಿರಲಿಲ್ಲ. ಬಂಗಾಳ ಮತ್ತು ಬೊಂಬಾಯಿ ಪ್ರಾಂತ್ಯಗಳ ಉಗ್ರವಾದಿಗಳು ಸ್ವದೇಶಿ ಹಾಗೂ ವಿದೇಶಿ ವಸ್ತ್ರ ಬಹಿಷ್ಕಾರ ಚಳುವಳಿಗಳನ್ನು ಸಂಘಟಿಸುವಾಗ ಬಹುತೇಕ ದಕ್ಷಿಣದ ಕಾಂಗ್ರೆಸ್ಸಿಗರು ಈ ಚಳುವಳಿಗಳಿಗೆ ವಿಮುಖರಾಗಿ ಉಳಿದರು. ಚಳುವಳಿಗೆ ಜನಸ್ತೋಮವನ್ನು ಪ್ರಚೋದಿಸಿ ತರಬೇಕೆಂದು ತಿಲಕರು ಶ್ರಮಪಡುತ್ತಿದ್ದರು. ಸ್ವದೇಶಿ ಚಳುವಳಿ ಹಾಗೂ ರಾಷ್ಟ್ರೀಯವಾದಿ ಸಂದರ್ಭದಲ್ಲಿ ಉಂಟಾದ ತೊಂದರೆಯ ಪರಿಣಾಮವಾಗಿ ಬಂದರು ಪಟ್ಟಣವಾದ ಟ್ಯೂಟಿಕಾರಿನಲ್ಲಿ ವಿ.ಓ. ಚಿದಂಬರಂ ಪಿಳ್ಳೈ ಹಾಗೂ ಇತರರು ಕೂಡಿಕೊಂಡು ಸ್ವದೇಶಿ ಹಡಗು ಸಂಸ್ಥೆಯನ್ನು ಸ್ಥಾಪಿಸಿದರು. ಅಲ್ಲಿ ಸರಕು ಸಾಗಾಣಿಕೆಯಲ್ಲಿ ಕಡಿಮೆ ದರ ವಿಧಿಸುತ್ತಿದ್ದ ಕಾರಣ ಯುರೋಪಿಯನ್ನರ ಯಜಮಾನಿಕೆಯಲಿದ್ದ ಕಂಪನಿಗಳ ಪಾಲಿಗೆ ಇವು ಮುಳ್ಳಾದವು. ಸ್ವದೇಶಿ ತತ್ವ ಪ್ರತಿಪಾದಕರಾದ ಸುಬ್ರಮಣ್ಯ ಶಿವ ಹಾಗೂ ಪಿಳ್ಳೈರವರನ್ನು ದಸ್ತಗಿರಿ ಮಾಡಿದಾಗ ಈ ವ್ಯಕ್ತಿಗಳು ಗಿರಣಿ ಕಾರ್ಮಿಕರನ್ನು ಸಂಘಟಿಸಿದ್ದರೂ ಕೂಡ ಯುರೋಪಿಯನ್ನರ ಗಿರಣಿಗಳಲ್ಲಿ ಕೆಲಸ ಮಾಡುತ್ತಿದ್ದ ಕಾರ್ಮಿಕರು ಮುಷ್ಕರ ಹೂಡಿದರಲ್ಲದೆ ತಮ್ಮ ನಾಯಕರನ್ನು ಬಿಡುಗಡೆ ಮಾಡಬೇಕೆಂದು ಮೆರವಣಿಗೆ ನಡೆಸಿದರು. ಹೃದಯಹೀನ ಯುರೋಪಿಯನ್ ಅಧಿಕಾರಿಶಾಹಿಯೂ ಗುಂಡು ಹಾರಿಸಲು ಮುಂದಾಯಿತಲ್ಲದೆ, ಮುಷ್ಕರ ಹೂಡಿದ್ದವರಲ್ಲಿ ಮೂವರನ್ನು ಕೊಂದಿತು. ತುಳಿತಕ್ಕೊಳಗಾದ ಕಾರ್ಮಿಕರನ್ನು ಸಂಘಟಿಸುವುದರ ಮೂಲಕ ಸ್ವದೇಶಿ ನಾಯಕರು ರಾಷ್ಟ್ರೀಯ ಚಳುವಳಿಯನ್ನು ಬಲಪಡಿಸಿದರು. ಇದರಿಂದ ಹೆಚ್ಚು ಕ್ರಿಯಾಶೀಲತೆ ಪ್ರಾಪ್ತವಾಗುವುದರ ಜೊತೆಗೆ ವಸಾಹತುಶಾಹಿ ವಿರೋಧದ ಹೋರಾಟಕ್ಕೆ ವಿಶಾಲವಾದ ತಳಹದಿ ನಿರ್ಮಾಣವಾಯಿತು. ಸ್ವದೇಶಿ ಕುರಿತ ಗಾಂಧಿ ಬರೆದ ಲೇಖನವು ಓದುಗರಲ್ಲಿ ಬಹಳ ಆಸಕ್ತಿಯನ್ನು ಉಂಟು ಮಾಡಿತು. ಅದು ಸ್ವಾತಂತ್ರ್ಯ ವಿಚಾರವನ್ನು ಕೆರಳಿಸಿತು. ಈ ಹೊಸ ಸ್ವದೇಶಿಗೂ ಹಿಂದಿನ ಸ್ವದೇಶಿಗೂ ವ್ಯತ್ಯಾಸವೇನು? ಎಂಬ ಶೀರ್ಷಿಕೆ ಯುಳ್ಳ ಲೇಖನ ಬರೆದ ಗಾಂಧಿ ಅದರ ಇತರ ಸಮಸ್ಯೆಗಳನ್ನು ಈ ರೀತಿ ವಿವೇಚಿಸಿದರು. "ಹಿಂದಿನ ಸ್ವದೇಶಿಯು ಉತ್ಪಾದನೆಯ ವಿಧಾನ, ಉತ್ಪನ್ನ ಅಥವಾ ಉತ್ಪನ್ನವಾದ ವಸ್ತುವಿನ ಭವಿಷ್ಯ ಇತ್ಯಾದಿ ಯಾವ ವಿಷಯವನ್ನು ಗಣನೆಗೆ ತೆಗೆದುಕೊಳ್ಳದೆ ಉತ್ಪತ್ತಿಯಾದ ವಸ್ತುಗಳ ಸ್ವದೇಶ ಜನ್ಯ ಎಂಬ ಅಂಶವನ್ನು ಮಾತ್ರ ಪ್ರಧಾನ ಮಾಡಿತ್ತು. ನಮ್ಮ ಸ್ವದೇಶಿ ಸಂಸ್ಥೆಗಳು ಎಲ್ಲ ಗ್ರಾಮ ಕೈಗಾರಿಕೆಗಳನ್ನು ಕಂಡು ಹಿಡಿದು ಅವು ಹೇಗೆ ಅಭಿವೃದ್ಧಿ ಹೊಂದುತ್ತಿವೆ" ಎಂಬುದನ್ನು ಪರಿಶೀಲಿಸಲು ನಾನು ಅವಕಾಶವೀಯುತ್ತೇನೆ.[೭]

೧೯೦೬ರ ಕಾಂಗ್ರೆಸ್ಸಿನ ಕಲ್ಕತ್ತ ಅಧಿವೇಶನವು ಸ್ವರಾಜ್ಯವೇ ತನ್ನ ಮೂಲಗುರಿ ಎಂದು ಘೋಷಿಸಿದಾಗ ಸ್ವದೇಶಿ, ವಿದೇಶಿ ವಸ್ತುಬಹಿಷ್ಕಾರ ಮತ್ತು ರಾಷ್ಟ್ರೀಯ ಶಿಕ್ಷಣ ಇವುಗಳು ಈ

ಗುರಿಯನ್ನು ತಲುಪುವ ಸಾಧನಗಳೆಂದು ತಿಳಿಸಿತು. ಆ ಸಂದರ್ಭದಲ್ಲಿ ಕರ್ನಾಟಕ ಸಂಪೂರ್ಣವಾಗಿ ಆ ಚಳುವಳಿಯಲ್ಲಿ ಭಾಗವಹಿಸಿ ಈ ಎಲ್ಲ ಸಾಧನಗಳನ್ನು ಧಾರಾಳವಾಗಿ ಬಳಸಿತು. ೧೯೦೬ರಲ್ಲಿ ತಿಲಕರು ಬೆಳಗಾವಿಗೆ ಭೇಟಿ ಇತ್ತು ಸ್ವರಾಜ್ಯದ ಬಗ್ಗೆ ಭಾಷಣ ಮಾಡಿದರು. ಅಪಾರ ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ಭಾಗವಹಿಸಿದರು. ತಿಲಕರ ಸಂದೇಶವೆಂದರೆ ಸ್ವರಾಜ್ಯ ಹಾಗೂ ಸ್ವದೇಶಿ ಚಳುವಳಿ ಮಾತ್ರ ಪರಕೀಯರ ಆಳ್ವಿಕೆಯಿಂದ ದೇಶವನ್ನು ರಕ್ಷಿಸಬಹುದು ಎಂಬುದಾಗಿತ್ತು. ತಿಲಕರ ಭಾಷಣಗಳ ಪರಿಣಾಮವಾಗಿ ವಿದೇಶಿ ವಸ್ತುಗಳನ್ನು ಬೆಂಕಿಯಲ್ಲಿ ಸುಡುವ ಕಾರ್ಯಕ್ರಮ ನಡೆಯಿತು. ರಾಣೆಬೆನ್ನೂರಿನಲ್ಲಿ ವಿದೇಶಿ ವಸ್ತುಗಳನ್ನು ಸುಟ್ಟರು. ಧಾಬೋಟ ಹಾಗೂ ಜಾನಸನ್ ಸಕ್ಕರೆಯನ್ನು ಉಪಯೋಗಿಸುವುದಿಲ್ಲವೆಂದು ಧಾರವಾಡದಲ್ಲಿ ಜನರು ಪ್ರತಿಜ್ಞೆ ಮಾಡಿದರು. ಗಂಗಾಧರರಾವ್ ದೇಶಪಾಂಡೆಯವರು ಸಹ ಕಾಂಗ್ರೆಸ್ ಸೇರಿ ಜನರು ತಮ್ಮ ವಿದೇಶಿ ಉಡುಪುಗಳನ್ನು ಬೆಂಕಿಗೆ ಎಸೆಯಬೇಕೆಂದು ಹುರಿದುಂಬಿಸಿದರು. ಧಾರವಾಡದ ಆರ್.ಎಸ್. ಹುಕ್ಕೇರಿಕರ್ ಅಂತಹವರು ತಾವು ತೊಟ್ಟಿದ್ದ ಬಟ್ಟೆ ವಿದೇಶಿ ಬಟ್ಟೆಯೇ ಇಲ್ಲವೇ ಎಂಬುದನ್ನು ಪರೀಕ್ಷಿಸದೆಯೇ ಕಳಚಿ ಬೆಂಕಿಗೆ ಎಸೆದಿದ್ದರು.

ಕರ್ನಾಟಕದಲ್ಲಿ ತಿಲಕರು ಹಾಗೂ ಸ್ವದೇಶಿ ಚಳುವಳಿಗಳಿಂದ ಪ್ರಭಾವಿತರಾದ ನಾಯಕರಲ್ಲಿ ಪ್ರಮುಖರಾದವರು ಆಲೂರು ವೆಂಕಟಾರಾಯರು. ಇವರು ತಿಲಕ್ ಹಾಗೂ ಗೋಖಲೆಯವರಿಂದ ನೇರವಾಗಿ ಕಲಿತಿದ್ದರು. ಬ್ರಿಟಿಷರನ್ನು ವಿರೋಧಿಸಿ ತಿಲಕರು ಮಾತನಾಡುವಾಗ ಆಲೂರರಿಗೆ ಸ್ಫೂರ್ತಿ ದೊರೆಯಿತು. ೧೯೦೫ರ ಬಂಗಾಳದ ವಿಭಜನೆಯ ಸಂದರ್ಭದಲ್ಲಿ ಆಲೂರು ವೆಂಕಟರಾಯರು ತಮ್ಮ ವಕೀಲಿ ವೃತ್ತಿಗೆ ಧಾರವಾಡದಲ್ಲಿ ವಿದಾಯ ಹೇಳಿ ಸಂಪೂರ್ಣವಾಗಿ ವಿದೇಶಿವಸ್ತು ನಿರಾಕಾರಣ ಚಳುವಳಿಯಲ್ಲಿ ತೊಡಗಿದರು. ಸೀಮೆಎಣ್ಣೆ, ಸಕ್ಕರೆ, ಟೀ, ಕಾಫಿಯಿಂದ ಹಿಡಿದು ಬೆಂಕಿಕಡ್ಡಿ ಯವರೆಗೆ ಎಲ್ಲಾ ವಸ್ತುಗಳನ್ನು ಸಹ ಅವು ವಿದೇಶಿಯರಿಂದ ಪ್ರಾರಂಭಿಸುವ ಚಿನ್ಹೆಯಾಗಿ ವಿರೋಧಿಸಿದರು. ಆಲೂರು ವೆಂಕಟರಾಯರು ಧಾರವಾಡದಲ್ಲಿ ಕನ್ನಡ ರಾಷ್ಟ್ರೀಯ ಶಾಲೆಗಳನ್ನು ತೆರೆದರು. ಸ್ವದೇಶಿ ಚಳುವಳಿಯನ್ನು ಆಲೂರು ವೆಂಕಟರಾಯರು ಸ್ವಾವಲಂಬನೆಯ ಅಭಿವ್ಯಕ್ತಿಯಾಗಿ ಮನಗಂಡಿದ್ದರು. ಹಾಗಾಗಿ ಇದು ಸಾಧ್ಯವಾಗಬೇಕಾದರೆ ದೇಶಿಯವಾದ ಕೈಗಾರಿಕೀಕರಣದಿಂದ ಮಾತ್ರ ಸಾಧ್ಯವೆಂದು ಕೂಡ ಅವರಿಗೆ ಅನ್ನಿಸಿತು. ತಮ್ಮ ಹುಟ್ಟೂರಾದ ಆಲೂರಿನಲ್ಲಿಯೇ ನೂಲು ತಯಾರಿಕಾ ಘಟಕವೊಂದನ್ನು ವೆಂಕಟರಾಯರು ಸ್ಥಾಪಿಸಿದರು. ಕರ್ನಾಟಕದಲ್ಲಿ ಸ್ವದೇಶಿ ಚಳುವಳಿಯಲ್ಲಿ ದುಡಿಯುತ್ತಿದ್ದ ಇನ್ನೊಬ್ಬ ಧೀಮಂತ ವ್ಯಕ್ತಿಯೆಂದರೆ ಎನ್.ಎಸ್. ಹರ್ಡೀಕರ್. ಇವರು ಮರಾಠಿ ಭಾಷೆಯನ್ನು ಚೆನ್ನಾಗಿ ತಿಳಿದಿದ್ದರು. "ಕೇಸರಿ" ಪತ್ರಿಕೆಯನ್ನು ತಪ್ಪದೇ ಓದುತ್ತಿದ್ದ ಅವರು ತಿಲಕರಿಂದ ಬಹಳವಾಗಿ ಪ್ರಭಾವಿತರಾಗಿದ್ದರು. ಈ ಪತ್ರಿಕೆಯ ಮೂಲಕ ಸ್ವದೇಶಿ

ಮಹತ್ವವನ್ನು ಅರಿತವರಾಗಿ ಪರಕೀಯರ ಆಳ್ವಿಕೆಯಿಂದ ಭಾರತವನ್ನು ಬಿಡುಗಡೆ ಮಾಡಲು ದುಡಿಮೆಗೆ ಸನ್ನದ್ಧರಾದದ್ದು ಸಹಜವೆ. ಗಂಗಾಧರರಾವ್ ದೇಶಪಾಂಡೆ ಅವರು ವಿದೇಶಿ ವಸ್ತುಗಳ ನಿಷೇಧ, ಸ್ವದೇಶಿ ಪದಾರ್ಥಗಳ ಉತ್ತೇಜನ ಹಾಗೂ ರಾಷ್ಟ್ರೀಯ ಶಿಕ್ಷಣಕ್ಕೆ ಬೆಂಬಲ ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ಇವರು ಸ್ಥಳೀಯ ಶಾಲೆ ಸಮಿತಿಯ ಅಧ್ಯಕ್ಷರಾದಾಗ ತಮ್ಮ ಸ್ಥಾನವನ್ನು ಉಪಯೋಗಿಸಿಕೊಂಡು ಉಪಾಧ್ಯಾಯರಿಗೆ ಸ್ವದೇಶಿ ಚಳುವಳಿಯ ಬಗ್ಗೆ ತಿಳಿಯ ಹೇಳಿದರು. ಈ ಉಪಾಧ್ಯಾಯರು ತಮ್ಮ ಶಿಷ್ಯರಿಗೆ ಚಳುವಳಿಯ ಮಹತ್ವವನ್ನು ತಿಳಿಸಿದರು. ಈ ರೀತಿ ಪ್ರಥಮವಾಗಿ ಬಂಗಾಳದಲ್ಲಿ ಆರಂಭವಾದ ಸ್ವದೇಶಿ ಚಳುವಳಿ ಇಡೀ ಭಾರತವನ್ನು ವ್ಯಾಪಿಸಿತು. ಇದನ್ನು ನಾವು ಪ್ರಥಮ ಹಂತ ಎಂದು ಕರೆಯಬಹುದು.[೮] ಸ್ವದೇಶಿ ಚಳುವಳಿಯ ಇನ್ನೊಬ್ಬ ನೇತಾರರು ಕಾರ್ನಾಡ್ ಸದಾಶಿವರಾಯರು. ಇವರು ತಮ್ಮ ಸ್ವಂತ ಮನೆಯಲ್ಲೇ "ತಿಲಕ ವಿದ್ಯಾಶಾಲೆ" ಎಂಬ ಹೆಸರಿನ ಒಂದು ರಾಷ್ಟ್ರೀಯ ಶಾಲೆಯನ್ನು ತೆರೆದು ಮಕ್ಕಳಿಗೆ ಸಾಂಪ್ರದಾಯಿಕವಾದ ಮಾದರಿಯ ಶಿಕ್ಷಣದ ಜೊತೆಗೆ ಹಿಂದಿಯನ್ನು ಕಲಿಸಿದರು. ನೂಲುವುದು, ನೇಯುವುದು ಹಾಗೂ ಕುಶಲಕಲೆಯನ್ನು ಕಲಿಸಿದರು. ತಿಲಕರ ಪ್ರಭಾವದಿಂದ ದೇಶದಲ್ಲಿ ಬೇರೆ ಬೇರೆ ಭಾಗಗಳಲ್ಲಿ ಸ್ವದೇಶಿ ಕಾರ್ಖಾನೆಗಳು ಸ್ಥಾಪನೆಯಾದವು. ಇದೇ ರೀತಿ ಕರ್ನಾಟಕದ ಗದಗ, ಹುಬ್ಬಳ್ಳಿ, ಬಳ್ಳಾರಿ, ದಾವಣಗೆರೆಯಲ್ಲಿ ಸ್ಥಾಪನೆಗೊಂಡ ಕಾರ್ಖಾನೆಗಳು ಸ್ವದೇಶಿ ಚಳುವಳಿಯ ಶಿಶುಗಳು ಎನ್ನಬೇಕು. ಕೈಮಗ್ಗಕ್ಕೆ ಹೆಚ್ಚಿನ ಪ್ರೋತ್ಸಾಹ ದೊರಕಿತು. ಕೈಮಗ್ಗದ ಪದಾರ್ಥಗಳನ್ನು ಮಾರಲು ಬೇರೆ ಬೇರೆ ಅಂಗಡಿಗಳನ್ನು ತೆರೆಯಲಾಯಿತು. ಇದರಿಂದಾಗಿ ವಿದೇಶಿ ವಸ್ತುಗಳ ಆಮದಿನಲ್ಲಿ ಇದಕ್ಕಿದ್ದಂತೆಯೇ ಕಡಿಮೆಯಾಯಿತು.

ಕರ್ನಾಟಕದ ಜನರ ಮನಸ್ಸಿನ ಮೇಲೆ ಈ ಬಗೆಯ ಪ್ರಯತ್ನಗಳಿಂದ ಸ್ವದೇಶಿ ಚಳುವಳಿಯು ನೆಲೆಯೂರಲು ಸಹಾಯಕವಾಗಿತ್ತಾದರೂ ಚಳುವಳಿಗೆ ಪೂರ್ಣಪ್ರಮಾಣದ ಯಶಸ್ಸು ಬಂದಿರಲಿಲ್ಲ. ಮಹಾತ್ಮ ಗಾಂಧೀಜಿಯವರು ಭಾರತೀಯ ರಾಜಕೀಯ ವಲಯದಲ್ಲಿ ಕಾಣಿಸಿಕೊಂಡಾಗ ಪರಿಸ್ಥಿತಿ ಬದಲಾವಣೆ ಕಂಡಿತು. ಮಹಾತ್ಮ ಗಾಂಧೀಜಿಯವರು ಭಾರತವನ್ನು ಸ್ವಲ್ಪ ಸ್ವಲ್ಪವಾಗಿ ಸ್ವಾತಂತ್ರ್ಯದ ಕಡೆಗೆ ತೆಗೆದುಕೊಂಡು ಹೋದರು. ಸ್ವದೇಶಿ ಬಗ್ಗೆ ಪ್ರೇಮ ಹಾಗೂ ರಾಷ್ಟ್ರ ಪ್ರೇಮದ ಮಹತ್ವವನ್ನು ಗಾಂಧೀಜಿಯವರು ಜನರಿಗೆ ತಿಳಿಸಿದರು. ವಿದೇಶಿಯರ ಆಳ್ವಿಕೆಯಲ್ಲಿ ಏನು ಗೊತ್ತಿಲ್ಲದಂತೆ ಇರುವುದನ್ನು ಖಂಡಿಸಿದರು. ಬ್ರಿಟಿಷ್ ಪದಾರ್ಥಗಳನ್ನು ಸಾರಾಸಗಟಾಗಿ ನಿರಾಕರಿಸುವುದು ಹೆಡ್ಡತನವೆಂದೂ, ಗ್ರಂಥಗಳು ಬ್ರಿಟಿಷರವೆಂದು ತ್ಯಜಿಸುವುದು ವಿವೇಕದ ಲಕ್ಷಣವಲ್ಲವೆಂದೂ ಗಾಂಧೀಜಿ ತಿಳಿಸಿದರು. ವಿದೇಶಿ ವಸ್ತುಗಳನ್ನು ನಿರಾಕರಿಸುವ ನಕರಾತ್ಮಕ ಮಾರ್ಗದಿಂದಷ್ಟೇ ಗಾಂಧೀಜಿ ತೃಪ್ತರಾಗಿರಲಿಲ್ಲ. ಭಾರತೀಯ ಗುಡಿ ಕೈಗಾರಿಕೆಯನ್ನು

ನಿರ್ಮಾಣ ಮಾಡುವಂತೆ ಸಕಾರಾತ್ಮಕವಾದ ಮಾರ್ಗದ ಬಗ್ಗೆ ಅವರು ಹೆಚ್ಚು ಉತ್ಸಾಹಿಗಳಾಗಿದ್ದರು. ಹಾಗಾಗಿ ವಿದೇಶಿ ವಸ್ತು ನಿರಾಕರಣೆ ಎಂಬುದು ಚರಕದಿಂದ ನೂಲುವುದು ಹಾಗೂ ಗುಡಿ ಕೈಗಾರಿಕೆಯ ಪುನಃಶ್ಚೇತನವೆಂಬ ಅರ್ಥವನ್ನು ಪಡೆದುಕೊಂಡಿತು.[೯]

ದ್ವಿತೀಯ ಹಂತದಲ್ಲಿ ಗಾಂಧೀಜಿಯವರ ಪ್ರವೇಶದಿಂದ ಸ್ವದೇಶಿ ಚಳುವಳಿಯು ಇನ್ನಷ್ಟು ಪ್ರಚಾರವನ್ನು ಪಡೆದುಕೊಂಡು ಮುಂದುವರಿಯಿತು. ಗಾಂಧೀಜಿಯವರ ಕರೆಗೆ ಕರ್ನಾಟಕದಲ್ಲಿ ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರ ಮೂಲಕ ಉತ್ತಮ ಪ್ರತಿಸ್ಪಂದನೆ ದೊರೆಯಿತು. ಸ್ವದೇಶಿ ಚಳುವಳಿಯ ಸಂಕೇತವಾದ ಖದ್ದರ್ ಕರ್ನಾಟಕದಲ್ಲಿ ಪ್ರಾರಂಭದಿಂದಲೂ ಕಾಣಿಸಿಕೊಂಡಿತು. ಖಾದಿ ಆಂದೋಲನದ ಪರಿಣಾಮವಾಗಿ ವಿದೇಶಿ ವಸ್ತುಗಳನ್ನು ಕರ್ನಾಟಕದ ಎಲ್ಲ ಕಡೆ ಬಹಿರಂಗವಾಗಿ ಸುಡಲಾಯಿತು. ಹರ್ಡೇಕರ್‌ರವರ ಮಂಜಪ್ಪನವರು ಗಾಂಧೀಜಿಯವರ ಕಟ್ಟ ಅನುಯಾಯಿಯಾಗಿದ್ದರಲ್ಲದೆ ಅವರನ್ನು "ಕರ್ನಾಟಕದ ಗಾಂಧಿ" ಎಂದು ಕೂಡ ಕರೆಯಲಾಗುತ್ತಿತ್ತು. ಹರ್ಡೇಕರ್‌ರ ಅಧ್ಯಕ್ಷತೆಯಲ್ಲಿ ಮೊಟ್ಟಮೊದಲು ಕರ್ನಾಟಕ ಖಾದಿ ಸಮ್ಮೇಳನವು ಧಾರವಾಡದಲ್ಲಿ ನಡೆಯಿತು. ಹುಕ್ಕೇರಿಕರ್, ಎಚ್.ಆರ್. ವೆಂಕಟರಾಮಯ್ಯ ಹಾಗೂ ಜಾಲಿಹಾಳ್‌ಅನಂತರಾಮ್ ಅವರ ಸಂಯುಕ್ತ ಪ್ರಯತ್ನದ ಫಲವಾಗಿ ೧೯೩೦ರ ದಶಕದಲ್ಲಿ ಅಖಿಲ ಕರ್ನಾಟಕ ಸ್ವದೇಶಿ ಸಭಾ ಪ್ರಾರಂಭವಾಯಿತು. ಇದರ ಮೂಲಕ ವಿದೇಶಿ ವಸ್ತುಗಳ ಮಾರಾಟದ ವಿರುದ್ಧ ಮುಷ್ಕರ ಹೂಡಿ ವ್ಯಾಪಾರಿಗಳ ಸಂಘಟನೆಗಳು ಪ್ರತಿಭಟನೆ ವ್ಯಕ್ತಪಡಿಸಿದವು. ಕಾರವಾರ, ದಾವಣಗೆರೆ, ಕೊಟ್ಟೂರು, ಕುಂದಾಪುರ ಹಾಗೂ ಮಂಗಳೂರು ಇವು ಸ್ವದೇಶಿ ಚಳುವಳಿಯಲ್ಲಿ ಮುಂಚೂಣಿಯಲ್ಲಿದ್ದವು. ವಿದೇಶಿ ವಸ್ತು ನಿರಾಕರಣೆಯಲ್ಲಿ ಹೆಂಗಸರೂ ಸಹ ಮನೆ ಮನೆಗೂ ಹೋಗಿ ಅವುಗಳನ್ನು ಕಲೆ ಹಾಕಿ ಬೆಂಕಿಯಲ್ಲಿ ಸುಡುವ ಕಾರ್ಯದಲ್ಲಿ ತೊಡಗಿದರು.[೧೦] ಮಹಾತ್ಮ ಗಾಂಧೀಜಿಯವರ ಸೂತ್ರ ಸ್ವದೇಶಿ. ಅವರು ಅದನ್ನು ಹೀಗೆ ವಿವರಿಸಿದರು. "ಅದು ನಮ್ಮ ಅಂತರಂಗದಲ್ಲಿರುವ ಒಂದು ಭಾವನೆ, ದೂರದ್ದನ್ನು ಬಿಟ್ಟು, ನಮ್ಮ ಹತ್ತಿರದ ಸುತ್ತಮುತ್ತಲಿನ ಉಪಯೋಗ ಮತ್ತು ಅದರ ಸೇವೆಗೆ ನಮ್ಮನ್ನು ಮಿತಗೊಳಿಸುವ ಭಾವನೆ" ಎಂದೇ ಅವರು ದೈಹಿಕ ಶ್ರಮಕ್ಕೆ ಹೆಚ್ಚು ಮಹತ್ವಕೊಟ್ಟರು. ಅದನ್ನು ಅವರು "ಅನ್ನದ ದುಡಿಮೆ ಮತ್ತು ಚರಕ" ಎಂದು ಕರೆದರು.[೧೧] ೧೯೨೧ ರ ವೇಳೆಗೆ ಖಾದಿ ಪ್ರಚಾರವು ದೇಶದ ಸಮಗ್ರ ಚಳುವಳಿಯ ಒಂದು ಅಂಗವಾಯಿತು. ರಾಷ್ಟ್ರೀಯ ಕಾಂಗ್ರೆಸ್ ೧೯೨೩ರಲ್ಲಿ ಅಖಿಲ ಭಾರತ ಖಾದಿ ಮಂಡಳಿಯನ್ನು ಸ್ಥಾಪಿಸಿತು. ಈ ಸಂಘದ ಅಡಿಯಲ್ಲಿ ಅದೇ ವರ್ಷ ಹುದ್ಲಿಯಲ್ಲಿ ಖಾದಿ ಕೇಂದ್ರವನ್ನು ಗಂಗಾಧರರಾವ್ ದೇಶಪಾಂಡೆಯವರು ಸ್ಥಾಪಿಸಿದರು.[೧೨] ಇದೇ ರೀತಿಯಾಗಿ ೧೯೨೩ ರಲ್ಲಿ ತುಮಕೂರಿನಲ್ಲಿ ಜಿಲ್ಲಾ ಕಾಂಗ್ರೆಸ್ ಸಮಿತಿಯು ಅಸ್ತಿತ್ವಕ್ಕೆ ಬಂದಿತು. ಈ ಸಮಿತಿಯ ಮುಖಂಡರಾದ ಕೆ.

ರಂಗೈಯ್ಯಂಗಾರ್, ತಾಳಿಕೆರೆ ಸುಬ್ರಮಣ್ಯಂ, ಬಿ.ಸಿ. ನಂಜುಂಡಯ್ಯ, ಇವರು ೨೬-೧೨-೧೯೨೪ ರಂದು ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ಬೆಳಗಾಂನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನಕ್ಕೆ ಹೋಗಿದ್ದರು. ಇಲ್ಲಿ ಗಾಂಧೀಜಿಯವರು ಚರಕಾ ಕಾರ್ಯಕ್ರಮದ ಬಗ್ಗೆ ವಿವರಣೆ ನೀಡುತ್ತಾ, ಚರಕಾಕ್ಕೆ ಯಾವುದೇ ಭೇದ ಭಾವವಿಲ್ಲ, ಒಂಟಿಯಾಗಿಯೂ ಸಹ ಮಾಡಬಹುದು. ಆದರೆ ಚರಕಾ ಕಾರ್ಯಕ್ರಮವು ಅಪಾರವಾಗಿ ನಡೆಯದೇ ಇದ್ದರೆ ವಿದೇಶಿ ವಸ್ತ್ರ ಬಹಿಷ್ಕಾರ ಸಂಪೂರ್ಣವಾಗಿ ನಡೆಯುವುದಿಲ್ಲ. ಆದ್ದರಿಂದ ಚರಕಾ ಕಾರ್ಯಕ್ರಮ ಪೂರ್ಣ ಪ್ರಮಾಣದಲ್ಲಿ ನಡೆಯಬೇಕು ಎಂದು ತಿಳಿಸಿದರು.[೧೩] ರಾಟಿಯ ಒಂದೊಂದು ಸುತ್ತಿನಿಂದಲೂ ಸ್ವರಾಜ್ಯ ನನಗೆ ಹತ್ತಿರ ಹತ್ತಿರ ಬರುತ್ತದೆ ಎಂದು ನನಗೆ ಅನಿಸುತ್ತದೆ. ಈ ಸುತ್ತುಗಳನ್ನು ೩೦ ಕೋಟಿ ಜನಸಂಖ್ಯೆಯಿಂದ ಗುಣಿಸಿ ಅದರಿಂದ ಸ್ವರಾಜ್ಯ ಪ್ರಾಪ್ತಿಗೆ ಎಷ್ಟು ವೇಗ ಬರುತ್ತದೆಯೋ ನೋಡಿ. ಈ ಗತಿ ಈ ವೇಗ ಬರಬೇಕಾದರೆ ನೂಲುವ ಕ್ರಿಯೆಯಲ್ಲಿ ಸ್ವರಾಜ್ಯ ಸಂಪಾದನೆಯ ಶಕ್ತಿ ಅಡಗಿದೆ ಎಂಬ ನನ್ನಲ್ಲಿರುವ ದೃಢ ವಿಶ್ವಾಸದ ಕಾವು ನಿಮ್ಮಲ್ಲುಂಟಾಗಬೇಕೆಂದು ಜನತೆಯನ್ನು ಪ್ರಚೋದಿಸಿದರು. ಇದರಿಂದ ಪ್ರಭಾವಿತರಾದ ತುಮಕೂರು ಜಿಲ್ಲೆಯ ಕಾಂಗ್ರೆಸ್ ನಾಯಕರಾದ ಕೆ. ರಂಗೈಯ್ಯಂಗಾರ್, ತಾಳಿಕೆರೆ ಸುಬ್ರಮಣ್ಯಂರವರು ಖಾದಿ, ಸ್ವದೇಶಿ ಪ್ರಚಾರ ಮತ್ತು ವಿದೇಶಿ ಬಹಿಷ್ಕಾರವನ್ನು ಜಿಲ್ಲೆಯಲ್ಲಿ ಹಮ್ಮಿಕೊಂಡರು.[೧೪]

## ೨.೨. ಖಾದಿ ಪ್ರಚಾರ ಮತ್ತು ವಿದೇಶಿ ಬಹಿಷ್ಕಾರ

೧೯೨೭ರಲ್ಲಿ ಗಾಂಧೀಜಿಯವರು ಬೆಂಗಳೂರಿನ ನ್ಯಾಷನಲ್ ಹೈಸ್ಕೂಲ್ ಮೈದಾನದಲ್ಲಿ ಖಾದಿ ಚಳುವಳಿಯ ಉದ್ದೇಶ ಹಾಗೂ ಚರಕಗಳನ್ನು ಪ್ರದರ್ಶಿಸಿದ ದಕ್ಷಿಣ ಭಾರತ ಖಾದಿ ಪ್ರದರ್ಶನವನ್ನು ಉದ್ಘಾಟಿಸಿದರು. ಅನಂತರ ಗಾಂಧೀಜಿಯವರು ಮೈಸೂರು ಸಂಸ್ಥಾನದಲ್ಲಿ ಖಾದಿ ಪ್ರಚಾರಕ್ಕಾಗಿ ಪ್ರವಾಸ ಕೈಗೊಂಡು ೧೯೨೭ ಜುಲೈ ೧೪ರಂದು ತುಮಕೂರಿಗೆ ಭೇಟಿ ನೀಡಿದರು. ಈ ವೇಳೆಗಾಗಲೇ ತುಮಕೂರಿನ ಸಭೆಗೆ ಆಗಮಿಸಿದ್ದ ನಾಗರಿಕರು ಸಾಕಷ್ಟು ಖಾದಿಯನ್ನು ಧರಿಸಿದ್ದರು. ಆ ದಿನದಂದು ತುಮಕೂರು ಜಿಲ್ಲೆಯ ನಾಗರೀಕರು ಎರಡುಸಾವಿರದ ಇನ್ನೂರಐವತ್ತು ರೂಪಾಯಿಗಳನ್ನು, ವಿದ್ಯಾರ್ಥಿಗಳು ಮತ್ತು ಉಪಾಧ್ಯಾಯರು ಸೇರಿ ಎರಡುನೂರು ಐವತ್ತು ರೂಪಾಯಿಗಳನ್ನು, ಗೋ ಸಂರಕ್ಷಣೆಗಾಗಿ ಸ್ಥಾಪಿಸಿದ ಪ್ರಾಣಿ ದಯಾ ಪ್ರಚಾರಕ ಸಂಘದವರು ಎರಡು ನೂರು ರೂಪಾಯಿಗಳನ್ನು ಖಾದಿಯ ನಿಧಿಗೆ ಅರ್ಪಿಸಿದರು.[೧೫] ಈ ಸಂದರ್ಭದಲ್ಲಿ ಗಾಂಧೀಜಿಯವರು ಈಗಾಗಲೇ ತುಮಕೂರಿನಲ್ಲಿದ್ದ ಆದಿಕರ್ನಾಟಕವಸತಿ ಮತ್ತು ಔದ್ಯೋಗಿಕ ಶಿಕ್ಷಣ ಶಾಲೆಗೆ ಭೇಟಿ ನೀಡಲು ಪ್ರಕಟಿಸಿದರು. ಇದರಿಂದಾಗಿ ವಿದ್ಯಾರ್ಥಿ ನಿಲಯದ ಮೇಲ್ವಿಚಾರಕರು ರಾತ್ರೋ ರಾತ್ರಿಯೇ ಹೊಲಿಗೆ ಯಂತ್ರಗಳೊಂದಿಗೆ ದರ್ಜಿಗಳನ್ನು ಕರೆಸಿ, ವಿದ್ಯಾರ್ಥಿ ನಿಲಯದ ಎಲ್ಲಾ ವಿದ್ಯಾರ್ಥಿಗಳಿಗೂ ಖಾದಿಯ ಉಡುಪನ್ನು ಹೊಲಿಸಿ

ಕೊಟ್ಟರು. ಗಾಂಧೀಜಿ ವಿದ್ಯಾರ್ಥಿ ನಿಲಯಕ್ಕೆ ಭೇಟಿ ನೀಡಿದಾಗ ವಿದ್ಯಾರ್ಥಿಗಳೆಲ್ಲರು ಖಾದಿ ಬಟ್ಟೆಯನ್ನು ಧರಿಸಿ ಶಿಸ್ತಾಗಿ ವರ್ತಿಸಿದರು.[೧೬]

ಗಾಂಧೀಜಿಯವರು ಮರುದಿನ ಮಧುಗಿರಿಗೆ ಭೇಟಿ ನೀಡಿದರು. ಅಲ್ಲಿ ಅವರು ಮಾಡಿದ ಖಾದಿ ಪ್ರಚಾರದ ಭಾಷಣಗಳಿಂದ ಪ್ರಭಾವಿತರಾದ ಪಾವಗಡ ತಾಲ್ಲೂಕಿನ ಕೆ. ನಂಜುಂಡರಾವ್, ಸಾರಂಗಪಾಣಿ, ನರಸಿಂಗರಾವ್, ಇ.ಎಸ್.ವೆಂಕಟೇಶಗುಪ್ತ ಮುಂತಾದವರು ಪಾವಗಡದಲ್ಲಿ ೧೯೨೭ ರಲ್ಲಿ ತಾಲ್ಲೂಕ್ ಕಾಂಗ್ರೆಸ್ ಸಮಿತಿಯನ್ನು ಸ್ಥಾಪಿಸಿದರು. ಸಮಿತಿಯ ಅಧ್ಯಕ್ಷರಾದ ನಂಜುಂಡರಾವ್‌ರವರ ನಾಯಕತ್ವದಲ್ಲಿ ತಕಲಿಗಳಿಂದ, ಚರಕಗಳಿಂದಲೂ ನೂಲು ತೆಗೆಯುವುದು, ವಿದೇಶಿ ವಸ್ತ್ರ ಬಹಿಷ್ಕಾರಗಳನ್ನು ಬಹಳ ಭರದಿಂದ ನಡೆಸಿದರು. ಇದೇ ಸಮಯದಲ್ಲಿ ತಾಲ್ಲೂಕಿನಲ್ಲಿ ಸಾಕಷ್ಟು ಕೈ ಮಗ್ಗಗಳಿದುದ್ದರಿಂದ ಖಾದಿ ತಯಾರಿಕೆಯೂ ಬಹಳ ಹೆಚ್ಚಾಯಿತು.[೧೭] ಇದರಿಂದಾಗಿ ತಾಲ್ಲೂಕಿನಲ್ಲಿ ಖಾದಿ ಪ್ರಚಾರಕ್ಕೆ ಚಾಲನೆ ದೊರೆಯಿತು. ಗಾಂಧೀಜಿಯವರು ಜಿಲ್ಲೆಗೆ ಬಂದು ಹೋದ ಮೇಲೆ ಜನರಲ್ಲಿ ಸ್ವದೇಶಿ ಬಗ್ಗೆ, ವಿದೇಶಿ ಬಹಿಷ್ಕಾರದ ಬಗ್ಗೆ ಕಲ್ಪನೆಯೂ ಮೂಡಿಬಂತು.

೧೯೨೭ ರಲ್ಲಿ ತುಮಕೂರು ಜಿಲ್ಲೆಯ ತಿಪಟೂರಿನಲ್ಲಿ ವೆಂಕಟಪತಯ್ಯನವರು ವಿದೇಶಿ ವಸ್ತ್ರ ಬಹಿಷ್ಕಾರ, ವಸ್ತ್ರ ದಹನ ನಡೆಸಲು ಕರೆ ಕೊಟ್ಟರು. ಆಗ ಉತ್ಸಾಹಿ ನಾಯಕರಾದ ಎಸ್. ಆರ್. ಮಲ್ಲಪ್ಪ, ಹೆಚ್.ವಿ. ಗೋವಿಂದರಾಜು ಶೆಟ್ಟರು, ಬಿ. ವಿಶ್ವನಾಥ ಶೆಟ್ಟರು, ಎ. ಲಕ್ಷ್ಮಣರಾವ್ ರವರು ಸೇರಿ ತಿಪಟೂರಿನ ಕಲ್ಲೇಶ್ವರ ಸ್ವಾಮಿ ದೇವಸ್ಥಾನದ ಮೈದಾನದಲ್ಲಿ ವಿದೇಶಿ ಬಟ್ಟೆಗಳನ್ನು ರಾಶಿ ಹಾಕಿ ಬೆಂಕಿಯಿಟ್ಟು ಸುಟ್ಟು ಹಾಕಿದರು. ಅಷ್ಟೇ ಅಲ್ಲದೇ ಅಂದು ತಿಪಟೂರಿನಲ್ಲಿ ಪೂರ್ಣ ಬಂದ್ ಆಚರಿಸಿ, ಖಾದಿ ಬಟ್ಟೆಗಳನ್ನು ತೊಡುವ ಪ್ರತಿಜ್ಞೆಯನ್ನು ಕೈಗೊಂಡರು.[೧೮] ಇದೇ ರೀತಿಯಾಗಿ ೧೯೨೮ ರಲ್ಲಿ ತುರುವೇಕೆರೆಯಲ್ಲಿ ಮಾನಂ. ಶ್ರೀಕಂಠಯ್ಯ, ಎ.ಎನ್. ಸೀತಾರಾಮಯ್ಯ ಇನ್ನು ಕೆಲವರು ಕೈರಾಟಿಯಿಂದ ಖಾದಿಯನ್ನು ನೂಲುವುದು, ಸ್ವದೇಶಿ ಪ್ರಚಾರ, ಖಾದಿ ಪ್ರಚಾರದಂತಹ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಪ್ರಚಾರ ಕಾರ್ಯವನ್ನು ಹಮ್ಮಿಕೊಂಡಿದ್ದರು.[೧೯]

೧೯೨೩ ರಿಂದ ೧೯೨೮ ರ ೫ ವರ್ಷಗಳ ಅವಧಿಯಲ್ಲಿ ತುಮಕೂರು ಜಿಲ್ಲೆಯ ಖಾದಿ ಪ್ರಚಾರ ಎಷ್ಟು ಜನಪ್ರಿಯವಾಗಿತ್ತು ಎಂದರೆ ಸಾಮಾನ್ಯ ಜನರಿಂದ ಹಿಡಿದು ವರ್ತಕ ವರ್ಗದವರೆಗೂ ಎಲ್ಲಾ ನಾಗರಿಕರು ಖಾದಿಯನ್ನು ಧರಿಸತೊಡಗಿದರು. ಈ ಅವಧಿಯಲ್ಲಿ ಕಾಂಗ್ರೆಸ್ಸಿನ ಕಾರ್ಯಕರ್ತರಿಗೆ ಖಾದಿಯನ್ನು ಒದಗಿಸುವುದೇ ಒಂದು ಸಮಸ್ಯೆಯಾಯಿತು. ಈ ರೀತಿ ೧೯೨೯ ರ ವೇಳೆಗೆ ಜಿಲ್ಲೆಯಲ್ಲಿ ಖಾದಿ ಆಂದೋಲನ ತುಂಬಾ ಬಿರುಸಿನಿಂದ ನಡೆಯಿತು. ಈ ಹಿನ್ನೆಲೆಯಲ್ಲಿಯೇ ೧೯೨೯ ರ ಅಕ್ಟೋಬರ್ ೨ ಗಾಂಧಿ ಜಯಂತಿಯಂದು ಅಖಿಲ ಭಾರತ

ಚರಕಾ ಸಂಘದವರು ತುಮಕೂರಿನಲ್ಲಿ ಒಂದು ಖಾದಿ ವಸ್ತ್ರಾಲಯವೊಂದನ್ನು ಸ್ಥಾಪಿಸಿದರು. ಅದರ ಜವಾಬ್ದಾರಿಯನ್ನು ಹೊತ್ತು ಎಂ. ನೀಲಕಂಠರಾಯರು ಅದನ್ನು ಸ್ವಾತಂತ್ರ್ಯ ಹೋರಾಟದ ಭಾಗವೆಂದು ಮುನ್ನೆಡಿಸಿದರು. ಮುಂದೆ ಈ ಖಾದಿ ವಸ್ತ್ರಾಲಯವೇ ಸ್ವಾತಂತ್ರ್ಯ ಹೋರಾಟದ ಕೇಂದ್ರ ಹಾಗೂ ಹೋರಾಟಗಾರರ ಸೃಷ್ಟಿಗೆ ಒಂದು ನೆಲೆಯಾಯಿತು.[೨೦] ಈ ವಸ್ತ್ರಾಲಯದ ಅಡಿಯಲ್ಲಿ ಜಿಲ್ಲೆಯಲ್ಲಿ ಎಂ. ನೀಲಕಂಠರಾಯರ ಸಹಾಯದಿಂದ ಕೊರಟಗೆರೆ, ತಿಪಟೂರು, ಮಧುಗಿರಿ, ಪಾವಗಡ, ಮಿಡಿಗೇಶಿ ಇಟಕದಿಬ್ಬನಹಳ್ಳಿ, ಶಿರಾ, ಕುಣಿಗಲ್ಲು, ಗುಬ್ಬಿ ಮೊದಲಾದ ಸ್ಥಳಗಳಲ್ಲಿ ಸಣ್ಣ ಸಣ್ಣ ಖಾದಿ ಕೇಂದ್ರಗಳನ್ನು ತೆರೆದು ಖಾದಿ ಪ್ರಚಾರಕ್ಕೆ ಚಾಲನೆ ನೀಡಲಾಯಿತು.[೨೧]

೧೯೨೯ ಅಕ್ಟೋಬರ್ ೨ ರಂದು ಗಾಂಧಿಜಯಂತಿಯ ಪ್ರಯುಕ್ತ ಸಂಸ್ಥಾನದ ವಿವಿಧ ಸ್ಥಳಗಳಲ್ಲಿ ಖಾದಿ ಮಾರಾಟವನ್ನು ಹಮ್ಮಿಕೊಳ್ಳಲಾಗಿತ್ತು. ಅದರ ವಿವರಗಳು ಈ ಕೆಳಗಿನಂತೆ ಇವೆ.

| ಕ್ರ.ಸಂ. | ಖಾದಿ ಮಾರಾಟ ಮಾಡಿದ ಕೇಂದ್ರ | ಖಾದಿಯ ಮಾರಾಟದಿಂದ ಬಂದ ಹಣ |
|---|---|---|
| ೦೧ | ಬೆಂಗಳೂರು | ೪೧೫ |
| ೦೨ | ಚಿಕ್ಕಮಗಳೂರು | ೩೦೮ |
| ೦೩ | ದಾವಣಗೆರೆ | ೪೪೨ |
| ೦೪ | ಶಿವಮೊಗ್ಗ | ೪೧೨ |
| ೦೫ | ತುಮಕೂರು | ೪೯೨ |

ಒಟ್ಟು ೨೦೫೯ ರೂಪಾಯಿಗಳ ಖಾದಿ ಮಾರಾಟ ನಡೆಯಿತು.[೨೨] ಈ ಮೇಲಿನ ಸ್ಥಳಗಳಲ್ಲಿನ ಖಾದಿ ಮಾರಾಟವನ್ನು ಗಮನಿಸಿದಾಗ ತುಮಕೂರು ಜಿಲ್ಲೆಯಲ್ಲೇ ಅತಿ ಹೆಚ್ಚಿನ ಮೌಲ್ಯದ ಖಾದಿ ಮಾರಾಟವಾಗಿರುವುದು ಕಂಡು ಬರುತ್ತದೆ. ಇದರಿಂದಾಗಿ ಜಿಲ್ಲೆಯಲ್ಲಿಯೇ ಅತಿ ಹೆಚ್ಚು ಖಾದಿ ಪ್ರಚಾರ ಯಶಸ್ವಿಯಾಗಿದೆಯೆಂದು ತಿಳಿಯಬಹುದು. ಇದು ಅಲ್ಲದೇ ೧೯೨೯ ರಲ್ಲಿ ಲಾಹೋರಿನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಭಾಗವಹಿಸಿದ ತಾಳಕೆರೆ ಸುಬ್ರಮಣ್ಯಂರವರು ಅಲ್ಲಿಂದ ತುಮಕೂರಿಗೆ ವಾಪಾಸ್ಸಾದ ನಂತರ ತುಮಕೂರಿನ ಗಾಂಧಿ ಮೈದಾನದಲ್ಲಿ ವಿದೇಶಿ ವಸ್ತ್ರ ಬಹಿಷ್ಕಾರ ಮತ್ತು ಅವುಗಳನ್ನು ಸುಡುವ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದರು. ಇದು ಮಿಂಚಿನಂತೆ ತುಮಕೂರಿನ ಕಾಂಗ್ರೆಸ್ ಕಾರ್ಯಕರ್ತರಲ್ಲಿ ಮತ್ತು ಸಾರ್ವಜನಿಕರಲ್ಲಿ ಖಾದಿ ಧರಿಸುವ ಉತ್ಸಾಹವನ್ನು ತಂದಿತು.[೨೩]

೧೯೩೦ ರಲ್ಲಿ ಕರ್ನಾಟಕ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ವಿದೇಶಿ ವಸ್ತ್ರ ಬಹಿಷ್ಕಾರವನ್ನು ಹಮ್ಮಿಕೊಂಡಿತು. ಇದರಿಂದಾಗಿ ರಾಜ್ಯದಾದ್ಯಂತ ವಿದೇಶಿ ವಸ್ತುಗಳ ವ್ಯಾಪಾರಸ್ಥರು ವ್ಯಾಪಾರವನ್ನು ಮಾಡದಂತೆ ಪ್ರಾರ್ಥಿಸಿಕೊಂಡರು. ಆದರೆ ವ್ಯಾಪಾರಸ್ಥರು ಅವರ ಪ್ರಾರ್ಥನೆಯನ್ನು ಮನ್ನಿಸಲಿಲ್ಲ. ಆಗ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯು ವಿದೇಶಿ ಬಟ್ಟೆಗಳ ಅಂಗಡಿಗಳ ಮುಂದೆ ಪಿಕೆಟಿಂಗ್ ನಡೆಸಲು ತಿರ್ಮಾನಿಸಿದರು. ಈ ಸಂದರ್ಭದಲ್ಲಿ ತುಮಕೂರು ಜಿಲ್ಲೆಯಲ್ಲಿ ವಿದೇಶಿ ವಸ್ತ್ರಗಳ ಅಂಗಡಿಗಳ ಮುಂದೆ ಪಿಕೆಟಿಂಗ್ ಕಾರ್ಯವನ್ನು ಹಮ್ಮಿಕೊಂಡಿದ್ದ ಬಿ.ಸಿ. ನಂಜುಂಡಯ್ಯ, ಜಿ.ವಿ. ನಾರಾಯಣಮೂರ್ತಿ, ಡೇನಿಯಲ್ ಗುಂಡಪ್ಪ, ಮಾಲಿಮರಿಯಪ್ಪ, ತಾಳಿಕೆರೆ ಸುಬ್ರಮಣ್ಯಂ ಇನ್ನು ಮುಂತಾದವರು ೧೯೩೦ ರಲ್ಲಿ ತುಮಕೂರಿನ ಇಂದಿನ ಪ್ರಧಾನ ಅಂಚೆ ಕಛೇರಿಯ ವೃತ್ತದಲ್ಲಿ ವಿದೇಶಿ ವಸ್ತ್ರಗಳನ್ನು ಧರಿಸಿದವರನ್ನು ಬಲವಂತವಾಗಿ ತಡೆದು ಅವರ ಮೈ ಮೇಲಿದ್ದ ವಿದೇಶಿ ಬಟ್ಟೆಗಳನ್ನು ಕಳಚಿಸಿ, ಒಂದು ದೊಡ್ಡ ರಾಶಿಯನ್ನು ಹಾಕಿ ಬೆಂಕಿ ಇಟ್ಟರು.[೨೪] ಇದೇ ಸಮಯದಲ್ಲಿ ತುಮಕೂರಿನ ಚಿಕ್ಕಪೇಟೆ ವಿದೇಶಿ ವಸ್ತ್ರಗಳ ಅಂಗಡಿಗಳ ಮುಂದೆ ನಡೆಸಿದ ಪಿಕೆಟಿಂಗ್‌ನಲ್ಲಿ ಕೆ. ಜೀವಣ್ಣರಾಯರು ಬಹಳ ಉತ್ಸಾಹದಿಂದ ಭಾಗವಹಿಸಿದರು. ಇವರು ವಿದೇಶಿ ವಸ್ತ್ರಗಳನ್ನು ಬೆಂಕಿಗೆ ಹಾಕಿ ಅಂದಿನಿಂದಲೇ ಖಾದಿ ಟೋಪಿ, ಖಾದಿ ಜುಬ್ಬ ಧರಿಸಲು ಪ್ರಾರಂಭಿಸಿದರು.[೨೫]

ಗಾಂಧೀಜಿಯವರ ೧೯೨೭ರ ಖಾದಿ ಪ್ರಚಾರ ಭಾಷಣದಿಂದ ಪ್ರಭಾವಿತರಾದ ತಿಪಟೂರಿನ ಕೆ.ಎನ್. ರಂಗಪ್ಪನವರು ೧೯೩೦ರಲ್ಲಿ ತಿಪಟೂರಿನಲ್ಲಿ ವಿದೇಶಿ ಬಟ್ಟೆಗಳ ಅಂಗಡಿಗಳ ಎದುರಿಗೆ ಒಂದು ಖಾದಿ ಭಂಡಾರ ಕೇಂದ್ರವನ್ನು ಸ್ಥಾಪಿಸಿದರು. ಇದಕ್ಕೆ ತುಮಕೂರಿನ ಡಿ.ಸಿ.ಸಿ. ಕಾರ್ಯದರ್ಶಿಯಾಗಿದ್ದ ಎಂ. ನೀಲಕಂಠರಾಯ್‌ರವರು ಪ್ರೇರಣೆ ನೀಡಿದರು. ೧೯೩೧ರಲ್ಲಿ ಮೈಸೂರು ಸಂಸ್ಥಾನದಲ್ಲಿ ಗ್ರಾಮ ಸೇವಾ ಸಂಘವೆಂಬ ಸಂಸ್ಥೆ ಅಸ್ತಿತ್ವಕ್ಕೆ ಬಂದಿತು. ಇದರ ಪ್ರಥಮ ಅಧ್ಯಕ್ಷರು ತುಮಕೂರಿನ ತಾಳಿಕೆರೆ ಸುಬ್ರಮಣ್ಯಂ ಹಾಗೂ ಕಾರ್ಯದರ್ಶಿ ವಾಸುದೇವರಾಯರು. ಈ ಸಂಸ್ಥೆಯು ಹೊಸೂರು, ಕೋಲಾರ, ಗೋರೂರು, ಕೆಂಗೇರಿ, ಶುದ್ಧಕುಂಟೆ, ತುಮಕೂರು, ಗುಬ್ಬಿಯ ಕಡಬಗಳಲ್ಲಿ ಖಾದಿ ಉತ್ಪಾದನಾ ಕೇಂದ್ರಗಳನ್ನು ತೆರೆದು ಯಶಸ್ವಿಯಾಗಿ ಕೆಲಸ ನಿರ್ವಹಿಸಿದರು. ಬಿ. ಕಾಮಾಕ್ಷಮ್ಮ ಎಂಬುವರು ಮಹಿಳಾ ಸ್ವಯಂ ಸೇವಕಿಯವರು ಸ್ವತಃ ನೂಲುವುದನ್ನು ಚರಕ ತರಗತಿಗಳನ್ನು ನಡೆಸುವುದರ ಮೂಲಕ ಜಿಲ್ಲೆಯ ಸಾರ್ವಜನಿಕರಿಗೆ ತರಬೇತಿಯನ್ನು ನೀಡುತ್ತಿದ್ದರು.[೨೬]

೧೯೩೧ ರಲ್ಲಿ ತುಮಕೂರಿನಲ್ಲಿ ತಾಳಿಕೆರೆ ಸುಬ್ರಮಣ್ಯಂ, ರಂಗೈಯ್ಯಾಂಗಾರ್ ಸೆಟ್ಲೂರ್‌ರವರು ವಿದೇಶಿ ಬಟ್ಟೆಗಳ ಅಂಗಡಿಗಳ ಮುಂದೆ ಪಿಕೆಟಿಂಗ್ ನಡೆಸಿ, ವಿದೇಶಿ ಬಟ್ಟೆಗಳ ದಹನ ನಡೆಸಿದರು. ಈ ಸಮಯದಲ್ಲಿಯೇ ಕೆ.ಎನ್. ರಂಗಪ್ಪ, ಶಿಂಗರಿಲಿಂಗಪ್ಪ, ಎಲ್. ಸಿದ್ಧಪ್ಪ

ಮುಂತಾದ ಕಾರ್ಯಕರ್ತರು ತಿಪಟೂರಿನಲ್ಲಿ ವಿದೇಶಿ ಬಟ್ಟೆಗಳ ಅಂಗಡಿಗಳ ಮುಂದೆ ಪಿಕೆಟಿಂಗ್ ನಡೆಸಿ, ವಿದೇಶಿ ವಸ್ತ್ರಗಳ ಬಹಿಷ್ಕಾರ ನಡೆಸಿದರು.[೨೭] ಅದೇ ರೀತಿಯಾಗಿ ಶಿರಾ ತಾಲ್ಲೂಕಿನ ಪಿ. ಸಣ್ಣಪ್ಪನವರು ೧೯೩೨ ರಿಂದಲೇ ಖಾದಿಯನ್ನು ಧರಿಸುತ್ತಾ, ಚರಕದಿಂದ ನೂಲು ತೆಗೆಯುವುದು, ಖಾದಿ ಪ್ರಚಾರ, ಆಡಂಭರವಿಲ್ಲದೆ ಕಾಂಗ್ರೆಸ್ ಧ್ವಜದಡಿ ರಾಟೆಯನ್ನು ಪೂಜಿಸುತ್ತಾ ಮಾಂಗಲ್ಯ ಧರಣೆ ಮಾಡಿಸುತ್ತಿದ್ದರು. ಇವರು ಮುದ್ದವೀರಗೌಡ, ಹನುಮೇಗೌಡ, ನಂಜುಂಡರಾವ್, ಲಿಂಗಪ್ಪನವರೊಂದಿಗೆ ಸೇರಿಕೊಂಡು ಖಾದಿ ಪ್ರಚಾರ ವಿದೇಶಿ ವಸ್ತ್ರಗಳ ದಹನ ಮಾಡುತ್ತಾ ಹಾಕು ಬೆಂಕಿಲಿ, ಉರಿಸು ಧಗ ಧಗ ಧರಿಸು ಖಾದೀ ಪವಿತ್ರವಾ ಎಂಬ ಲಾವಣಿಯನ್ನು ಹೇಳುತ್ತಾ ವಿದೇಶಿ ವಸ್ತ್ರಗಳನ್ನು ಸುಡುತ್ತಿದ್ದರು.[೨೮]

ಗಾಂಧೀಜಿಯವರು ಹರಿಜನ ಪ್ರವಾಸ ಕೈಗೊಂಡು ೧೯೩೪ ರಲ್ಲಿ ಜನವರಿ ೪ ರಂದು ತುಮಕೂರಿಗೆ ಭೇಟಿ ನೀಡಿದರು. ಈ ಸಂದರ್ಭದಲ್ಲಿ ಜಿಲ್ಲೆಯ ಶಿರಾ ತಾಲ್ಲೂಕಿನ ಏಕ ಮಾತ್ರ ಹರಿಜನ ಕಾರ್ಯಕರ್ತರಾದ ಸಿ.ಟಿ. ಹನುಮಂತಯ್ಯನವರು ಗಾಂಧೀಜಿಯವರ ಸಮ್ಮುಖದಲ್ಲಿ ಪ್ರತಿಜ್ಞೆಯನ್ನು ಕೈಗೊಂಡು ಖಾದಿಧಾರಿಗಳಾಗಿ ನೂಲುವುದು, ಖಾದಿ ಪ್ರಚಾರ ಕೈಗೊಳ್ಳುವುದಾಗಿ ತಿಳಿಸಿದರು. ಅನಂತರ ತಲೆ ಹೊರೆಯಲ್ಲಿ ಮನೆ ಮನೆಗೂ ಖಾದಿ ಬಟ್ಟೆ ಹೊತ್ತು ಮಾರಾಟ ಮಾಡಿದರು. ಚರಕಾ ತರಗತಿಗಳನ್ನು ನಡೆಸಿ ನೂಲುವುದನ್ನು ಹೇಳಿಕೊಡುತ್ತಿದ್ದರು.[೨೯] ಇದೇ ಸಮಯದಲ್ಲಿ ಎಂ. ನೀಕಂಠರಾಯರ ನಾಯಕತ್ವದಿಂದ ಜಿಲ್ಲೆಯಾದಾದ್ಯಂತ ಖಾದಿ ಉತ್ಪಾದನೆ, ಮಾರಾಟ, ಪ್ರಚಾರ ಕಾರ್ಯಗಳು ಭರದಿಂದ ಸಾಗಿದವು. ಇವರು ತುಮಕೂರಿನ ಗುಂಚಿ ವೃತ್ತದ ಬಳಿ ಒಂದು ಖಾದಿ ತಯಾರಿಸುವ ಘಟಕವನ್ನು ಪ್ರಾರಂಭಿಸಿ, ಇಲ್ಲಿ ಹೆಚ್ಚಾಗಿ ಹೆಣ್ಣು ಮಕ್ಕಳಿಂದ ಅಂಬರ ಮಾದರಿಯ ಚರಕಗಳಿಂದ ನೂಲನ್ನು ತೆಗೆಯಿಸುತ್ತಿದ್ದರು. ಇಲ್ಲಿ ತಯಾರಾದ ನೂಲನ್ನು ನೇಯ್ಗೆಯವರಿಗೆ ಕೊಟ್ಟು ಖಾದಿ ಬಟ್ಟೆಗಳನ್ನು ನೇಯಿಸುತ್ತಿದ್ದರು. ಈ ಸಂದರ್ಭದಲ್ಲಿ ಗುಬ್ಬಿಯಲ್ಲಿ ವೆಂಕಟೇಶ ಮಾಗಡಿಯವರು ಖಾದಿ ತಯಾರಿಕಾ ಕೇಂದ್ರವನ್ನು ನಡೆಸುತ್ತಿದ್ದರು.[೩೦]

೧೯೩೪ರಿಂದ ಕೆ.ಎಸ್.ರಾಜಪ್ಪನವರು ವಿದೇಶಿ ವಸ್ತ್ರಬಹಿಷ್ಕಾರದಿಂದ ಪ್ರಭಾವಿತರಾಗಿ ತಾವೇ ತಕಲಿಯಲ್ಲಿ ನೂಲು ತೆಗೆದು, ತೆಗೆದ ನೂಲನ್ನು ಖಾದಿ ಭಂಡಾರಕ್ಕೆ ಅರ್ಪಿಸಿ ಖಾದಿ ವಸ್ತ್ರವನ್ನು ಪಡೆದು ಧರಿಸುತ್ತಿದ್ದರು. ಇವರು ಮದುವೆಯಾದ ಶ್ರೀಮತಿ ಪುಟ್ಟ ಗಂಗಮ್ಮನವರಿಗೆ ಮದುವೆಯ ಸಂದರ್ಭದಲ್ಲಿ ಖಾದಿ ಸೀರೆ, ರವಕೆಗಳನ್ನು ತೊಡಿಸಿ, ಧಾರೆಯೆರೆಸಿಕೊಂಡ ಖಾದಿ ದಂಪತಿಗಳು.[೩೧] ಈ ರೀತಿ ಜಿಲ್ಲೆಯ ಖಾದಿ ಆಂದೋಲನದಲ್ಲಿ ಪ್ರಮುಖ ಪಾತ್ರ ವಹಿಸಿದರು. ಇದೇ ಸಮಯದಲ್ಲಿ ಕ್ಯಾತ್ಸಂದ್ರದಲ್ಲಿ ಕೆ.ಎಸ್. ಸಿದ್ಧಪ್ಪನವರು ಗಾಂಧಿ ಆಶ್ರಮವನ್ನು ಸ್ಥಾಪಿಸಿ, ಅಲ್ಲಿನ ವಿದ್ಯಾರ್ಥಿಗಳಲ್ಲಿ ಸ್ವದೇಶಿ ಪ್ರಚಾರ, ವಿದೇಶಿ ವಸ್ತ್ರಗಳ ಬಹಿಷ್ಕಾರ ಅಂಗವಾಗಿ

ಖಾದಿ ಪ್ರಚಾರವನ್ನು ಹಮ್ಮಿಕೊಂಡು ತಕ್ಕಲಿಯಿಂದ ನೂಲನ್ನು ತೆಗೆಯುವ ಕಾರ್ಯವನ್ನು ಬಹಳ ಯಶಸ್ವಿಯಾಗಿ ಕಲಿಸಿಕೊಡುತ್ತಿದ್ದರು.[೩೨]

೧೯೩೧ ರಲ್ಲಿ ಮೋತಿಲಾಲ್ ನೆಹರು ನಿಧನರಾದ ಸುದ್ದಿಯಿಂದ ತಿಪಟೂರಿನಲ್ಲಿ ಪೂರ್ಣ ಬಂದ್ ಆಚರಿಸಲಾಯಿತು. ಆಗ ಸಿಂಗ್ರಿ ನಂಜಪ್ಪನವರ ಮನೆಯ ಮುಂದೆ ಸಾರ್ವಜನಿಕ ಸಭೆ ಸೇರಿದ ಅನೇಕರು ಕಾಂಗ್ರೆಸ್ಸಿಗರಾಗಿ ಖಾದೀಧಾರಿಗಳಾಗಿ ಖಾದಿ ಪ್ರಚಾರ ಮಾಡುವುದು, ವಿದೇಶಿ ವಸ್ತ್ರದಂತಹ ಕಾರ್ಯಕ್ರಮಗಳನ್ನು ನಡೆಸಲು ಪ್ರತಿಜ್ಞೆ ಕೈಗೊಂಡಿದ್ದರು.[೩೩] ೧೯೩೦ರಲ್ಲಿ ಎಚ್.ಕೆ. ವೀರಣ್ಣಗೌಡರು ಮತ್ತು ತಾಯಮ್ಮ ವೀರಣ್ಣಗೌಡರು ಅಖಿಲ ಭಾರತ ಮತ್ತು ಮೈಸೂರು ಕಾಂಗ್ರೆಸ್ ಸಮಿತಿಗಳ ಸದಸ್ಯರುಗಳನ್ನಾಗಿಸಲು ಮಾಡುವ ಕಾರ್ಯದ ನಿಮಿತ್ತವಾಗಿ ತುಮಕೂರು ಜಿಲ್ಲೆಯಲ್ಲಿ ಪ್ರವಾಸ ಕೈಗೊಂಡಿದ್ದರು. ಆ ಸಂದರ್ಭದಲ್ಲಿ ತುಮಕೂರಿನ ಎಸ್.ವಿ. ಆಚಾರ್‌ರವರು ಕಾಂಗ್ರೆಸ್ಸಿನ ಸದಸ್ಯರಾಗಿ ಅಲ್ಲಿಂದಲೇ ಖಾದಿ ಧಾರಿಯಾಗಿ,[೩೪] ಖಾದಿ ಪ್ರಚಾರ ಕಾರ್ಯವನ್ನು ಜಿಲ್ಲೆಯಲ್ಲಿ ಹಮ್ಮಿಕೊಂಡಿದ್ದರು. ೧೯೩೦ರಲ್ಲಿ ಮಧುಗಿರಿಯ ಮಾಅಮರಿಯಪ್ಪನವರು ಪೂನಾದಿಂದ ಎಲ್.ಎಲ್.ಬಿ. ಮುಗಿಸಿಕೊಂಡು ಬರುವಾಗಲೇ ವಿದೇಶಿ ಬಟ್ಟೆಗಳನ್ನು ತೊರೆದು ಖಾದಿ ಧರಿಸತೊಡಗಿದರು. ಈ ಸಮಯದಲ್ಲಿ ಮಧುಗಿರಿ, ಶಿರಾ, ಪಾವಗಡ, ಕೊರಟಗೆರೆ, ತಾಲ್ಲೂಕುಗಳಲ್ಲಿ ಖಾದಿ ಬಟ್ಟೆಯನ್ನು ಧರಿಸುವವರ ಸಂಖ್ಯೆ ಹೆಚ್ಚಾಯಿತು. ಇದರಿಂದಾಗಿ ಖಾದಿಗೆ ತುಂಬಾ ಬೇಡಿಕೆಯುಂಟಾಯಿತು. ಆದುದರಿಂದ ೧೯೩೦ರಲ್ಲಿ ಸಿ.ಜೆ. ಮುಕ್ಕಣ್ಣಪ್ಪನವರು ಹನ್ನೆರಡು ಸಾವಿರ ರೂಪಾಯಿಗಳ ಬಂಡವಾಳವನ್ನು ಹೂಡಿ ಮಧುಗಿರಿಯಲ್ಲಿ ಒಂದು ಖಾದಿ ಭಂಡಾರವನ್ನು ಸ್ಥಾಪಿಸಿದರು. ಇದರಿಂದ ಜನರಿಗೆ ಖಾದಿ ಬಟ್ಟೆಯನ್ನು ಪಡೆದುಕೊಂಡು ಖಾದಿ ಧರಿಸಲು ಬಹಳ ಅನುಕೂಲವಾಯಿತು. ಇವರು ಮೂರು ಸಾವಿರ ರೂಪಾಯಿಗಳ ಖಾದಿ ಮಾಲನ್ನು ವಿದುರಾಶ್ವತ್ಥದ ಜಾತ್ರೆಯಲ್ಲಿ ಉಚಿತವಾಗಿ ಹಂಚುವುದರ ಮೂಲಕ ಖಾದಿ ಪ್ರಚಾರವನ್ನು ಕೈಗೊಂಡಿದ್ದರು.[೩೫]

೧೯೩೦ರಲ್ಲಿ ತುಮಕೂರಿನಕೆ.ಎಸ್.ಆಚಾರ್ಯರಿಂದ ಪ್ರಭಾವಿತರಾದ ಎ. ದಾಸೇಗೌಡರು ಖಾದಿ ಪೇಟವನ್ನು ಧರಿಸಿದರು. ಕೆ.ಎಸ್. ಆಚಾರ್ಯರವರ ಮನೆಯವರೆಲ್ಲರೂ ಖಾದಿ ಬಟ್ಟೆಯಲ್ಲದೆ ವಿದೇಶಿ ವಸ್ತುಗಳನ್ನು ಧರಿಸುತ್ತಿರಲಿಲ್ಲ. ಇವರ ಅನುಯಾಯಿಯಾಗಿದ್ದ ಎ. ದಾಸೇಗೌಡರು ೪೦ ಮಂದಿಗೆ ಅಂಬರ ಚರಕಗಳನ್ನು ಹಂಚಿ, ನೂಲು ತೆಗೆಯುವ ಶಿಕ್ಷಣವನ್ನು ಕಲ್ಪಿಸಿಕೊಟ್ಟರು. ನೂತ ನೂಲನ್ನು ಖಾದಿ ಕೇಂದ್ರಗಳಿಗೆ ಕೊಟ್ಟು ಖಾದಿ ಬಟ್ಟೆಯನ್ನು ಪಡೆಯುತ್ತಿದ್ದರು. ಅಥವಾ ಹಣವನ್ನು ಪಡೆಯುವ ವ್ಯವಸ್ಥೆಯನ್ನು ಮಾಡಿ ಅವರ ಜೀವನಕ್ಕೆ ಆಧಾರ ಕಲ್ಪಿಸಿದರು.[೩೬]

ಕಾಂಗ್ರೆಸ್ ನಾಯಕರು ಸಭೆಗಳನ್ನು ಏರ್ಪಡಿಸಿ ಪ್ರಮುಖ ಸಂಸ್ಥಾನದ ನಾಯಕರಾದ ಟಿ. ಸಿದ್ದಲಿಂಗಯ್ಯ, ಎಸ್.ಎಸ್. ಸೆಟ್ಲೂರ್, ಎಂ.ಎನ್. ಜೋಯಿಸ್, ಕೆ.ಟಿ. ಭಾಷ್ಯ, ಎನ್.ಸಿ. ತಿಮ್ಮಾರೆಡ್ಡಿ, ಉಮಾಬಾಯಿ ಕುಂದಾಪುರ ಮುಂತಾದವರನ್ನು ಕರೆಯಿಸಿ ಸ್ವದೇಶಿ ಖಾದಿ ಪ್ರಚಾರ, ವಿದೇಶಿ ವಸ್ತ್ರಗಳ ಬಹಿಷ್ಕಾರದ ಬಗ್ಗೆ ಕುರಿತಾದ ಉಪನ್ಯಾಸಗಳನ್ನು ಕೊಡಿಸುತ್ತಿದ್ದರು. ಇದರಿಂದಾಗಿ ಜನತೆಯಲ್ಲಿ ಖಾದಿ ಪ್ರಚಾರದ ಬಗ್ಗೆ ಅರಿವು ಮೂಡುತ್ತಿತ್ತು. ರಾಜಕೀಯ ಸ್ವಾತಂತ್ರ್ಯಕ್ಕೆ ಆರ್ಥಿಕ ಸ್ವಾವಲಂಬನೆಯ ಅಗತ್ಯರಾಷ್ಟ್ರವಾದವಿಲ್ಲದ ರಾಜಕೀಯ ರಾಷ್ಟ್ರವಾದ ಪರಿಪೂರ್ಣವಾಗುವುದಿಲ್ಲ ಎಂಬ ಅರಿವಿನಿಂದ ಜಿಲ್ಲೆಯಲ್ಲಿ ಸ್ವದೇಶಿ ಮತ್ತು ಖಾದಿ ಪ್ರಚಾರ ಕಾರ್ಯಗಳು ಭರದಿಂದ ನಡೆದವು.

ತುಮಕೂರು ಜಿಲ್ಲಾ ಕಾಂಗ್ರೆಸ್ ಸಮಿತಿಯವರು ಸಭೆಗಳನ್ನು ಏರ್ಪಡಿಸುವುದರ ಮೂಲಕ ಖಾದಿ ಪ್ರಚಾರದ ಬಗ್ಗೆ ಕಾಂಗ್ರೆಸ್ ನಾಯಕರಿಂದ ಭಾಷಣಗಳನ್ನು ಏರ್ಪಡಿಸುವುದರ ಮೂಲಕ ಖಾದಿಯ ಬಗ್ಗೆ ಅರಿವು ಮೂಡಿಸುತ್ತಿದ್ದರು. ೬–೨–೧೯೩೮ರಂದು ತುಮಕೂರು ನಗರ ಕೋ–ಆಪರೇಟಿವ್ ಸೊಸೈಟಿಯ ಆವರಣದಲ್ಲಿ ನಡೆದ ಕಾಂಗ್ರೆಸ್ ಸಮಿತಿಯ ಸಭೆಯನ್ನು ಉದ್ದೇಶಿಸಿ ಎಂ. ನೀಲಕಂಠರಾಯರು ಭಾಷಣ ಮಾಡುತ್ತಾ, ಖಾದಿ ಪ್ರಚಾರಕ್ಕೆ ಖಾದಿಯೇ ಪ್ರೇರಣೆಯಾಗಿದೆ. ಖಾದಿ ಪ್ರಚಾರವು ಕಾಂಗ್ರೆಸ್ಸಿನ ಪ್ರಮುಖ ಧ್ಯೇಯವಾಗಿದೆ. ವಿದೇಶಿ ವಸ್ತ್ರಗಳನ್ನು ಧರಿಸುವುದರಿಂದ ಭಾರತದ ಬಂಡವಾಳವೂ ವಿದೇಶಗಳಿಗೆ ಹರಿಯುವುದರಿಂದ ಭಾರತ ಜನತೆಯು ಕಡು ಬಡತನಕ್ಕೊಳಗಾಗುತ್ತಿದ್ದಾರೆ. ಆದ್ದರಿಂದ ವಿದೇಶಿ ವಸ್ತ್ರಗಳನ್ನು ಬಹಿಷ್ಕರಿಸಿ, ಖಾದಿಯನ್ನು ಧರಿಸಬೇಕು[೩೭] ಎಂದು ಖಾದಿಯ ಸಂದೇಶವನ್ನು ಸಾರಿದರು.

ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಬೆಳ್ಳಾರದ ಬಿ. ಗಂಗಣ್ಣನವರು ಬುಕ್ಕಾಪಟ್ಟಣದಲ್ಲಿ ವಿದ್ಯಾಭ್ಯಾಸ ನಡೆಸುತ್ತಿರುವಾಗ ಅಲ್ಲಿನ ಮುಖ್ಯೋಪಾಧ್ಯಾಯರಾದ ಟಿ. ಪುಟ್ಟಮಲ್ಲಯ್ಯನವರು ಪ್ರಸಿದ್ಧ ಖಾದಿ ಧಾರಿಗಳಾಗಿದ್ದು, ಮೊದಲು ವಿದ್ಯಾರ್ಥಿಗಳಿಗೆ ಖಾದಿಯ ಬಗ್ಗೆ, ವಿದೇಶಿ ವಸ್ತ್ರಗಳ ಬಹಿಷ್ಕಾರದ ಬಗ್ಗೆ ಪರಿಚಯವನ್ನು ಮಾಡಿದ ನಂತರ ಪಾಠ ಪ್ರವಚನಗಳನ್ನು ಮಾಡುತ್ತಿದ್ದರು ಎಂದು ತಮ್ಮ ಮುಖ್ಯೋಪಾಧ್ಯಾಯರ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದರು.[೩೮]

ಮೈಸೂರು ಕಾಂಗ್ರೆಸ್ಸಿನ ದ್ವಿತೀಯ ಅಧಿವೇಶನದಲ್ಲಿ ಅಂಗೀಕೃತವಾದ ನಿರ್ಣಯಗಳನ್ನು ಕಾರ್ಯ ರೂಪಕ್ಕೆ ತರಲು ರಾಜ್ಯದಾದ್ಯಂತ ೧೭–೫–೧೯೩೯ ರಿಂದ ೨೩–೫–೧೯೩೯ ರವರೆಗೆ ಕಾಂಗ್ರೆಸ್ ಸಪ್ತಾಹವನ್ನು ಆಚರಿಸಬೇಕೆಂದು ಕಾಂಗ್ರೆಸ್ ನಿರ್ಧರಿಸಿತು. ಅದರಂತೆ

ದಿನಾಂಕ : ೧೭–೫–೧೯೩೯ ರಂದು ದಬ್ಬಾಳಿಕೆ ದಿನಾಚರಣೆ,

ದಿನಾಂಕ : ೧೮–೫–೧೯೩೯ ರಂದು ದೇಶ ಸೇವಕರ ದಿನಾಚರಣೆ,

ದಿನಾಂಕ : ೧೯–೫–೧೯೩೯ ರಂದು ಹರಿಜನ ಸೇವ ದಿನಾಚರಣೆ,

ದಿನಾಂಕ : ೨೦–೫–೧೯೩೯ ರಂದು ಖಾದಿ ಪ್ರಚಾರ ದಿನಾಚರಣೆ,

ದಿನಾಂಕ : ೨೧–೫–೧೯೩೯ ರಂದು ರೈತರ ಮತ್ತು ದಿನ ಕೂಲಿಕಾರರ ದಿನಾಚರಣೆ

ದಿನಾಂಕ : ೨೨–೫–೧೯೩೯ ರಂದು ಪಾನ ನಿರೋಧ ದಿನಾಚರಣೆ

ದಿನಾಂಕ : ೨೩–೫–೧೯೩೯ ರಂದು ಜವಾಬ್ದಾರಿ ಸರ್ಕಾರ ದಿನಾಚರಣೆಯಂತಹ[೩೯] ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಯಿತ್ತು. ಅದರಂತೆಯೇ ೧೯೩೯ ರ ಮೇ ವೇಳೆಗೆ ತುಮಕೂರು ಜಿಲ್ಲೆಯಲ್ಲಿ ಖಾದಿ ಮಾರಾಟದ ಬಗ್ಗೆ ತೃಪ್ತಿಕರವಾದ ವ್ಯವಸ್ಥೆ ಇದ್ದು, ಕೆಲವು ಖಾದಿವಸ್ತ್ರಾಲಯ ವ್ಯವಸ್ಥಾಪಕರು, ಮಾಲೀಕರ ಸಹಾಯದಿಂದ ಖಾದಿ ಬಜಾರುಗಳು ನಿರ್ಮಾಣಗೊಂಡವು. ಈ ವೇಳೆಗಾಗಲೇ ಜಿಲ್ಲೆಯ ಹಲವು ಕಡೆಗಳಲ್ಲಿ ಖಾದಿ ಭಂಡಾರಗಳು ಜನ್ಮತಾಳಿದ್ದವು. ಇದರಿಂದಾಗಿಯೂ ಖಾದಿ ಮತ್ತು ಸ್ವದೇಶಿ ವಸ್ತುಗಳ ಪ್ರಚಾರ ವೈಭವದಿಂದ ನಡೆಯುತ್ತಿತ್ತು. ಬೀದಿ ಬೀದಿಗಳಲ್ಲಿ, ಸಭೆ ಸಮಾರಂಭಗಳನ್ನು ಏರ್ಪಡಿಸುವುದು, ರಾಷ್ಟ್ರಗೀತೆ ಹಾಡಿ ಜನರನ್ನು ಆಕರ್ಷಿಸುತ್ತಿದ್ದರು. ಆಗ ಧ್ವನಿವರ್ಧಕಗಳು ಇರಲಿಲ್ಲವಾದ್ದರಿಂದ ಸೀಮೆಎಣ್ಣೆ ಡಬ್ಬಗಳನ್ನು ಬಡಿದು ಜನರನ್ನು ಒಂದೆಡೆ ಕೂಡಿಸಿ ಅಲ್ಲಲ್ಲಿ ಖಾದಿ ಪ್ರಚಾರ ಕಾರ್ಯಗಳನ್ನು ಕೈಗೊಳ್ಳುತ್ತಿದ್ದರು. ಕಾಂಗ್ರೆಸ್ ಸಮಿತಿಗಳು ಈ ವೇಳೆಗಾಗಲೇ ಖಾದಿಯ ಮಾರಾಟವನ್ನು ಹೆಚ್ಚಿಸಿ, ವಿದೇಶಿ ವಸ್ತ್ರಗಳನ್ನು ಮಾರಾಟ ಮಾಡದಂತೆ ತಡೆಯುತ್ತಿದ್ದವು. ಅಂಗಡಿಯ ಮಾಲೀಕರು ಒಪ್ಪದಿದ್ದರೆ ಅಂತಹವರ ಅಂಗಡಿಗಳ ಮುಂದೆ ಪಿಕೆಟಿಂಗ್ ಸಹಾ ನಡೆಸಿದರು. ಕಾರ್ಯಕರ್ತರು ಪೋಲಿಸರಿಂದ ಲಾಠಿ ಏಟು, ಬೂಟೂ ಕಾಲಿನಿಂದ ಹೊಡೆತ, ಇನ್ನು ಹಲವಾರು ರೀತಿಯ ಅಮಾನವೀಯ ಹಿಂಸೆಗಳನ್ನು ಅನುಭವಿಸಿದರು. ತುಮಕೂರು ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಡಿಯಲ್ಲಿ ಮನೆ ಮನೆಗೂ ಹೋಗಿ ಖಾದಿ ಮಾರಾಟ ಕಾರ್ಯ ನಡೆಯಿತು. ಅಷ್ಟೇ ಅಲ್ಲದೆ ಚರಕಗಳನ್ನು ಅಣಿಗೊಳಿಸಿಕೊಂಡು ಜನತೆಗೆ ಹಂಚಿದರು. ಖಾದಿತೊಡಿ, ವಿದೇಶಿಬಿಡಿ ಎಂಬ ಘೋಷಣೆಗಳಿಂದ ಜಿಲ್ಲೆಯಲ್ಲಿ ಖಾದಿಯ ಬಳಕೆಯನ್ನು ವ್ಯಾಪಕಗೊಳಿಸಿದರು. ಖಾದಿಯ ಮಾರಾಟವು ಈ ರೀತಿಯಾಗಿ ಸ್ಥಳೀಯ ಮುಖಂಡರುಗಳ ನಾಯಕತ್ವದಲ್ಲಿ ಯಶಸ್ವಿಯಾಯಿತು.[೪೦] ಇದೇ ಸಮಯದಲ್ಲಿ ಮೈಸೂರು ಕಾಂಗ್ರೆಸ್ ಸಮಿತಿಯ ಅಧ್ಯಕ್ಷರು ಮತ್ತು ವ್ಯವಸ್ಥಾಪಕರ ಕಾರ್ಯದರ್ಶಿಗಳು ೧೯೩೯ ಮೇ ೨೪ ರಂದು ಪ್ರವಾಸ ಕೈಗೊಂಡು ತಿಪಟೂರು, ಚಿಕ್ಕನಾಯಕನಹಳ್ಳಿ, ಸಂಪಿಗೆ, ತುಮಕೂರು, ಕಡೂರು, ಹಾಸನ, ಶಿವಮೊಗ್ಗಗಳಲ್ಲಿ ಖಾದಿ ಪ್ರಚಾರದ ಬಗ್ಗೆ ಜನತೆಯಲ್ಲಿ ಅರಿವನ್ನುಂಟು ಮಾಡಿದರು.[೪೧] ಇದೇ ಸಮಯದಲ್ಲಿ ಶಿರಾ ತಾಲ್ಲೂಕಿನ ಕಾಮಗಾನಹಳ್ಳಿಯ ಎ.ಎಂ. ಲಿಂಗಣ್ಣನವರು ೮–೯–೧೯೩೯

ರಂದು ಹಿಂದೂಪುರದ ಸೋಮೇಶ್ವರ ಕಂಪನಿಯಲ್ಲಿಯೇ ೧೦ ಚರಕಗಳು ಮತ್ತು ಒಂದು ಕೈಮಗ್ಗದಿಂದ ಒಂದು ಖಾದಿ ಕೇಂದ್ರವನ್ನು ಪ್ರಾರಂಭಿಸಿದರು. ಅನಂತರ ಈ ಕೇಂದ್ರವನ್ನು ಅಖಿಲ ಭಾರತ ಚರಕಾ ಸಂಘಕ್ಕೆ ವಹಿಸಿಕೊಟ್ಟರು.[೪೨]

೧೯೪೨ ರ ಕ್ವಿಟ್ ಇಂಡಿಯಾ ಚಳುವಳಿಯ ಸಂದರ್ಭದಲ್ಲಿ ಗಾಂಧೀಜಿಯವರು ವಿದೇಶಿ ವಸ್ತ್ರ ಬಹಿಷ್ಕಾರ, ಸ್ವದೇಶಿ ವಸ್ತ್ರಕ್ಕೆ ಪ್ರೋತ್ಸಾಹ ಎಂಬ ಕರೆಯನ್ನು ಕೊಟ್ಟಿದ್ದರು. ಈ ಕರೆಗೆ ಅನುಗುಣವಾಗಿ ತುಮಕೂರು ಜಿಲ್ಲೆಯಲ್ಲಿ ಚಳುವಳಿಯೂ ಅಗಸ್ಟ್ ೯ ರಂದು ಪ್ರಾರಂಭವಾಯಿತು. ಅದರಂತೆ ೧೩-೮-೧೯೪೨ ರಂದು ಸುಮಾರು ೧೦ ಮಂದಿ ವಿದ್ಯಾರ್ಥಿಗಳು ತುಮಕೂರಿನ ನಾರ್ಮಲ್ ಸ್ಕೂಲ್ ಬಲಿ ಒಟ್ಟುಗೂಡಿ ದಾರಿ ಹೋಕರ ವಿದೇಶಿ ಹ್ಯಾಟ್ ಮತ್ತು ಟೈಗಳನ್ನು ಕಸಿದು ಹೋಳಿ ಮಾಡಿ ಸುಟ್ಟು ಹಾಕಿ ಮೆರವಣಿಗೆಯನ್ನು ನಡೆಸಿದರು.[೪೩] ಅದೇ ರೀತಿಯಾಗಿ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಕಾಂಗ್ರೆಸ್ ಕಾರ್ಯಕರ್ತರು ವಿದೇಶಿ ವಸ್ತ್ರದ ಬಹಿಷ್ಕಾರದ ಕರೆಗೆ ಅನುಗುಣವಾಗಿ ಸಾರ್ವಜನಿಕರು ಪ್ರಯಾಣಿಸುತ್ತಿದ್ದ ಬಸ್ಸುಗಳನ್ನೆಲ್ಲ ತಡೆದು ನಿಲ್ಲಿಸಿ ಬಸ್ಸುಗಳಲ್ಲಿದ್ದ ಪ್ರಯಾಣಿಕರು ಧರಿಸಿದ್ದ ವಿದೇಶಿ ಹ್ಯಾಟುಗಳನ್ನು ಮತ್ತು ಟೈಗಳನ್ನು ಕಿತ್ತುಕೊಂಡು ರಸ್ತೆಯ ಮಧ್ಯಭಾಗದಲ್ಲಿ ದೊಡ್ಡ ರಾಶಿಯನ್ನು ಹಾಕಿ ಸೀಮೆ ಎಣ್ಣೆ ಸುರಿದು ಬೆಂಕಿಯಿಟ್ಟು ಸುಟ್ಟು ಹಾಕಿದರು. ಇದರಿಂದ ಟೈಗಳನ್ನು ಹ್ಯಾಟುಗಳನ್ನು ಧರಿಸಿ ಪ್ರಯಾಣ ಮಾಡುವುದೇ ತಪ್ಪಿ ಹೋಯಿತು. ಇದೇ ರೀತಿಯಾಗಿ ಚಿಕ್ಕನಾಯಕನಹಳ್ಳಿ ತಾಲ್ಲೂಕು ಕೇಂದ್ರ ಕಛೇರಿಯ ಮುಂದೆ ಮತ್ತು ಉರ್ದು ಶಾಲೆಯ ಮುಂಭಾಗದ ರಸ್ತೆಗಳ ಬಳಿಯೂ ವಿದೇಶಿ ವಸ್ತ್ರಗಳನ್ನು ಸುಟ್ಟು ಹಾಕಿದರು.[೪೪] ಭಾರತ ಬಿಟ್ಟು ತೊಲಗಿ ಚಳುವಳಿಯ ಅಂಗವಾಗಿ ಎಂ. ನೀಲಕಂಠರಾಯರು, ಎಸ್.ವಿ. ಆಚಾರ್, ಟಿ.ಕೆ. ಗೋವಿಂದರಾಜುರವರು ತುಮಕೂರು ಜಿಲ್ಲೆಯಲ್ಲಿನ ಹಳ್ಳಿಗಳಲ್ಲಿ ಸುಮಾರು ೩ ತಿಂಗಳ ಕಾಲ ಪ್ರವಾಸ ಕೈಗೊಂಡು, ವಿದೇಶಿ ವಸ್ತ್ರಗಳ ದಹನ, ಖಾದಿ ಪ್ರಚಾರದಂತಹ ಕಾರ್ಯಗಳನ್ನು ಭರದಿಂದ ಕೈಗೊಂಡಿದ್ದರು.[೪೫]

೧೯೪೪ರ ವೇಳೆಯಲ್ಲಿ ಖಾದಿ ಪ್ರಚಾರವು ಜಿಲ್ಲೆಯಲ್ಲಿ ಅವ್ಯಾಹತವಾಗಿ ಸಾಗುತ್ತಿದ್ದಿತು. ಖಾದಿಗೆ ಬೇಡಿಕೆ ಅಧಿಕವಾಗಿದ್ದರಿಂದ ಮಾಲಮರಿಯಪ್ಪನವರು ಮಧುಗಿರಿ ತಾಲ್ಲೂಕಿನ ಇಟಕ ದಿಬ್ಬನಹಳ್ಳಿಯಲ್ಲಿ ಒಂದು ಖಾದಿ ಕೇಂದ್ರವನ್ನು ಆರಂಭಿಸಿದರು. ಈ ಖಾದಿ ಕೇಂದ್ರದ ಉಪಶಾಖೆಯೊಂದನ್ನು ಮಿಡಿಗೇಶಿಯಲ್ಲಿ ತೆರೆದರು. ಈ ವೇಳೆಯಲ್ಲಿ ಎ.ಎಂ. ಲಿಂಗಣ್ಣನವರು ಖಾದಿ ವ್ಯಾಪಾರದಿಂದ ಸಾಕಷ್ಟು ಹಣ ಸಂಪಾದಿಸಿದ್ದರು. ಈ ಲಾಭದ ಹಣದಿಂದ ಹಿಂದೂಪುರದ ಹತ್ತಿರ ಸೇವಾ ಮಂದಿರದಲ್ಲಿ ಒಂದು ಖಾದಿ ಕೇಂದ್ರವನ್ನು ತೆರೆಯಬೇಕು ಎಂದು ಮಾಲಮರಿಯಪ್ಪನವರು ಲಿಂಗಣ್ಣನವರಿಗೆ ಸಲಹೆ ನೀಡಿದರು.[೪೬] ೧೯೪೦ ದಶಕದ ಎರಡನೆಯ ಮಹಾಯುದ್ಧದಿಂದಾಗಿ ಹತ್ತಿ ನೇಕಾರರಿಗೆ ನೇಯುವ ದಾರ ದೊರಕದೆ ಬಟ್ಟೆ

ನೇಯುವುದನ್ನು ಜಿಲ್ಲೆಯ ಚಿಕ್ಕನಾಯಕನಹಳ್ಳಿಯ ನೇಕಾರರು ನಿಲ್ಲಿಸಬೇಕಾಗಿತ್ತು. ಆಗ ಎನ್.ಮಲ್ಲಪ್ಪನವರು ಸಹಕಾರಿ ಇಲಾಖಾ ಇನ್‌ಸ್ಪೆಕ್ಟರಾಗಿ ಬಂದ ನಂತರ ಜಿ.ವಿ. ನಾರಾಯಣ ಮೂರ್ತಿಯವರೊಂದಿಗೆ ಸೇರಿಕೊಂಡು ನೇಕಾರ ಸಹಕಾರ ಸಂಘವೊಂದನ್ನು ಅಲ್ಲಿ ಸ್ಥಾಪಿಸಿ ಅದರ ಮೂಲಕ ಅಲ್ಲಿಯ ಜನರಿಗೆ ನೇಯುವ ದಾರವನ್ನು ಪೂರೈಸಿ ತಕ್ಕಷ್ಟು ಮಟ್ಟಿಗೆ ಉದ್ಯೋಗಾವಕಾಶವನ್ನು ಕಲ್ಪಿಸಿಕೊಟ್ಟಿದ್ದರು. ಅಲ್ಲದೇ ಸ್ಥಳೀಯವಾಗಿ ಚರಕಗಳನ್ನು ತಯಾರಿಸಿ ನೇಕಾರರಿಗೆ ಒದಗಿಸಿಕೊಟ್ಟು ತನ್ಮೂಲಕ ಬಟ್ಟೆ ನೇಕಾರಿಕೆಯನ್ನು ಮುಂದುವರಿಸಲು ಕಾರಣರಾದರು.[೪೭] ಈ ಪರಿಸ್ಥಿತಿಯಲ್ಲಿ ಸಂಸ್ಥಾನದ ಸರ್ಕಾರವು ಚಿಕ್ಕನಾಯಕನಹಳ್ಳಿ ನೇಕಾರರಿಗೆ ಖಾದಿ ದಾರವನ್ನು ಹತೋಟಿ ದರದಲ್ಲಿ ಪೂರೈಸಲು ಮತ್ತು ಅದಕ್ಕೆ ಸಂಬಂಧಿಸಿದಂತೆ ತಕ್ಕ ಏರ್ಪಾಡುಗಳನ್ನು ಕೈಗೊಂಡು, ಅಲ್ಲಿ ಒಂದು ಖಾದಿ ಕೇಂದ್ರವನ್ನು ಪ್ರಾರಂಭಿಸಲು ಪ್ರಕಟಣೆ ಹೊರಡಿಸಿತು.[೪೮] ಆದರಂತೆಯೇ ೧೯೪೫–೪೬ರಲ್ಲಿ ಚಿಕ್ಕನಾಯಕನಹಳ್ಳಿಯಲ್ಲಿ ಒಂದು ಸರ್ಕಾರದ ಖಾದಿ ಕೇಂದ್ರವನ್ನು ತೆರೆಯಲಾಯಿತು. ಖಾದಿ ಪ್ರಚಾರದಲ್ಲಿ ಕೆಲಸ ನಿರ್ವಹಿಸುತ್ತಿದ್ದ ಜಿ.ವಿ. ಸೀತಾರಾಮಯ್ಯನವರು ಈ ಕೇಂದ್ರದ ವ್ಯವಸ್ಥಾಪಕ ಕಾರ್ಯದರ್ಶಿಯಾಗಿ ನೇಮಕವಾದರು. ಈ ಕೇಂದ್ರದ ಪ್ರಾರಂಭಾವಸ್ಥೆಯಲ್ಲಿ ಖಾದಿಯಲ್ಲಿ ಆಸಕ್ತಿ ಹೊಂದಿದ್ದ ಖಾದಿ ದಾರಗಳನ್ನು ಆರಿಸಿ ಪರಿಚಯ ಮಾಡಿಕೊಳ್ಳುವುದು ಒಂದು ವಿಷಯವಾಗಿತ್ತು. ಇದರಿಂದಾಗಿ ಈ ಕೇಂದ್ರ ದಲ್ಲಿ ಕೆಲಸ ಮಾಡುವವರಿಗೂ ಸ್ಥಳೀಯ ಪ್ರೋತ್ಸಾಹ ಸಿಕ್ಕಿ ಖಾದಿ ಪ್ರಚಾರದ ಕಾರ್ಯಗಳು ಸುಗಮವಾಗಿ ನಡೆಯಲು ಅನುಕೂಲವಾಯಿತು. ಜಿ.ವಿ. ಸೀತಾರಾಮಯ್ಯನವರು ಚಿಕ್ಕನಾಯಕನ ಹಳ್ಳಿ ತಾಲ್ಲೂಕಿನ ಹಳ್ಳಿಯಾದ ಆಲೂರಿನ ಸಂತೆಯಲ್ಲಿ ಜಿ.ವಿ. ನಾರಾಯಣಮೂರ್ತಿ ಅವರೊಡನೆ ಖಾದಿ ಪ್ರಚಾರ ಕಾರ್ಯವನ್ನು ಕೈಗೊಂಡಿದ್ದರು.[೪೯]

೧೯೪೫ರ ಪ್ರಜಾಪ್ರತಿನಿಧಿ ಸಭೆಯ ೫ನೇ ದಿವಸದ ಕಾರ್ಯಕಲಾಪಗಳ ಸಭೆಯಲ್ಲಿ ಎಂ. ಶ್ರೀನಿವಾಸ ಮೂರ್ತಿಯವರ ಖಾದಿಯ ಮೇಲಿನ ಪ್ರಶ್ನೆಗಳಿಗೆ ಸಂಸ್ಥಾನದ ಸರ್ಕಾರ ಉತ್ತರ ಕೊಡುತ್ತಾ ಖಾದಿಯ ಬಟ್ಟೆಯ ಖಾಸಗಿ ಕೇಂದ್ರಗಳಿಗೆ ನೋಟೀಸನ್ನು ನೀಡಬೇಕೆಂತಲೂ, ಲೋಕಲ್ ಬಾಡೀಸ್ ತುಮಕೂರು ಜಿಲ್ಲೆಯ ಪಾವಗಡ, ವೈ. ಎನ್. ಹೊಸಕೋಟೆಗಳಲ್ಲಿ ಖಾದಿ ಡೆವಲಪ್‌ಮೆಂಟ್ ಕೇಂದ್ರಗಳನ್ನು ತೆಗೆಯಲ್ಪಡುವುದೆಂದೂ ಖಾದಿ ದಾರಗಳನ್ನು ಸರ್ಕಾರ ಏನೂ ಮಾಡುವುದಿಲ್ಲವೆಂದು ತಿಳಿಸಿತು.[೫೦] ೧೯೪೫ರಲ್ಲಿ ಕುಣಿಗಲ್ಲಿನ ಪ್ರಮುಖ ಕಾಂಗ್ರೆಸ್ ಮುಖಂಡರಾದ ಕೆ.ವಿ. ಕೃಷ್ಣಸ್ವಾಮಿಯವರು ಕೊಲ್ಲಾಪುರದಮ್ಮ ದೇವಸ್ಥಾನದಲ್ಲಿ ನಡೆದ ಕಾಂಗ್ರೆಸ್ ಸಭೆಗೆ ಅಧ್ಯಕ್ಷತೆ ವಹಿಸಿ ಭಾಷಣದಲ್ಲಿ ಆರ್ಥಿಕ ಸ್ಥಿತಿ, ಸ್ವದೇಶಿ ಪ್ರಚಾರ, ಖಾದಿ ಪ್ರಚಾರ, ವಿದೇಶಿ ವಸ್ತ್ರ ದಹನ, ಗ್ರಾಮೋದ್ಯೋಗ, ಸ್ವಯಂ ಪರಿಪೂರ್ಣತೆ, ಮತ್ತು ಪಾಶ್ಚಾತ್ಯ ದೇಶಗಳಿಂದ ನಮ್ಮ ದೇಶದ ಶೋಷಣೆಯಾಗುವುದರ ಬಗ್ಗೆ ಜನರಿಗೆ ಅರಿವನ್ನು

ಮೂಡಿಸಿದರು.[೫೧] ಅದೇ ರೀತಿಯಾಗಿ ಜಿಲ್ಲೆಯ ಮಧುಗಿರಿಯ ಹೈಸ್ಕೂಲ್ ಮೈದಾನದಲ್ಲಿ ೨೧-೧೦-೧೯೪೬ರಂದು ಮಾಲಿಮರಿಯಪ್ಪನವರ ಅಧ್ಯಕ್ಷತೆಯಲ್ಲಿ ಚರಕಾ ಪ್ರಾರಂಭೋತ್ಸವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಯಿತು.[೫೨] ಈ ಸಭೆಯಲ್ಲಿ ಅನೇಕರಿಗೆ ಚರಕಗಳನ್ನು ವಿತರಣೆ ಮಾಡಲಾಯಿತು. ಅಲ್ಲದೆ ಚರಕಗಳಿಂದ ನೂಲನ್ನು ತೆಗೆಯುವುದರ ಬಗ್ಗೆ ತರಬೇತಿಯನ್ನು ನೀಡಲಾಯಿತು.

ಮಧುಗಿರಿ ತಾಲ್ಲೂಕಿನ ಎಂ.ಪುಟ್ಟತಿಮ್ಮಯ್ಯನವರು ೧೯೫೧-೫೨ರಲ್ಲಿ ಇಟಕದಿಬ್ಬನಹಳ್ಳಿಯಲ್ಲಿ ಖಾದಿ ಮತ್ತು ಗ್ರಾಮೋದ್ಯೋಗ ಕೇಂದ್ರವನ್ನು ಅದರ ಜೊತೆಗೆ ಖಾದಿ ಮಾರಾಟ ಮಳಿಗೆಯನ್ನು ಸ್ಥಾಪಿಸಿದರು. ಇವರು ಗಾಂಧೀಜಿಯವರ ಅಂಬರ ಚರಕದ ಬಗ್ಗೆ ಮಧುಗಿರಿ ತಾಲ್ಲೂಕಿನ ಹಳ್ಳಿಗಳಲ್ಲಿ ಕಾಲ್ನಡಿಗೆಯಲ್ಲಿ ಪ್ರವಾಸ ಕೈಗೊಂಡು ಖಾದಿಯ ಮಹತ್ವದ ಬಗ್ಗೆ, ನೂಲುವ ಉದ್ಯೋಗದ ವೈಶಿಷ್ಟ್ಯತೆಯ ಬಗ್ಗೆ ಈ ರೀತಿಯಾಗಿ ವಿವರಿಸಿದರು.

೧. ಉದ್ಯೋಗವನ್ನು ಕಲ್ಪಿಸುತ್ತದೆ.

೨. ನೂಲುವ ಕಲೆಯನ್ನು ಅನೇಕರಿಗೆ ಕಲಿಸುತ್ತದೆ.

೩. ನೂಲುವುದಕ್ಕೆ ಬಂಡವಾಳದ ಅಗತ್ಯವಿಲ್ಲ.

೪. ನೂಲುವುದಕ್ಕೆ ಚರಕಾವನ್ನು ಸುಲಭವಾಗಿ ತಯಾರಿಸಿಕೊಳ್ಳಬಹುದು.

೫. ನೂಲುವ ಕಲೆಯಲ್ಲಿ ಜನತೆಗೆ ಆಸಕ್ತಿಯಿರುತ್ತದೆ.

೬. ನೂಲುವ ಕಲೆಯೂ ಬರಗಾಲಕ್ಕೆ ಪರಿಹಾರವನ್ನು ಒದಗಿಸುತ್ತದೆ.

೭. ನೂಲುವುದರಿಂದ ವಿದೇಶಗಳಿಗೆ ಹರಿಯುವ ಬಂಡವಾಳವನ್ನು ತಡೆಗಟ್ಟಬಹುದು.

೮. ನೂಲುವುದರಿಂದ ಜನತೆಯಲ್ಲಿ ಸಹಕಾರಿ ಮನೋಭಾವನೆಯನ್ನು ಮೂಡಿಸುವ ಅತ್ಯುತ್ತಮ ಸಾಧನವಾಗಿದೆ.

೯. ಇದು ಅಲ್ಲದೆ ಖಾದಿಯನ್ನು ನೂಲುವದರ ಬಗ್ಗೆ ಹೇಳುತ್ತಾ ಲಕ್ಷಾಂತರ ಜನರಿಗೆ ಅವರ ಗುಡಿಸಲಿನಲ್ಲಿ ಮರ್ಯಾದೆಯಿಂದ ಬಾಳಲು ಉದ್ಯೋಗ ಕಲ್ಪಿಸಿ ಕೊಡುತ್ತದೆ. ಸಹಸ್ರಾರು ದೀನ ದಲಿತರಿಗೆ ನೂಲುವುದು, ನೇಯುವುದು ಜೀವನಕ್ಕೆ ಆಧಾರವಾಗಿದೆ ಎಂದು ಹೇಳಿದರು. ಇವರು ತುಮಕೂರಿನಲ್ಲಿ ಖಾದಿ ಗ್ರಾಮೋದ್ಯೋಗ ಕೇಂದ್ರವನ್ನು ತೆರೆದಿದ್ದರು. ಅಲ್ಲಿ ಹತ್ತಿಯನ್ನು ಸಂಗ್ರಹಿಸಿ, ಅದನ್ನು ನೂಲುವವರಿಗೆ ಹಂಚುತ್ತಿದ್ದರು. ನೂಲನ್ನು ನೇಕಾರರಿಗೆ ಕೊಟ್ಟು ಖಾದಿ ಬಟ್ಟೆಯನ್ನು ನೇಯಿಸುತ್ತಿದ್ದರು. ಅನಂತರ ಖಾದಿಯನ್ನು ಮಾರುತ್ತಿದ್ದರು.[೫೩]

೧೯೫೭ರ ನವೆಂಬರ್ ೩ ರಂದು ಆಚಾರ್ಯ ವಿನೋಭಾಭಾವೆಯವರು ಭೂದಾನ ಚಳುವಳಿಯ ಅಂಗವಾಗಿ ತುಮಕೂರು ಜಿಲ್ಲೆಯ ತುರುವೆಕೆರೆ ತಾಲ್ಲೂಕಿನ ಮಾಯಸಂದ್ರದಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ ಖಾದಿಯ ಬಗ್ಗೆ ಜನತೆಗೆ ಈ ರೀತಿ ತಿಳಿಸಿದರು, "ಹಿಂದುಸ್ಥಾನದಲ್ಲಿ ಮೊದಲು ಬಟ್ಟೆ ತಯಾರಿಸುವ ಮಿಲ್ಲುಗಳಿರಲಿಲ್ಲವಾದ್ದರಿಂದ ಜನರೆಲ್ಲರು ಖಾದಿಯನ್ನು ಧರಿಸುತ್ತಿದ್ದರು. ಆದರೆ ಮಿಲ್ಲುಗಳು ಸ್ಥಾಪನೆಯಾದ ನಂತರ ಖಾದಿ ಧರಿಸುವವರ ಸಂಖ್ಯೆಯು ಕಡಿಮೆಯಾಯಿತು. ಆದರೆ ಸ್ಥಳೀಯ ಪ್ರಮುಖ ಕಾಂಗ್ರೆಸ್ಸಿನ ರಚನಾತ್ಮಕ ಕಾರ್ಯಕರ್ತರಾದ ಮಾ.ಕೃ.ನರಸಿಂಹಯ್ಯನವರು ಧರಿಸಿರುವ ಖಾದಿಯು ಹೋಗುವುದಿಲ್ಲ. ಏಕೆಂದರೆ ಅವರು ವಿಚಾರ ಪೂರ್ವಕವಾಗಿ ಖಾದಿ ಬಟ್ಟೆಯನ್ನು ಧರಿಸಿದ್ದಾರೆ. ಇದು ಮಿಲ್ಲಿನ ಬಟ್ಟೆಯೊಡನೆ ಹೋರಾಡುತ್ತದೆ"[೫೪] ಎಂದು ಖಾದಿಯ ಸಂದೇಶವನ್ನು ಸಾರಿದರು. ೧೯೬೯ರಲ್ಲಿ ತುಮಕೂರಿನಲ್ಲಿ ಬಾಪೂಜಿ ವಿದ್ಯಾಸಂಸ್ಥೆಯು ಪ್ರಾರಂಭವಾಯಿತು. ಗಾಂಧೀಜಿಯವರ ಆಶಯದಂತೆ ಈ ವಿದ್ಯಾಸಂಸ್ಥೆಯಲ್ಲಿ ಅಧ್ಯಯನ ಮಾಡುತ್ತಿದ್ದ ವಿದ್ಯಾರ್ಥಿಗಳಿಗೆ ಖಾದಿ ಬಟ್ಟೆಯನ್ನು ಸಮವಸ್ತ್ರವನ್ನಾಗಿ ೧೯೬೯ ರಿಂದ ೧೯೭೮ರವರೆಗೆ ಕಡ್ಡಾಯಗೊಳಿಸಲಾಗಿತ್ತು. ಅದೇ ರೀತಿಯಾಗಿ ತುಮಕೂರಿನಲ್ಲಿರುವ ಬಾಪೂಜಿ ವಿಕಾಸ ಮಂದಿರದ ಅನಾಥಾಲಯ ವಿದ್ಯಾರ್ಥಿ ನಿಲಯದಲ್ಲಿನ ವಿದ್ಯಾರ್ಥಿಗಳಿಗೆ ಖಾದಿಯನ್ನೇ ಉಡುಪುಗಳಿಗೂ, ಮಲಗುವ ಹಾಸಿಗೆಗಳಿಗೂ, ಹೊದಿಕೆಗಳಿಗೆ ಬಳಸುತ್ತಿದ್ದರು.[೫೫] ಈ ರೀತಿಯಾಗಿ ತುಮಕೂರು ಜಿಲ್ಲೆಯಲ್ಲಿ ಗಾಂಧೀಜಿಯ ಸ್ವದೇಶಿ, ವಿದೇಶಿ ಬಹಿಷ್ಕಾರ, ಖಾದಿ ಪ್ರಚಾರ ಕಾರ್ಯಗಳು ನಡೆದು ಯಶಸ್ವಿಯಾಗಿದ್ದವು.

## ೨.೩. ಗಾಂಧೀಜಿಯವರ ಗ್ರಾಮೋದ್ಯೋಗಗಳು

ಗಾಂಧೀಜಿಯವರು ಖಾದಿಯಷ್ಟೇ ಪ್ರಾಮುಖ್ಯತೆಯನ್ನು ಗ್ರಾಮ ಕೈಗಾರಿಕೆಗಳಿಗೂ ನೀಡಿದರು. ಇವುಗಳ ಬಗ್ಗೆ ಹೇಳುತ್ತಾ ಖಾದಿ ಇಲ್ಲದೆ, ಗ್ರಾಮ ಕೈಗಾರಿಕೆಗಳು ನಿಲ್ಲಲಾರವು. ಹಾಗೆಯೇ ಗ್ರಾಮೋದ್ಯೋಗಗಳಿಲ್ಲದೆ ಖಾದಿಯ ವೈಭವ ಕಡಿಮೆಯಾಗುವುದು"[೫೬] ಎಂಬ ಮಾತು ಬಹಳ ಅರ್ಥಪೂರ್ಣವಾದುದು. ಗ್ರಾಮ ಕೈಗಾರಿಕೆಗಳಿಲ್ಲದೆ ಆರ್ಥಿಕ ಜೀವನವು ಪೂರ್ಣವಾಗುವುದಿಲ್ಲ, ಹಳ್ಳಿಯ ಕೈಗಾರಿಕೆ, ನಿರುದ್ಯೋಗದ ನಿರ್ಮೂಲನ, ಗ್ರಾಮಾಭಿವೃದ್ಧಿ, ರಾಟೆಗೆ ತೌರುಮನೆ ಎಂಬ ಕಲ್ಪನೆಯಿಂದ ಚರಕಾ ಪ್ರಚಾರಕ ಸಂಘವು ಗಾಂಧೀಜಿಯವರ ಈ ಅಂಶವನ್ನು ಅಂಗೀಕರಿಸಿತು. ಈ ವಿಷಯಕ್ಕೆ ಸಂಬಂಧಿಸಿದಂತೆ ಸಂಸ್ಥಾನದ ಸರ್ಕಾರದ ಸ್ಪಂದನೆ ಕೂಡಾ ಪ್ರೋತ್ಸಾಹದಾಯಕವಾಗಿ ಕಂಡು ಬಂದಿತು. ಇದಕ್ಕೆ ಪೂರಕವಾಗಿ ಹಲವು ಗೃಹ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡಿತು.[೫೭] ಭಾರತದ ಬಹುಪಾಲು ಕೈಗಾರಿಕೆಗಳು ಕೃಷಿ ಅವಲಂಬಿತವಾಗಿವೆ. ಆದ್ದರಿಂದ ರೈತರು ಉಳಿದ ಕಾಲವನ್ನು ಗುಡಿ ಕೈಗಾರಿಕೆಗಳಲ್ಲಿ ಮತ್ತು

ಗ್ರಾಮೋದ್ಯೋಗಗಳನ್ನು ಮಾಡುವ ಮೂಲಕ ತಮ್ಮ ಸ್ಥಿತಿಯನ್ನು ಉತ್ತಮ ಪಡಿಸಿಕೊಳ್ಳ ಬಹುದಾಗಿದೆ. ಗಾಂಧೀಜಿಯವರ ಮಾತಿನಲ್ಲಿ ಹೇಳುವುದಾದರೆ "ಮೊದಲು ಹಳ್ಳಿಗಳು ಉದ್ಧಾರವಾಗಬೇಕು. ಅನಂತರ ಭಾರತ ತನ್ನಷ್ಟಕ್ಕೆ ತಾನೇ ಉದ್ಧಾರವಾಗುತ್ತದೆ" ಎಂದಿದ್ದಾರೆ.[೫೮] ಆದ್ದರಿಂದ ಸರ್ಕಾರ ಮತ್ತು ಜನತೆ ಗ್ರಾಮ ಕೈಗಾರಿಕೆಗಳಿಗೆ ಉತ್ತೇಜನ ನೀಡುವುದರ ಮೂಲಕ ರಾಷ್ಟ್ರ ಸ್ವಾವಲಂಬನೆಯಾಗುವಂತೆ ಮಾಡಬಹುದಾಗಿದೆ. ಜನಗಳೇ ಹಳ್ಳಿಗಳಿಗೆ ಹಿಂತಿರುಗಿ ಎಂದು ಗಾಂಧೀಜಿಯವರು ಹೇಳಿರುವ ಮಾತು ಅರ್ಥಪೂರ್ಣವಾಗಿದೆ. ಇದರಿಂದಾಗಿ ದೇಶ ಸ್ವಾವಲಂಬನೆಯ ಅಭಿವೃದ್ಧಿಯ ಪಥದಲ್ಲಿ ಹೋಗಲು ಗ್ರಾಮ ಕೈಗಾರಿಕೆಗಳು ಸಹಾಯಕವಾಗಿವೆ. ೧೯೧೧ರಲ್ಲಿ ನಡೆದ ಆರ್ಥಿಕ ಸಮ್ಮೇಳನದ ನಂತರ ಕರಕುಶಲ ಕೆಲಸಗಾರರ ಸಂಖ್ಯೆ ಮತ್ತು ವೃತ್ತಿಗಳನ್ನು ಆರ್ಥಿಕಗೊಳಿಸುವಂಥ ನೀತಿಯನ್ನು ಮೈಸೂರು ಸಂಸ್ಥಾನದ ಸರ್ಕಾರವು ಅನುಸರಿಸತೊಡಗಿತು. ಮರಕೆಲಸ, ಕಬ್ಬಿಣದಕೆಲಸ, ಜೇಡಿಮಣ್ಣಿನಕೆಲಸ, ಚರ್ಮದಕೆಲಸ, ಬಟ್ಟೆ ನೇಯುವಕೆಲಸ, ದಂತತಯಾರಿಕೆಲಸ, ಬೊಂಬೆ ತಯಾರಿಕೆ, ಚಮ್ಮಾರಿಕೆ, ಕಮ್ಮಾರಿಕೆಯಂತಹ ಅನೇಕ ಗ್ರಾಮೋದ್ಯೋಗಗಳಿಗೆ, ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಮಾಡಿದ ಸ್ವದೇಶಿ ಮತ್ತು ಸ್ವಾವಲಂಬನೆಯ ತತ್ವಗಳು ಗ್ರಾಮೀಣ ಕೈಗಾರಿಕೆಗಳಿಗೆ ಮತ್ತಷ್ಟು ಪ್ರೋತ್ಸಾಹವನ್ನು ನೀಡಿದವು.[೫೯]

ಸಂಸ್ಥಾನದ ದಿವಾನರಾಗಿದ್ದ ವಿಶ್ವೇಶ್ವರಯ್ಯ ಮತ್ತು ಸರ್. ಮಿರ್ಜಾ ಇಸ್ಮಾಯಿಲ್ ರವರು ಗಾಂಧೀಜಿಯವರ ತತ್ವಗಳಿಂದ ಪ್ರಭಾವಿತರಾಗಿ ರಾಜ್ಯದ ಕರಕುಶಲ ಗ್ರಾಮೋದ್ಯೋಗ ಗಳ ಅಭಿವೃದ್ಧಿಗಾಗಿ ಹಲವು ಕ್ರಮಗಳನ್ನು ಕೈಗೊಂಡಿದ್ದರು. ಇದೇ ರೀತಿಯಾಗಿ ತುಮಕೂರು ಜಿಲ್ಲೆಯಲ್ಲಿ ಅಭಿವೃದ್ಧಿಗೊಂಡ ಗ್ರಾಮೋದ್ಯೋಗಗಳ ಚಟುವಟಿಕೆಗಳಿಗೆ ಕಾಂಗ್ರೆಸ್ಸಿಗರು ಹೇಗೆ ಕಾರಣರಾದರು ಎಂಬುದು ಪ್ರಮುಖವಾದದ್ದು. ೧೯೨೦ರಲ್ಲಿ ತುಮಕೂರು ಜಿಲ್ಲೆಯಲ್ಲಿ ಗ್ರಾಮ ಕೈಗಾರಿಕೆಗಳು ಅಭಿವೃದ್ಧಿಯನ್ನು ಹೊಂದಿದ್ದವು. ಪಾವಗಡ, ಕೊರಟಗೆರೆಗಳು ಗಾಜಿನ ಬಳೆಯ ಗ್ರಾಮ ಉದ್ಯಮಕ್ಕೆ ಪ್ರಸಿದ್ಧಿಯಾಗಿದ್ದವು. ಮರದ ಬಾಚಣಿಕೆಗಳ ತಯಾರಿಕೆಗೆ ತುಮಕೂರು ಪ್ರಸಿದ್ಧಿಯಾಗಿತ್ತು. ಸುಮಾರು ೨೦೦ ಕುಟುಂಬಗಳು ಈ ಗೃಹ ಕೈಗಾರಿಕೆಯಲ್ಲಿ ನಿರತವಾಗಿದ್ದವು. ತುಮಕೂರಿನಲ್ಲಿ ತಯಾರಿಸುತ್ತಿದ್ದ ಸೀಗೇಕಾಯಿ ಪುಡಿ ಕೈಗಾರಿಕೆ ಇಡೀ ರಾಜ್ಯದಲ್ಲಿಯೇ ಉತ್ತಮವಾದದ್ದು. ಜಿಲ್ಲೆಯ ತಾಲ್ಲೂಕು ಕೇಂದ್ರವಾದ ತಿಪಟೂರು ಎತ್ತಿನ ಗಾಡಿಗಳ ತಯಾರಿಕೆಯ ಗೃಹ ಉದ್ಯಮಕ್ಕೆ ಪ್ರಸಿದ್ಧಿಯಾಗಿತ್ತು. ಕೊರಟಗೆರೆಯ ಸೀತಕಲ್ಲು, ಉರ್ಡುಗೆರೆಗಳಲ್ಲಿ ಗೃಹ ಉದ್ಯಮದಲ್ಲಿ ತಯಾರಾಗುತ್ತಿದ್ದ ಹಿತ್ತಾಳೆಯ ಪಾತ್ರೆಗಳು ಪ್ರಸಿದ್ಧವಾಗಿದ್ದರೆ, ಶಿರಾ ದೇಶಿಯವಾಗಿ ತಯಾರಿಸಿದ ಬೂಟುಗಳಿಗೆ ಪ್ರಸಿದ್ಧವಾಗಿತ್ತು. ಚಿಕ್ಕನಾಯಕನಹಳ್ಳಿಯ ದವನದ ಹೊಸಹಳ್ಳಿಯು ದೇಶಿಯ ಕಬ್ಬಿಣ ಉತ್ಪಾದನೆ ಪ್ರಸಿದ್ಧವಾಗಿತ್ತು. ೧೯೨೩-೨೪ರಲ್ಲಿ ೧೨೦೦ ಟನ್ನು

ಚರ್ಮವು ಶಿರಾದಿಂದ ಬೆಂಗಳೂರಿಗೆ ಮಾರಾಟವಾಗಿತ್ತು.[೬೦] ಪುರಾತನ ಕುಟೀರ ಉದ್ಯಮಗಳಲ್ಲಿ ಒಂದಾದ ಉಣ್ಣೆ ನೇಕಾರಿಕೆಯ ಗ್ರಾಮೋದ್ಯೋಗವು ಒಂದಾಗಿದೆ. ತುಮಕೂರು ಜಿಲ್ಲೆಯು ಈ ಕುಲಕಸುಬಿನ ತವರೂರಾಗಿದೆ. ಚಿಕ್ಕನಾಯಕನಹಳ್ಳಿಯು, ಪ್ರಸಿದ್ಧ ಕಂಬಳಿ ನೇಕಾರಿಕೆಯ ಕೇಂದ್ರವಾಗಿತ್ತು. ಇಲ್ಲಿನ ಕಂಬಳಿಗಳು ಬಹಳ ಪ್ರಸಿದ್ಧಿಯಾಗಿದ್ದವು. ೧೯೨೩–೨೪ರಲ್ಲಿ ಪಾವಗಡ ತಾಲ್ಲೂಕಿನಿಂದ ಶ್ರೀಲಂಕಾ, ಬೆಂಗಳೂರು, ಅನಂತಪುರ, ಶಿವಮೊಗ್ಗಗಳಿಗೆ ೩೦,೦೦೦ ರೂಪಾಯಿಯ ಮೌಲ್ಯದ ಕಂಬಳಿಗಳು ರಫ್ತಾಗಿದ್ದವು.[೬೧] ೧೯೨೦–೨೧ರಲ್ಲಿ ಕರ್ನಾಟಕದ ಬೆಂಗಳೂರು, ದೊಡ್ಡಬಳ್ಳಾಪುರ, ಆನೇಕಲ್, ಮೊಳಕಾಲ್ಮೂರು, ತುಮಕೂರು ಜಿಲ್ಲೆಯ ವೈ.ಎನ್. ಹೊಸಕೋಟೆಗಳಲ್ಲಿ ಹತ್ತಿಯ ಸಹಾಯದಿಂದ ಖಾದಿಯ ನೂಲನ್ನು ತಯಾರಿಸಿ ಕೈಮಗ್ಗಗಳ ಸಹಾಯದಿಂದ ಸ್ತ್ರೀಯರ ಸೀರೆಗಳನ್ನು ನೇಯುತ್ತಿದ್ದರು. ಇದೇ ಸಮಯದಲ್ಲಿ ತುಮಕೂರು ಜಿಲ್ಲೆಯ ಶಿರಾ, ಪಾವಗಡಗಳಲ್ಲಿ ತಯಾರಿಸಿದ ನೂಲನ್ನು ಬೆಂಗಳೂರು, ಹಿಂದೂಪುರ, ತುಮಕೂರುಗಳಿಗೆ ರಫ್ತು ಮಾಡಲಾಗುತ್ತಿತ್ತು.[೬೨]

ಆರ್.ಎಸ್. ಆರಾಧ್ಯರವರು ೧೯೩೯ರಲ್ಲಿ ತುಮಕೂರಿನ ಮಂಡಿಪೇಟೆಯಲ್ಲಿ ಆರ್ಯನ್ ಇಂಡಸ್ಟ್ರಿಯನ್ನು ಪ್ರಾರಂಭಿಸಿದರು. ಇದು ರೈತರ ವ್ಯವಸಾಯಕ್ಕೆ ಅಗತ್ಯವಾದ ಸೀಮೆ ನೇಗಿಲು, ಕಲ್ಟಿವೇಟರ್, ಕೊಪ್ಪರಿಗೆಗಳು ಮುಂತಾದ ಉಪಕರಣಗಳ ತಯಾರಿಕೆಯಲ್ಲಿಯೂ, ಮಾರಾಟದಲ್ಲಿಯೂ ಜಿಲ್ಲೆಯಲ್ಲಿಯೇ ಮಾತ್ರವಲ್ಲ ರಾಜ್ಯದಲ್ಲೇ ಮಾದರಿ ಸಣ್ಣ ಉದ್ಯಮವೆಂದು ಹೆಸರು ಗಳಿಸಿತ್ತು.[೬೩] ಗ್ರಾಮೋದ್ಯಮ ಪ್ರಗತಿಗಾಗಿ ರಾಜ್ಯದಲ್ಲಿ ಪ್ರಥಮವಾಗಿ ೧೯೪೨ರಲ್ಲಿ ಜಿಲ್ಲೆಯ ಚಿಕ್ಕನಾಯಕನಹಳ್ಳಿಯಲ್ಲಿ ಉಣ್ಣೆ ನೇಕಾರರ ಸಹಕಾರ ಸಂಘ ಸ್ಥಾಪಿಸಿಕೊಂಡು ಎರಡನೆಯ ಮಹಾಯುದ್ಧದ ಸಮಯದಲ್ಲಿ ಮಿತ್ರ ರಾಷ್ಟ್ರಗಳ ಸೈನಿಕರಿಗೆಂದು ಸುಮಾರು ೫೦,೦೦೦ ಉಣ್ಣೆ ಬ್ಲಾಂಕೆಟ್‌ಗಳನ್ನು ತಯಾರಿಸಿ ರಫ್ತು ಮಾಡಿದ್ದರು.[೬೪] ಇದೇ ಸಮಯದಲ್ಲಿ ರಾಜ್ಯದ ಕುರಿ ಮತ್ತು ಉಣ್ಣೆ ಉತ್ಪನ್ನ ಮಂಡಳಿಯ ಅಧ್ಯಕ್ಷರಾಗಿ ಆಯ್ಕೆಯಾದ ತುಮಕೂರು ತಾಲ್ಲೂಕಿನ ಎನ್. ಮಲ್ಲಪ್ಪನವರು ಜಿಲ್ಲೆಯ ಹಿಂದುಳಿದ ಕುರುಬ ಜನಾಂಗದ ಪ್ರಮುಖ ಕಸುಬಾದ ಉಣ್ಣೆ ನೇಕಾರಿಕೆ ಉದ್ಯಮದ ಪ್ರಗತಿಗಾಗಿ ಸೇವೆ ಸಲ್ಲಿಸಿದರು. ಇವರು ಈ ಅವಧಿಯಲ್ಲಿ ರಾಜ್ಯದಲ್ಲಿನ ಸುಮಾರು ೧೪೬ ಉಣ್ಣೆ ನೇಕಾರರ ಸಹಕಾರ ಸಂಘಗಳನ್ನು ಪುನಶ್ಚೇತನಗೊಳಿಸಿದರು.[೬೫] ಉಣ್ಣೆ ಉದ್ಯಮವನ್ನು ಅಭಿವೃದ್ಧಿಗೊಳಿಸಲು ಕರ್ನಾಟಕ ಸರ್ಕಾರದ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಯ ವತಿಯಿಂದ ಉಣ್ಣೆ ಗ್ರಾಮೋದ್ಯಮದ ಅಭಿವೃದ್ಧಿಗಾಗಿ ಬೆಳಗಾವಿ ಜಿಲ್ಲೆಯ ಸಿಂದೂಳ್ಳಿಯಲ್ಲಿ ಒಂದು ಉಣ್ಣೆ ಉದ್ಯಮವನ್ನು, ತುಮಕೂರು ಜಿಲ್ಲೆಯ ಪಾವಗಡ ತಾಲ್ಲೂಕಿನ ವೈ.ಎನ್. ಹೊಸಕೋಟೆಯಲ್ಲಿ ಮತ್ತೊಂದು ಉಣ್ಣೆ ಉದ್ಯಮವನ್ನು ಮತ್ತು ಇದರ ಜೊತೆಗೆ ಎರಡು ಉಣ್ಣೆ ಕೈಮಗ್ಗದ ತರಬೇತಿ ಕೇಂದ್ರಗಳನ್ನು ಆರಂಭಿಸಲಾಗಿದೆ.[೬೬]

ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗಾಗಿ ಬೆಂಗಳೂರಿನಲ್ಲಿ ೧೯೪೪ರಲ್ಲಿ ಸ್ಥಾಪನೆಯಾದ ಅಖಿಲ ಮೈಸೂರು ಸಣ್ಣ ಕೈಗಾರಿಕೆಗಳ ಸಂಘದ ಅಧ್ಯಕ್ಷರಾಗಿ ತುಮಕೂರಿನ ಆರ್.ಎಸ್. ಆರಾಧ್ಯರು ನೇಮಕಗೊಂಡ ನಂತರ ಚಿಕ್ಕ ಉದ್ಯಮಗಳಿಗೆ ಆರ್ಥಿಕ ನೆರವನ್ನು ಅಗತ್ಯವಾದ ಸಾಮಗ್ರಿಗಳನ್ನು ನೀಡುವಲ್ಲಿ ಮುಂದಾಗಿ, ಕನ್ನಡ ನಾಡನ್ನು ಸಣ್ಣ ಕೈಗಾರಿಕೆಗಳ ಬೀಡನ್ನಾಗಿಸಿದರು. ಆದ್ದರಿಂದ ಇವರನ್ನು ಸಣ್ಣ ಕೈಗಾರಿಕೆಗಳ ಆರಾಧ್ಯ ಎಂದು ಕರೆಯಲಾಗಿದೆ.[೬೭] ಸಣ್ಣಕೈಗಾರಿಕೆಗಳ ಪ್ರಗತಿಗೆ ಜಿಲ್ಲೆಯ ಕಾಂಗ್ರೆಸ್ಸಿನ ನಾಯಕರಾದ ಇವರ ಸೇವೆ ಸ್ಮರಣೀಯವಾದದ್ದು.

ಸ್ವಾತಂತ್ರ್ಯದ ನಂತರವು ಗಾಂಧೀಜಿಯವರು ಪ್ರಚಾರ ನಡೆಸಿದ ಗ್ರಾಮೋದ್ಯೋಗಗಳ ಪ್ರಗತಿಗಾಗಿ ಸರ್ಕಾರವು ಹಲವು ಯೋಜನೆಗಳ ಮೂಲಕ ತುಮಕೂರು ಜಿಲ್ಲೆಯಲ್ಲಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಈ ಮೂಲಕ ಗ್ರಾಮೀಣ ಜನತೆಯ ನಿರುದ್ಯೋಗದ ಸಮಸ್ಯೆಯನ್ನು ನಿವಾರಿಸುವುದು. ಅಲ್ಲದೇ ಅವರ ಸಾಮಾಜಿಕ, ರಾಜಕೀಯ, ಆರ್ಥಿಕ, ಶೈಕ್ಷಣಿಕ ಕ್ಷೇತ್ರಗಳ ಪ್ರಗತಿಯನ್ನು ಹೆಚ್ಚಿಸುವುದಾಗಿದೆ. ಈ ಮೂಲಕ ಗ್ರಾಮ ಕೈಗಾರಿಕೆಗಳನ್ನು ಪುನಶ್ಚೇತನ ಗೊಳಿಸುವುದು ಆಗಿದೆ ಎಂದು ಹೇಳಬಹುದು. ಸ್ವಾತಂತ್ರ್ಯದ ನಂತರ ಜಿಲ್ಲೆಯಲ್ಲಿ ಗಾಂಧೀಜಿಯವರ ಗ್ರಾಮೋದ್ಯೋಗದ ಅಂಶಕ್ಕೆ ಪೂರಕವಾಗಿ ಸರ್ಕಾರವು ಕೈಗೊಂಡಿರುವ ಚಟುವಟಿಕೆಗಳನ್ನು ಕೆಲವು ಯೋಜನೆಗಳ ಮೂಲಕ ತಿಳಿದುಕೊಳ್ಳಬಹುದು.

ತುಮಕೂರು ಜಿಲ್ಲಾ ಖಾದಿ ಮತ್ತು ಗ್ರಾಮೋದ್ಯೋಗ ಸಹಕಾರ ಸಂಘವು ನಗರದ ಅಶೋಕ ರಸ್ತೆಯಲ್ಲಿದೆ. ಇದು ೧೯೫೨ ರಲ್ಲಿ ಸ್ಥಾಪಿತವಾಯಿತು. ಖಾದಿ ನೂಲುವ ಬಳಕೆದಾರರ ಸಹಕಾರ ಸಂಘದ ೬೧೪ ಸದಸ್ಯರಿದ್ದಾರೆ. ೫೦೬ ಮಂದಿ ಮಹಿಳಾ ಸದಸ್ಯರಿದ್ದಾರೆ. ಈ ಸಂಘದ ಮೂಲಕ ಪ್ರತಿವರ್ಷವೂ ಸುಮಾರು ೫೦ ಸಾವಿ ರೂಪಾಯಿಗಳ ಖಾದಿಯನ್ನು ತಯಾರಿಸಿ ಹಾಗೂ ಹೊರಗಿನಿಂದ ಮೂರು ಲಕ್ಷ ರೂಪಾಯಿಗಳ ಖಾದಿಯನ್ನು ತರಿಸಿ ಮಾರಾಟ ಮಾಡುತ್ತಿದ್ದರು.[೬೮] ಈ ಖಾದಿ ಮತ್ತು ಗ್ರಾಮೋದ್ಯೋಗ ಸಹಕಾರ ಸಂಘವು ಪ್ರಾರಂಭವಾದಾಗ ಟಿ.ಜಿ. ಗುಬ್ಬಿ ಹುಚ್ಚಪ್ಪನವರು ಅಧ್ಯಕ್ಷರಾಗಿಯೂ, ಮೂರ್ತಿಶ್ರೀ ವಾಸುದೇವ ರಾಯರು ಕಾರ್ಯದರ್ಶಿಯಾಗಿಯೂ, ಎಂ.ವಿ. ರಾಮರಾಯರು, ಜೆ.ಸಿ. ಭಾಗೀರಥಮ್ಮ, ಎಂ. ನೀಲಕಂಠರಾಯರುಗಳು ಕಾರ್ಯಕಾರಿಣೀ ಸಮಿತಿಯ ಸದಸ್ಯರಾಗಿದ್ದರು.[೬೯] ಈ ಸಹಕಾರ ಸಂಘವು ಸ್ಥಾಪನೆಯದಾಗಿನಿಂದಲೂ ಜೆ.ಸಿ. ಭಾಗೀರಥಮ್ಮನವರು ನಿರ್ದೇಶಕರಾಗಿಯೂ, ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದಾರೆ. ಇವರು ಖಾದಿ ಮತ್ತು ಗ್ರಾಮೋದ್ಯೋಗದಲ್ಲಿ ನಿರತರಾಗಿದ್ದ ಜಿಲ್ಲೆಯ ಅನೇಕ ಮಹಿಳೆಯರಿಗೆ ಸಹಾಯಕಳಾಗಿದ್ದರು.[೭೦]

ಕರ್ನಾಟಕ ಸರ್ಕಾರವು ೧೯೫೬ರ ಶಾಸನದ ಪ್ರಕಾರ ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಯನ್ನು ಸ್ಥಾಪಿಸಲಾಗಿದ್ದು, ಇದು ೧೯೫೭ರಲ್ಲಿ ಕಾರ್ಯನಿರತವಾಯಿತು.

ಬೆಂಗಳೂರಿನಲ್ಲಿ ಕೇಂದ್ರ ಕಛೇರಿಯೂ ತುಮಕೂರು, ಮೈಸೂರು, ಧಾರವಾಡ, ಗುಲ್ಬರ್ಗಗಳಲ್ಲಿ ಸ್ಥಳೀಯ ಪ್ರಾಂತೀಯ ಕಛೇರಿಗಳು ಸ್ಥಾಪನೆಯಾದವು.[೭೧] ತುಮಕೂರಿನಲ್ಲಿರುವ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಯ ವಿಭಾಗದ ಮುಖ್ಯಾಧಿಕಾರಿಗಳಾಗಿ ಚಿಕ್ಕನಾಯಕನಹಳ್ಳಿಯ ನರಸಿಂಹರಾಜುರವರು ಸೇವೆ ಸಲ್ಲಿಸಿದ್ದರು. ಇವರು ಇದಕ್ಕೂ ಮೊದಲು ಅಮೆರಿಕಾಕ್ಕೆ ಹೋಗಿ ಗ್ರಾಮ ಕೈಗಾರಿಕೆಗಳ ಬಗ್ಗೆ ವಿಶೇಷವಾಗಿ ಅಧ್ಯಯನ ಕೈಗೊಂಡಿದ್ದರು.[೭೨] ಈ ಮೂಲಕ ಜಿಲ್ಲೆಯಲ್ಲಿ ಗ್ರಾಮ ಕೈಗಾರಿಕೆಗಳ ಅಭಿವೃದ್ಧಿಗೆ ಸಹಕಾರ ನೀಡಿದರು. ಇದೇ ರೀತಿ ಹಿರಿಯ ಗಾಂಧೀವಾದಿಯಾಗಿದ್ದ ಮಾ.ನಂ. ಶ್ರೀಕಂಠಯ್ಯನವರು ಗ್ರಾಮೋದ್ಯೋಗಕ್ಕೆ ಪೂರಕವಾಗುವಂತೆ ತುರುವೆಕೆರೆಯಲ್ಲಿ ತೆಂಗಿನಕಾಯಿ ಹಾಗೂ ಬಡಗಿ ಜನರ ಸಹಕಾರ ಸಂಘಗಳನ್ನು ಸ್ಥಾಪಿಸಿದ್ದರು.[೭೩] ೧೯೬೨ರಲ್ಲಿ ರಾಜ್ಯ ಸರ್ಕಾರವು ಸಣ್ಣ ಕೈಗಾರಿಕೆಗಳ ಮಂಡಳಿಯನ್ನು ಸ್ಥಾಪಿಸಿ ತುಮಕೂರಿನ ಆರ್.ಎಸ್. ಆರಾಧ್ಯರವರನ್ನು ಅಧ್ಯಕ್ಷರನ್ನಾಗಿ ನೇಮಿಸಿತು. ಈ ಸಂದರ್ಭದಲ್ಲಿ ಇವರು ಸಣ್ಣ ಕೈಗಾರಿಕೆಗಳನ್ನು, ಗೃಹೋದ್ಯಮಗಳನ್ನು ಪ್ರಾರಂಭಿಸಲು ಕರ್ನಾಟಕದಾದ್ಯಂತ ಸಂಚರಿಸಿದರು. ಇದರಿಂದಾಗಿ ಸಣ್ಣ ಉದ್ಯಮಗಳು ತಲೆ ಎತ್ತಿದವು. ಆರಾಧ್ಯರು ತೆಂಗಿನಮೊಟ್ಟೆಯಿಂದ ನಾರು ಬೇರ್ಪಡಿಸುವ ಯಂತ್ರವನ್ನು ನಿರ್ಮಿಸಿದರು. ಇದನ್ನು ಸಾರ್ವಜನಿಕವಾಗಿ ಪ್ರದರ್ಶಿಸಿದರು. ಈ ಯಂತ್ರವನ್ನು ರಿಯಾಯಿತಿ ದರದಲ್ಲಿ ನಾರಿನ ಉದ್ಯಮಗಳಿಗೆ ಮಾರಾಟ ಮಾಡಲಾಯಿತು. ನಾರಿನ ಕೈಗಾರಿಕೋದ್ಯಮವು ಶೀಘ್ರದಲ್ಲಿಯೇ ದಿನೇ ದಿನೇ ಪ್ರಬುದ್ಧಮಾನಕ್ಕೆ ಬರಲು ಆರಂಭಿಸಿತು. ತುಮಕೂರು, ಹಾಸನ, ಮಂಗಳೂರು ಜಿಲ್ಲೆಗಳು ನಾರಿನ ಉದ್ಯಮದ ಕೇಂದ್ರಗಳಾದವು. ಅದೇ ರೀತಿ ಗುಬ್ಬಿ, ತಿಪಟೂರು, ತುರುವೇಕೆರೆ, ಚಿಕ್ಕನಾಯಕನಹಳ್ಳಿಗಳು ತೆಂಗಿನ ನಾರಿನ ಉದ್ಯಮದ ತುಮಕೂರು ಜಿಲ್ಲಾ ಕೇಂದ್ರಗಳಾಗಿವೆ. ಇದರಿಂದಾಗಿ ಹಗ್ಗ ಹುರಿ, ನೆಲಚಾಪೆ, ಕಾಲು ಒರೆಸುವ ಚಾಪೆ ಮುಂತಾದ ವಸ್ತುಗಳು ನಾನಾ ವರ್ಣದಲ್ಲಿ ತಯಾರಾಗುತ್ತಿದ್ದವು. ಇವು ಎಲ್ಲಾ ವರ್ಗದ ಜನರನ್ನು ಆಕರ್ಷಿಸಿವೆ. ಇವರು ತೆಂಗಿನ ನಾರಿನ ಉದ್ಯಮದ ಸಮಿತಿಯ ಅಧ್ಯಕ್ಷರಾಗಿಯೂ ೪ ವರ್ಷಗಳ ಕಾಲ ಸೇವೆ ಸಲ್ಲಿಸಿದ್ದರು. ಹಾಗೆಯೇ ಅಖಿಲ ಭಾರತ ಸಣ್ಣ ಕೈಗಾರಿಕೆಗಳ ಸಂಘದ ಉಪಾಧ್ಯಕ್ಷರಾಗಿಯೂ, ರಾಜ್ಯದ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಯ ಸದಸ್ಯರಾಗಿಯೂ ದುಡಿದಿದ್ದರು. ೧೯೬೬ರಲ್ಲಿ ರಾಜ್ಯ ಮಟ್ಟದ ಜಿಲ್ಲಾ ಸಣ್ಣ ಕೈಗಾರಿಕೆಗಳ ಸಂಘಗಳ ಪ್ರಥಮ ಅಧಿವೇಶನವು ಮೈಸೂರಿನಲ್ಲಿ ಯಶಸ್ವಿಯಾಗಿ ನಡೆಯಲು ಸಣ್ಣ ಉದ್ಯಮಗಳ ಮಹಂತರಾದ ಆರಾಧ್ಯರವರು ಕಾರಣರಾಗಿದ್ದರು.[೭೪]

೧೯೭೪ರಲ್ಲಿ ಕರ್ನಾಟಕದ ಗ್ರಾಮ ಭಾರತೀ ಒಕ್ಕೂಟವು, ಖಾದಿ ಮತ್ತು ಗ್ರಾಮೋದ್ಯೋಗ ಸಹಕಾರ ಮಾರಾಟ ಒಕ್ಕೂಟ ನಿಯಮಿತವೂ ಪ್ರಾರಂಭವಾಯಿತು. ಈ ಸಂಯುಕ್ತ ಸಂಘವು ಉತ್ಪಾದನೆಯನ್ನು ವ್ಯವಸ್ಥೆಗೊಳಿಸುವ, ನೇರವಾಗಿ ಅಥವಾ ಅಂಗ ಸಂಸ್ಥೆಗಳ ಮೂಲಕ ಖಾದಿ

ಮತ್ತು ಗ್ರಾಮೋದ್ಯೋಗ ನಿಯೋಗದ ಉತ್ಪನ್ನಗಳ ಸಂಸ್ಕರಣ ಮತ್ತು ಮಾರಾಟದ ಉದ್ದೇಶಗಳನ್ನು ಹೊಂದಿದೆ. ಈ ಸಂಯುಕ್ತ ಸಂಘವು ಬೆಂಗಳೂರು, ಕಡೂರು, ಮೈಸೂರು, ತಿಪಟೂರು, ಕೃಷ್ಣರಾಜನಗರ, ಮಂಡ್ಯ, ಕೋಲಾರ, ಗದಗ, ಈ ಸ್ಥಳಗಳಲ್ಲಿ ೯ ಭಂಡಾರಗಳನ್ನು ಹೊಂದಿದೆ.[೭೫] ಅನಂತರ ೧೯೭೮ ಮೇ ೧ ರಂದು ರಾಷ್ಟ್ರದಾದ್ಯಂತ ಜಿಲ್ಲಾ ವಾಣಿಜ್ಯ ಮತ್ತು ಸಣ್ಣ ಕೈಗಾರಿಕಾ ಇಲಾಖಾ ಕೇಂದ್ರಗಳು ಅಸ್ತಿತ್ವಕ್ಕೆ ಬಂದವು. ಅದರಂತೆ ರಾಜ್ಯದಲ್ಲಿ ತುಮಕೂರು ಜಿಲ್ಲೆ ಸೇರಿದಂತೆ ಒಟ್ಟು ೭ ಜಿಲ್ಲೆಗಳಲ್ಲಿ ಈ ಕೇಂದ್ರಗಳನ್ನು ಪ್ರಾರಂಭಿಸಲಾಗಿದೆ. ಪ್ರಪ್ರಥಮವಾಗಿ ಜಿಲ್ಲೆಯಲ್ಲಿ ಸಿಗಬಹುದಾದ ಕಚ್ಚಾ ಮಾಲು ಹಾಗು ಸ್ಥಳೀಯ ಪರಿಸ್ಥಿತಿಗಳಿಗನುಗುಣವಾಗಿ ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಲು ಜನರನ್ನು ಪ್ರೇರೇಪಿಸುವ ಚಟುವಟಿಕೆಗಳನ್ನು ಈ ಕೇಂದ್ರದ ಮೂಲಕ ರೂಪಿಸಲಾಯಿತು. ತುಮಕೂರು, ಗುಬ್ಬಿಯಲ್ಲಿ ಕುಶಲಕರ್ಮಿ ಶಿಕ್ಷಣ ಕೇಂದ್ರಗಳನ್ನು ಸ್ಥಾಪಿಸಿ, ಮರಗೆಲಸ, ಕಮ್ಮಾರಿಕೆ, ಕೈಮಗ್ಗ, ಹೊಲಿಗೆ, ಚಾಪೆಹೆಣೆಯುವಿಕೆ, ನೇಯ್ಗೆ, ತೆಂಗಿನನಾರಿನ ಉತ್ಪಾದನಾ ವಿಭಾಗದಲ್ಲಿ ತರಬೇತಿ ನೀಡಲು ಅನುಕೂಲ ಕಲ್ಪಿಸಲಾಯಿತು. ಈ ಕೇಂದ್ರಗಳಲ್ಲಿ ಗುಡಿ ಕೈಗಾರಿಕಾ ತರಬೇತಿ ಪಡೆಯುವವರಿಗೆ ಮಾಹೇಯಾನ ೪೦ ರೂಪಾಯಿಗಳ ಶಿಕ್ಷಣ ವೇತನ ಕೊಡಲಾಗುತ್ತದೆ. ಇದು ಅಲ್ಲದೇ ಈ ಇಲಾಖೆಯವರು ಗ್ರಾಮಾಂತರ ಕುಶಲ ಕರ್ಮಿಗಳಿಗೆ ತೆಂಗಿನ ನಾರು ಉತ್ಪಾದನೆಯಲ್ಲಿ ತರಬೇತಿ ಕೊಡಲಾಗುತ್ತದೆ. ಅಲ್ಲದೆ ೨,೫೦೦ ರೂಪಾಯಿಗಳ ಮೊತ್ತದ ಸುಧಾರಿತ ಮಡಕೆಗಳ ತಯಾರಿಕಾ ಚಕ್ರಗಳನ್ನು ಕುಂಬಾರರಿಗೆ ಒದಗಿಸಲಾಯಿತು. ೧೫,೦೦೦ ರೂಪಾಯಿ ಮೊತ್ತದ ಸಲಕರಣೆ ಮತ್ತು ಸಾಧನ ಸಾಮಗ್ರಿಗಳನ್ನು ೬೦ ಚಮ್ಮಾರರುಗಳಿಗೆ ಒದಗಿಸಲಾಯಿತು. ತೀವ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮದ ಅಂಗವಾಗಿ ಅರಣ್ಯ ಇಲಾಖೆಗೆ ಬೇಕಾದ ೨೮,೮೩೩ ರೂಪಾಯಿಗಳ ಮೊತ್ತದ ೧,೫,೩೨೧ ಮಣ್ಣಿನ ಕುಂಡಗಳನ್ನು ಗ್ರಾಮಾಂತರ ಪ್ರದೇಶಗಳ ಕುಂಬಾರರಿಂದ ಕೊಂಡು ಕೊಳ್ಳಲಾಯಿತು. ಇದರಿಂದಾಗಿ ಸುಮಾರು ೭೫ ಬಡ ಕುಂಬಾರರ ಸಂಸಾರಗಳಿಗೆ ಸಾಕಷ್ಟು ಕೆಲಸ ದೊರೆತು ಅವರ ಜೀವನದ ಸ್ಥಿತಿ ಉತ್ತಮಗೊಳ್ಳಲು ಸಾಧ್ಯವಾಯಿತು. ತುಮಕೂರು ಜಿಲ್ಲೆಯ ಸಣ್ಣ ಕೈಗಾರಿಕೆಯ ಉದ್ದಿಮೆಗಳಿಗೆ, ಕಮ್ಮಾರಿಕೆಯ ಕೆಲಸಗಾರರಿಗೆ ಹೆಚ್ಚಿನ ಮಾರುಕಟ್ಟೆಯ ಅವಕಾಶವನ್ನು ಒದಗಿಸುವ ಉದ್ದೇಶದಿಂದ ಪಿಕಾಸಿ, ಗುದ್ದಲಿ, ವಗೈರೆ ಸಾಮಾನುಗಳನ್ನು ಜಿಲ್ಲಾ ವಾಣಿಜ್ಯ ಮತ್ತು ಕೈಗಾರಿಕೆಯ ಇಲಾಖೆಯವರು ೩೫,೦೦೦ ರೂಪಾಯಿಗಳಿಗೆ ಕಮ್ಮಾರರಿಂದ ಖರೀದಿಸುವ ಮೂಲಕ ಅನೇಕ ಗೃಹ ಕೈಗಾರಿಕಾ ಕಸುಬುದಾರರಿಗೆ ಹೆಚ್ಚಿನ ಗ್ರಾಮೋದ್ಯೋಗಾವಕಾಶವನ್ನು ಒದಗಿಸಲಾಯಿತು.[೭೬]

ತುಮಕೂರು ಜಿಲ್ಲೆಯ ಮಧುಗಿರಿಯಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿ ವಿವಿಧ ಕಸಬುಗಳಲ್ಲಿ ಗಂಡು ಮಕ್ಕಳಿಗೆ ತರಬೇತಿ ನೀಡುವ ಉದ್ದೇಶದಿಂದ ಸರ್ಕಾರವು “ಅರ್ಟಿಸಾನ್ ತರಬೇತಿ

ಕೇಂದ್ರ" ವೊಂದನ್ನು ಸ್ಥಾಪಿಸಿದೆ. ಅಲ್ಲಿ ತೆಂಗಿನ ನಾರು ತಯಾರಿಕೆ, ಬಡಗಿ, ಚರ್ಮದ ಕೆಲಸಗಳಲ್ಲಿ ಶಿಕ್ಷಣ ನೀಡಲಾಗುತ್ತದೆ. ಇದರ ಶಾಖೆಯೊಂದು ತುಮಕೂರಿನ ಅಶೋಕ ರಸ್ತೆಯಲ್ಲಿದೆ. ಇಲ್ಲಿ ಮಹಿಳೆಯರಿಗೆ ಚಾಪೆ ಹಣೆಯುವುದು, ಬೊಂಬೆ ತಯಾರಿಕೆ, ಹೊಲಿಗೆ ಶಿಕ್ಷಣ, ಪ್ರಿಂಟಿಂಗ್, ಬುಕ್ ಬೈಂಡಿಂಗ್, ಕಂಪೋಸಿಂಗ್, ಕಸೂತಿ ಮುಂತಾದ ಅಲ್ಪಾವಧಿ ಕೆಲಸಗಳಲ್ಲಿ ಶಿಕ್ಷಣವನ್ನು ನೀಡಲಾಗುತ್ತದೆ. ತರಬೇತಿ ಅವಧಿಯಲ್ಲಿ ಸರ್ಕಾರದ ವತಿಯಿಂದ ಶಿಷ್ಯ ವೇತನವನ್ನು ನೀಡಲಾಗುತ್ತದೆ.[೭೭]

ಕರ್ನಾಟಕ ರಾಜ್ಯ ಕೈಮಗ್ಗಗಳ ಅಭಿವೃದ್ಧಿ ಮಂಡಳಿಯ ಸಹಕಾರದಿಂದ ತುಮಕೂರು ಜಿಲ್ಲೆಯಲ್ಲಿ ಉಣ್ಣೆ ಕೈಮಗ್ಗಗಳ ಅಭಿವೃದ್ಧಿಯನ್ನು ಹಮ್ಮಿಕೊಳ್ಳಲಾಯಿತು. ೧೩,೦೦೦ ರೂ. ಗಳ ವೆಚ್ಚದ ಎರಡು ಉಣ್ಣೆ ಹಂಜ ಮಾಡುವ ಕಾರ್ಡಿಂಗ್ ಯಂತ್ರಗಳನ್ನು ಜಿಲ್ಲೆಯ ಗಂಗನ ಘಟ್ಟ ಮತ್ತು ಚಿಕ್ಕನಾಯಕನ ಹಳ್ಳಿಯ ಉಣ್ಣೆ ನೇಕಾರರ ಸಹಕಾರ ಸಂಘಗಳಿಗೆ ಒದಗಿಸಲಾಗಿದೆ. ಆರ್ಥಿಕವಾಗಿ ಹಿಂದುಳಿದ ೫೦ ಉಣ್ಣೆ ನೇಕಾರರಿಗೆ ೪,೧೦೦ ರೂಪಾಯಿಗಳ ಬೆಲೆಯ ಸುಧಾರಿತ ೫೦ ಉಣ್ಣೆ ನೂಲುವ ಚರಕಗಳನ್ನು ಒದಗಿಸಲಾಗಿದೆ.[೭೮] ಜಿಲ್ಲೆಯಲ್ಲಿ ೩,೦೦೦ ಕಂಬಳಿಗಳು ಮಾತ್ರ ಸಹಕಾರಿ ಕ್ಷೇತ್ರಕ್ಕೊಳಪಟ್ಟವೆ. ಜಿಲ್ಲೆಯ ೧೮ ಸಂಘಗಳ ಪೈಕಿ ಪಾವಗಡ, ವೆಂಕಟಾಪುರ, ವೈ.ಎನ್. ಹೊಸಕೋಟೆ, ಶಿರಾ, ಬರಗೂರು, ಕಾಮಗೊಂಡನಹಳ್ಳಿ, ಬೇವಿನಹಳ್ಳಿಗಳಲ್ಲಿರುವ ಒಟ್ಟು ೭ ಸಂಘಗಳು ಮಾತ್ರ ಕೆಲಸ ನಿರ್ವಹಿಸುತ್ತಿವೆ. ಇವುಗಳ ಪೈಕಿ ವೆಂಕಟಾಪುರ, ವೈ.ಎನ್. ಹೊಸಕೋಟೆ, ಕಾಮಗೊಂಡನಹಳ್ಳಿ ಸಂಘಗಳು ೧೯೭೯–೮೦ ರಲ್ಲಿ ಸುಮಾರು ೨೮.೫ ಲಕ್ಷ ರೂಪಾಯಿಗಳ ಕಂಬಳಿಗಳನ್ನು ರಫ್ತು ಮಾಡಿವೆ. ಈ ಉದ್ಯಮದ ಅಭಿವೃದ್ಧಿಗಾಗಿ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಯವರು ೧೪ ಸಂಘಗಳಿಗೆ ಬಡ್ಡಿ ರಹಿತ ಸಾಲವಾಗಿ ೧೮.೫೭,೬೬ ರೂಪಾಯಿಗಳನ್ನು ನೀಡಿದ್ದರು. ಇದೇ ರೀತಿಯಾಗಿ ಜಿಲ್ಲೆಯಲ್ಲಿ ಉಣ್ಣೆ ಉದ್ಯಮದ ಅಭಿವೃದ್ಧಿಗಾಗಿ ರಾಜ್ಯ ಉಣ್ಣೆ ನೇಕಾರರ ಕೇಂದ್ರ ಸಂಘವೂ ಸಹ ಲಕ್ಷಾಂತರ ರೂಪಾಯಿಗಳನ್ನು ಬಿಡುಗಡೆಗೊಳಿಸಿದೆ. ಸ್ಥಳೀಯವಾಗಿ ದೊರೆಯುವ ಉಣ್ಣೆಯಿಂದ ಜಾಯಿಂಟ್, ನಾನ್ ಜಾಯಿಂಟ್, ನೀಲಾ, ಶಿರಾ ಗರಿಗಪ್ಪ ಸ್ಲೀಪಿಂಗ್ ಬ್ಲಾಂಕೆಟ್ ಮತ್ತಿತರ ಗಂಜಿ ಕೇಂದ್ರಗಳು ಸುಮಾರು ಒಂದೂವರೆ ಕೋಟಿ ರೂ. ಗಳ ಬೆಲೆ ಬಾಳುವ ಉಣ್ಣೆ ಕಂಬಳಿಗಳನ್ನು ಕಾಫೀ, ಟೀ, ರಬ್ಬರ್ ಎಸ್ಟೇಟುಗಳಲ್ಲಿ ಕೆಲಸ ಮಾಡುವವರಿಗಾಗಿ ರಫ್ತು ಮಾಡಲಾಗಿದೆ. ಆದರೆ ಬರಿಯ ಗಂಜಿ ಕಂಬಳಿಗಳ ತಯಾರಿಕೆಯಿಂದಲೇ ಉಣ್ಣೆ ನೇಕಾರರ ಸ್ಥಿತಿ ಉತ್ತಮವಾಗದು. ಹೊರಗಿನ ಒಳ್ಳೆಯ ಉಣ್ಣೆ ತರಿಸಿ ಉತ್ತಮ ಹೊದಿಕೆ ಕಂಬಳಿಗಳನ್ನು ತಯಾರಿಸುವುದಕ್ಕಾಗಿ ಖಾದಿ ಮತ್ತು ಗ್ರಾಮೋದ್ಯೋಗ ಆಯೋಗದ ನಿರ್ದೇಶನದಲ್ಲಿ ನಯವಾದ

ಕಂಬಳಿಗಳನ್ನು ತಯಾರು ಮಾಡುವ ತರಬೇತಿ ಕೇಂದ್ರವೊಂದನ್ನು ೧೯೮೦–೮೧ರಲ್ಲಿ ಜಿಲ್ಲೆಯ ಗುಬ್ಬಿಯಲ್ಲಿ ಸ್ಥಾಪಿಸಲಾಗಿದೆ.[೫೯]

ಜಿಲ್ಲೆಯಲ್ಲಿ ಬಡ ಉಣ್ಣೆ ನೇಕಾರರಿಗೆ ಕೆಲಸ ಮಾಡಲು ಜಾಗವಿಲ್ಲದೇ ಕಂಬಳಿ ಉತ್ಪಾದನೆಯೂ ಕುಂಠಿತವಾಗಿ ಅವರ ಆರ್ಥಿಕ ಸ್ಥಿತಿ ಕಷ್ಟಕರವಾಗಿತ್ತು. ಇದನ್ನು ಮನಗಂಡ ಜಿಲ್ಲಾ ವಾಣಿಜ್ಯ ಮತ್ತು ಸಣ್ಣ ಕೈಗಾರಿಕಾ ಇಲಾಖೆಯವರ ವತಿಯಿಂದ ಶಿರಾ ತಾಲ್ಲೂಕಿನ ಯರವರಹಳ್ಳಿಯಲ್ಲಿ ೨೧ ಜನ ಉಣ್ಣೆ ನೇಕಾರರ ಉದ್ಯಮಗಳಿಗೆ ಹೊಸದಾಗಿ ತಲಾ ೩ ಸಾವಿರ ರೂ. ವೆಚ್ಚದಲ್ಲಿ ಹಲವಾರು ಹೊಸ ಉಣ್ಣೆ ನೇಕಾರರ ಕೈಮಗ್ಗಗಳ ಮಳಿಗೆಗಳನ್ನು ಕಟ್ಟಿಸಿ ಕೊಡಲಾಗಿದೆ. ಇದರಿಂದಾಗಿ ಜಿಲ್ಲೆಯಲ್ಲಿ ಉಣ್ಣೆ ಕಂಬಳಿ ನೇಕಾರರು ತಮ್ಮ ಗ್ರಾಮೋದ್ಯೋಗದ ಉತ್ಪಾದನೆಯನ್ನು ಅಧಿಕಗೊಳಿಸಿಕೊಂಡು ತಮ್ಮ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಿಕೊಳ್ಳಲು ಸಾಧ್ಯವಾಯಿತು.[೬೦] ಚಿಕ್ಕನಾಯಕನಹಳ್ಳಿ ಮತ್ತು ಯಳನಾಡುಗಳಲ್ಲಿರುವ ಉಣ್ಣೆ ನೂಲುವ ಪರಿಷ್ಕೃತ ಸಹಾಯಕ ಸಹಕಾರಿ ಸಂಘಗಳಲ್ಲಿ ಒಟ್ಟು ೫೪೫ ಜನ ಸದಸ್ಯರಿದ್ದಾರೆ. ೬೫೦ ಉಣ್ಣೆ ನೇಕಾರರ ಕೈಮಗ್ಗಗಳಿವೆ. ಉತ್ತಮ ಮಟ್ಟದ ಉಜ್ಜು ಕಂಬಳಿಗಳು ಈ ಉದ್ಯಮದಲ್ಲಿ ಹೆಸರುವಾಸಿಯಾಗಿದ್ದು, ಕುರಿ ಸಾಕಾಣಿಕೆಗೆ ಈ ಪ್ರದೇಶದಲ್ಲಿ ಹೆಚ್ಚು ಪ್ರೋತ್ಸಾಹ ದೊರಕಿದುದ್ದರಿಂದಾಗಿ ಈ ಉದ್ಯಮವು ಈ ಭಾಗದಲ್ಲಿ ಚೆನ್ನಾಗಿ ಪ್ರಗತಿ ಹೊಂದಿದೆ. ಹತ್ತಿ ನೇಯುವ ಕೈಮಗ್ಗದ ಉದ್ಯಮವು ಈ ತಾಲ್ಲೂಕಿನ ಪ್ರಮುಖ ಕಸಬು ಆಗಿದೆ. ಹತ್ತಿ ನೇಕಾರರ ಸಹಕಾರ ಸಂಘವು ಚಿಕ್ಕನಾಯಕನಹಳ್ಳಿಯಲ್ಲಿದೆ. ಅದರಲ್ಲಿ ೩೧೪ ಜನ ಸದಸ್ಯರಿದ್ದಾರೆ. ಅಷ್ಟೇ ಸಂಖ್ಯೆಯ ಹತ್ತಿ ಕೈಮಗ್ಗಗಳು ಈ ತಾಲ್ಲೂಕಿನಲ್ಲಿವೆ. ಇವು ಈ ಉದ್ಯಮದ ಪ್ರಗತಿಗೆ ಕಾರಣವಾಗಿವೆ. ರೇಷ್ಮೆ ನೇಯ್ಗೆಯೂ ಜಿಲ್ಲೆಯ ಪ್ರಮುಖ ಗ್ರಾಮೋದ್ಯೋಗವಾಗಿದೆ. ಚಿಕ್ಕನಾಯಕನಹಳ್ಳಿ ಮತ್ತು ಕಾಡೇನಹಳ್ಳಿಗಳಲ್ಲಿ ರೇಷ್ಮೆ ನೂಲುವ ಉತ್ಪಾದಕರ ಸಹಕಾರಿ ಸಂಘಗಳಿವೆ. ಇವುಗಳ ಮೂಲಕ ೧೮೪ ಸದಸ್ಯರು ೨೬೨ ರೇಷ್ಮೆ ನೇಯುವ ಕೈಮಗ್ಗಗಳಿಂದ ರೇಷ್ಮೆ ಬಟ್ಟೆಯನ್ನು ತಯಾರಿಸುತ್ತಾರೆ. ಕಚ್ಚಾ ವಸ್ತುಗಳನ್ನು ಜಿಲ್ಲಾ ಕೇಂದ್ರವಾದ ತುಮಕೂರಿನಿಂದ ತರಿಸಿಕೊಳ್ಳುತ್ತಾರೆ.[೬೧]

ಕರ್ನಾಟಕ ಕೈಮಗ್ಗಗಳ ಅಭಿವೃದ್ಧಿ ಮಂಡಳಿಯ ಸಹಕಾರದಿಂದ ಕೈಮಗ್ಗಗಳ ಅಭಿವೃದ್ಧಿ ಕಾರ್ಯಕ್ರಮಗಳನ್ನು ತುಮಕೂರು ಜಿಲ್ಲೆಯಲ್ಲಿ ಹಮ್ಮಿಕೊಳ್ಳಲಾಯಿತು. ಅದರಂತೆ ಸುಮಾರು ೧೫೦ ಕೈಮಗ್ಗಗಳನ್ನು ಗುಬ್ಬಿ ತಾಲ್ಲೂಕಿನ ಕಲ್ಲೂರು, ಚೇಳೂರು, ತಿಪಟೂರುಗಳಲ್ಲಿ ಪ್ರಾರಂಭಿಸಲಾಯಿತು. ಇದಲ್ಲದೇ ರೇಷ್ಮೆ ನೇಯ್ಗೆಯ ಕೈಗಾರಿಕಾ ಉತ್ಪಾದನೆಯ ಕುಶಲತೆಯನ್ನು ಹೆಚ್ಚಿಸಲು ಜಿಲ್ಲೆಯ ಕಲ್ಲೂರು, ಚೇಳೂರುಗಳಲ್ಲಿ ೬೫ ನೇಕಾರರಿಗೆ ಸುಧಾರಿತ ಕೈಮಗ್ಗಗಳನ್ನು ಒದಗಿಸಲಾಯಿತು.[೬೨]

ತೆಂಗುನಾರು ತಯಾರಿಕೆಯೂ ಜಿಲ್ಲೆಯ ಪ್ರಮುಖ ಗ್ರಾಮೋದ್ಯೋಗವಾಗಿದೆ. ತೆಂಗಿನ ಬೆಳೆ ಅನೇಕ ಕೈಗಾರಿಕೆಗಳಿಗೆ ಕಚ್ಚಾ ವಸ್ತುವನ್ನು ಒದಗಿಸುತ್ತದೆ. ತೆಂಗಿನಕಾಯಿಯ ಸಿಪ್ಪೆ ಹಗ್ಗ ಹುರಿ ತಯಾರಿಕೆಗೆ ಹೆಚ್ಚು ಉಪಯುಕ್ತವಾಗಿದೆ. ಈ ಉದ್ಯಮಕ್ಕೆ ಸಂಬಂಧಿಸಿದ ಸಹಕಾರ ಸಂಘವು ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಹುಳಿಯಾರಿನಲ್ಲಿದೆ. ಇದರಲ್ಲಿ ೩೦೦ ಸದಸ್ಯರಿದ್ದಾರೆ. ಇವರು ತಾಲ್ಲೂಕಿನಲ್ಲಿ ತೆಂಗು ನಾರಿನ ಗ್ರಾಮೋದ್ಯೋಗದ ಪ್ರಗತಿಗೆ ದುಡಿಯುತ್ತಿದ್ದರು.[೯೩] ಈ ಗ್ರಾಮೋದ್ಯೋಗದ ಅಭಿವೃದ್ಧಿಗೆ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ ವತಿಯಿಂದ ೧೯೭೯–೮೦ರಲ್ಲಿ ತೆಂಗಿನ ನಾರು ಉತ್ಪನ್ನ ಮಾರಾಟಕ್ಕಾಗಿ ನಾರು ಮಾರಾಟ ಸಂಸ್ಥೆಗಳನ್ನು ಬಲಪಡಿಸುವ ಕಾರ್ಯಕ್ರಮಗಳನ್ನು ಜಿಲ್ಲೆಯಲ್ಲಿ ಹಮ್ಮಿಕೊಳ್ಳಲಾಯಿತು. ಈ ವರ್ಷದಲ್ಲಿ ಕಂಚಿನಗಟ್ಟ, ಗಂಡಿಸಿ, ತುಮಕೂರು ಬಾಣಾವರದಲ್ಲಿರುವ ೩ ನಾರು ತೆಗೆಯುವ ತಾಂತ್ರಿಕ ಯಂತ್ರ ಚಾಲಿತ ಘಟಕಗಳನ್ನು ಬದಲಾಯಿಸುವುದು, ನಾರು ಅಭಿವೃದ್ಧಿಯ ಸಂಸ್ಥೆಯ ಸ್ಥಾಪನೆ, ತೆಂಗು ಬೆಳೆಯುವ ಪ್ರದೇಶಗಳಲ್ಲಿ ತರಬೇತಿ ಕೇಂದ್ರಗಳು, ತೆಂಗಿನ ನಾರು ಸಹಕಾರ ಸಂಘಗಳಿಗೆ ನೆರವು ಇತ್ಯಾದಿಗಳನ್ನು ಉದ್ದೇಶಿಸಲಾಯಿತು. ಈ ಕಾರಣಕ್ಕಾಗಿ ೧೪,೦೦೦ ಲಕ್ಷ ರೂಪಾಯಿಗಳನ್ನು ಮಂಜೂರು ಮಾಡಲಾಯಿತು.[೯೪]

ಗಾಂಧೀಜಿಯ ಅನುಯಾಯಿಯಾದ ಕೆ.ಎಸ್.ರಾಜಪ್ಪನವರು ರಾಷ್ಟ್ರದ ಅಭಿವೃದ್ಧಿಗೆ ಸೂಚಕವಾದ ಸಣ್ಣ ಕೈಗಾರಿಕೆಗಳನ್ನು ತನ್ನ ಹುಟ್ಟೂರಾದ ಕ್ಯಾತ್ಸಂದ್ರದಲ್ಲಿ ಪ್ರಾರಂಭಿಸಿ, ಗ್ರಾಮೀಣಾಭಿವೃದ್ಧಿಗೆ ಆದ್ಯತೆ ಕೊಡಲು ಎಚ್.ಎಂ.ಟಿ. ಗಡಿಯಾರಗಳ ಬಿಡಿಭಾಗಗಳ ಕೆಲಸವನ್ನು ಉದ್ಯಮವಾಗಿ ಪ್ರಾರಂಭಿಸಲು ನ್ಯಾಶನಲ್ ವಾಚ್ ಕೇಸ್ ಇಂಡಸ್ಟ್ರೀಯನ್ನು ತಾಂತ್ರಿಕ ತಜ್ಞತೆಯನ್ನು ಪಡೆದಿದ್ದ ಮಗ ಕೆ.ಆರ್.ಮಹದೇವಸ್ವಾಮಿ ಸುದರ್ಶನವರ ಸಹಭಾಗಿತ್ವದಿಂದ ೧೯೮೪ ರಲ್ಲಿ ಈ ಸಣ್ಣ ಕೈಗಾರಿಕೆಯನ್ನು ಸ್ಥಾಪಿಸಿ ಸುಮಾರು ೬೦ ಮಂದಿ ವಿದ್ಯಾವಂತ ನಿರುದ್ಯೋಗಿಗಳಿಗೆ ಉದ್ಯೋಗಾವಕಾಶವನ್ನು ಕಲ್ಪಿಸಿಕೊಟ್ಟರು. ಇವರು ಈ ಕೈಗಾರಿಕೆಯಲ್ಲಿ ಮೀಸಲು ನೀತಿಯನ್ನು ಅನುಸರಿಸಿ ನಿಮ್ನವರ್ಗದ ಹೆಣ್ಣು ಗಂಡು ೧೦ ಜನರಿಗೆ ಉದ್ಯೋಗ ಕಲ್ಪಿಸಿಕೊಟ್ಟರು. ಈ ಘಟಕದಲ್ಲಿ ತಯಾರಾದ ಬಿಡಿ ಭಾಗಗಳನ್ನು ತುಮಕೂರಿನ ಎಚ್.ಎಂ.ಟಿ. ಕಾರ್ಖಾನೆಗೆ, ಬೆಂಗಳೂರಿಗೆ, ರಾಣಿಭಾಗ್ ಮತ್ತು ಶ್ರೀನಗರಗಳಿಗೆ ರಫ್ತು ಮಾಡಲಾಗುತ್ತಿದೆ.[೮೫] ಈ ರೀತಿಯಾಗಿ ತುಮಕೂರು ಜಿಲ್ಲೆಯಲ್ಲಿ ಗಾಂಧೀಜಿಯವರ ಗ್ರಾಮೋದ್ಯೋಗ ಕಾರ್ಯಕ್ರಮವು ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಮತ್ತು ಸ್ವಾತಂತ್ರ್ಯ ಪಡೆದ ನಂತರವು ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಸಾಕಷ್ಟು ಬದಲಾವಣೆಗಳನ್ನು ತಂದಿತು.

ಅಡಿಟಿಪ್ಪಣಿಗಳು

೧. ಮಜುಂದಾರ್ ಆರ್.ಸಿ., ನಾರಾಯಣಸ್ವಾಮಿ ಕೆ.ಎಸ್.(ಅನು), ಸ್ವಾತಂತ್ರ್ಯ ಸಂಗ್ರಾಮ, ಭಾಗ ೧, ಸಂಪುಟ ೨೩, ಭಾರತೀಯ ವಿದ್ಯಾಭವನ, ಬೆಂಗಳೂರು, ೧೯೯೮, ಪು.೩೫

೨. ಚಂದ್ರಶೇಖರ್ ಎಸ್.(ಸಂ), ಕರ್ನಾಟಕ ಚರಿತ್ರೆ ಸಂ.೭ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೭, ಪು.೪೧

೩. ನಿರಂಜನ, ಕಿರಿಯರ ವಿಶ್ವಕೋಶ ಸಂ.೭, ಕರ್ನಾಟಕ ಸಹಕಾರಿ ಪ್ರಕಾಶನ, ಬೆಂಗಳೂರು, ೧೯೯೪, ಪು.೪೬೭

೪. ಶ್ರೀನಿವಾಸಮೂರ್ತಿ ಹೆಚ್.ವಿ., ರಾಮಕೃಷ್ಣನ್ ಆರ್., ಸಮಗ್ರ ಕರ್ನಾಟಕ ಚರಿತ್ರೆ, ಓರಿಯೆಂಟ್ ಲಾಂಗ್‌ಮನ್ ಲಿಮಿಟೆಡ್, ಬೆಂಗಳೂರು, ೧೯೯೫, ಪು.೪೨೯

೫. ಬಿಪನ್ ಚಂದ್ರ, ಅಮಲೇಶ್ ತ್ರಿಪಾಟಿ, ಬರುನ್ ಡೇ, ಸ್ವಾತಂತ್ರ್ಯದ ಹೋರಾಟ, ನ್ಯಾಷನಲ್ ಬುಕ್ ಟ್ರಸ್ಟ್, ಹೊಸದೆಹಲಿ, ೧೯೭೪, ಪು. ೮೩–೮೭

೬. ಬಿಪನ್ ಚಂದ್ರ, ಅಮಲೇಶ್ ತ್ರಿಪಾಟಿ, ಬುರುನ್ ಡೇ, ಫ್ರೀಡಮ್ ಸ್ಟ್ರಗಲ್, ನ್ಯಾಷನಲ್ ಬುಕ್ ಟ್ರಸ್ಟ್, ಹೊಸ ದೆಹಲಿ ೧೯೭೪, ಪು.೯೬

೭. ತೆಂಡೂಲ್ಕರ್ ಡಿ.ಜಿ., ಮಹಾತ್ಮ, ಸಂ.೩, ಗಾಂಧೀಭವನ, ಮಾನಸಗಂಗೋತ್ರಿ, ಮೈಸೂರು, ೧೯೭೬, ಪು.೪೨೭

೮. ನಾರಾಯಣಶಾಸ್ತ್ರಿ, ರಾಷ್ಟ್ರೀಯ ಮಹಾಪುರುಷರು, ಸಮಾಜ ಪುಸ್ತಕಾಲಯ, ಧಾರವಾಡ, ೧೯೯೮, ಪು.೪೩

೯. ಚಂದ್ರಶೇಖರ್ ಎಸ್., ದಕ್ಷಿಣ ಭಾರತ ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು.೯೧

೧೦. ನಾರಾಯಣರಾವ್ ವಿ.ಎಸ್., ಕರ್ನಾಟಕದಲ್ಲಿ ಗಾಂಧೀಜಿ ಪ್ರಭಾವ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ೧೯೮೦, ಪು.೪೫

೧೧. ಅದೇ ಪು.೧೪೧

೧೨. ಸೂರ್ಯನಾಥ ಕಾಮತ್(ಸಂ), ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಸಂ.೨, ಕರ್ನಾಟಕ ರಾಜ್ಯ ಸರ್ಕಾರ, ರಾಜಾಜಿನಗರ, ಬೆಂಗಳೂರು ೧೯೮೫, ಪು.೭೪

೧೩. ಸಿದ್ದವ್ವನಹಳ್ಳಿ ಕೃಷ್ಣಶರ್ಮ(ಸಂ), ಗಾಂಧಿ ಮತ್ತು ಕರ್ನಾಟಕ, ಗಾಂಧೀ ಸ್ಮಾರಕ ನಿಧಿ, ಬೆಂಗಳೂರು, ೧೯೬೯, ಪು.೫೫

೧೪. ಅದೇ, ಪು.೭೬

೧೫. ಅದೇ, ಪು.೧೯೫

೧೬. ಮಾದೇವ್ ಭರಣಿ, ಶಿಕ್ಷಣ ಭೀಷ್ಮ ಸಿದ್ಧಾರ್ಥ ಶಿಕ್ಷಣ ಸಂಸ್ಥೆ ಸಿದ್ಧಾರ್ಥ ನಗರ, ತುಮಕೂರು, ೧೯೯೪, ಪು.೨೯

೧೭. ಸೂರ್ಯನಾಥ ಕಾಮತ್(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ.೩, ಗೀತಾ ಬುಕ್ ಹೌಸ್, ಮೈಸೂರು, ೧೯೮೦, ಪು.೮೪೮

೧೮. ತುಮಕೂರು ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರ ಸಮ್ಮೇಳನ ೧೯೮೩-೮೪, ಶ್ರೀನಿವಾಸ್ ಪ್ರೆಸ್, ರೈಲ್ವೆ ಸ್ಟೇಷನ್ ರಸ್ತೆ, ಪ್ರಭಾತ್ ಕಾಫಿ ಡಿಪೋ, ಬಿ.ಹೆಚ್. ರಸ್ತೆ, ತಿಪಟೂರು, ಪು.೧

೧೯. ಸ್ವಾತಂತ್ರ್ಯ ಯೋಧರ ಮತ್ತು ಉತ್ತರಾಧಿಕಾರಿಗಳ ಕ್ವಿಟ್ ಇಂಡಿಯಾ ಚಳುವಳಿಯ ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆ, ಬೆಂಗಳೂರು, ೧೯೯೩, ಪು.೩೯೭

೨೦. ಪ್ರಜಾವಾಣಿ ಪತ್ರಿಕೆ, ದಿನಾಂಕ ೧೬-೮-೧೯೯೭, ಬೆಂಗಳೂರು ಪು.೮

೨೧. ಸೂರ್ಯನಾಥ ಕಾಮತ್(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂ.೨, ಗೀತಾ ಬುಕ್ ಹೌಸ್, ಮೈಸೂರು, ೧೯೭೭, ಪು.೪೨೮

೨೨. ವಿಶ್ವ ಕರ್ನಾಟಕ ಪತ್ರಿಕೆ, ದಿನಾಂಕ ೨೦ ಅಕ್ಟೋಬರ್ ೧೯೨೯, ಪು.೬

೨೩. ತಾಳಿಕೆರೆ ಸುಬ್ರಮಣ್ಯಂರವರ ಜನ್ಮಶತಮಾನೋತ್ಸವ ಸ್ಮರಣ ಸಂಚಿಕೆ, ೧೯೭೭ ಪು.೩

೨೪. ಸ್ವಾತಂತ್ರ್ಯ ಹೋರಾಟಗಾರ ಡೇನಿಯಲ್ ಗುಂಡಪ್ಪನವರೊಂದಿಗೆ ನಡೆಸಿದ ಸಂದರ್ಶನ ದಿನಾಂಕ ೨೪-೨-೨೦೦೭, ತುಮಕೂರು

೨೫. ಸ್ವಾತಂತ್ರ್ಯ ಯೋಧರ ಮತ್ತು ಉತ್ತರಾಧಿಕಾರಿಗಳ ಕ್ವಿಟ್ ಇಂಡಿಯಾ ಚಳುವಳಿಯ ಸುವರ್ಣಮಹೋತ್ಸವದ ಸ್ಮರಣ ಸಂಚಿಕೆ, ಬೆಂಗಳೂರು, ೧೯೯೩, ಪು.೩೯೯

೨೬. ಜವರೇಗೌಡ ದೇ.(ಸಂ), ಸರ್ವೋದಯಪಥ, ಜಿ.ವಿ.ನಾ. ಅಭಿನಂದನಾ ಗ್ರಂಥ ಸಮಿತಿ, ಚಿಕ್ಕನಾಯಕನಹಳ್ಳಿ, ೧೯೮೨, ಪು.೪೮೯

೨೭. ಸೂರ್ಯನಾಥ ಕಾಮತ್(ಸಂ), ಪೂರ್ವೋಕ್ತ, ೧೯೭೭, ಪು.೪೯೦

೨೮. ತುಮಕೂರು ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರ ಸಂಘ (ರಿ): ತುಮಕೂರು ಜಿಲ್ಲೆಯ ಚಲೇಜಾವ್ ಚಳುವಳಿಯ ೫೦ ನೇ ವಾರ್ಷಿಕೋತ್ಸವದ ಸ್ಮರಣ ಸಂಚಿಕೆ, ೧೯೯೨, ಪು.೧೩೫

೨೯. ಜವರೇಗೌಡ ದೇ.(ಸಂ), ಪೂರ್ವೋಕ್ತ, ೧೯೮೨, ಪು.೪೮೬

೩೦. ಸ್ವಾತಂತ್ರ್ಯ ಹೋರಾಟಗಾರ್ತಿ, ಜೆ.ಸಿ.ಭಾಗೀರಥಮ್ಮನವರೊಂದಿಗೆ ನಡೆಸಿದ ಸಂದರ್ಶನ, ದಿನಾಂಕ ೧೫-೨-೨೦೦೭, ತುಮಕೂರು

೩೧. ಪುಟ್ಟಗಂಗಮ್ಮ ಬಿ.ಆರ್., ಕೆ.ಎಸ್.ರಾಜಪ್ಪನವರ ಜೀವನ ಚರಿತ್ರೆ ಸಾಧನೆ ಮತ್ತು ಸಿದ್ಧಿ, ಬೆಂಗಳೂರು, ೨೦೦೧, ಪು.೩-೪

೩೨. ರಾಜಪ್ಪ ಕೆ.ಎಸ್.ನವರೊಂದಿಗೆ ನಡೆಸಿದ ಸಂದರ್ಶನ, ದಿನಾಂಕ ೨೦-೨-೨೦೦೭, ಕ್ಯಾತ್ಸಂದ್ರ, ತುಮಕೂರು

೩೩. ತುಮಕೂರು ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರ ಸಮ್ಮೇಳನ ೧೯೮೩, ಪೂರ್ವೋಕ್ತ, ಪು.೧

೩೪. ಸೂರ್ಯನಾಥ ಕಾಮತ್ (ಸಂ), ಪೂರ್ವೋಕ್ತ, ೧೯೭೭, ಪು.೪೫೪

೩೫. ಮಾಲಿಮುದ್ದಣ್ಣ, ಮಾಲಿಮರಿಯಪ್ಪ, ಸಾಹಿತ್ಯಾಲಯ, ಗಾಂಧೀನಗರ, ತುಮಕೂರು, ೧೯೯೬, ಪು.೩೭-೩೮

೩೬. ಲಿಂಗಯ್ಯ ಡಿ., ಸತ್ಯಾಗ್ರಹಿಗಳ ನೆನಪುಗಳು, ಬನಶಂಕರಿ ಪ್ರಕಾಶನ, ಬೆಂಗಳೂರು, ೧೯೮೦, ಪು.೩೮

೩೭. ಕಾಂಗ್ರೆಸ್ ಮಿಟಂಗ್ಸ್ ಇನ್ ತುಮಕೂರು ಡಿಸ್ಟ್ರಿಕ್ಟ್, ಕಡತದ ಸಂಖ್ಯೆ ದಿನಾಂಕ ೬-೧-೧೯೩೮ ರಿಂದ ೨೮-೩-೧೯೩೮ ರವರೆಗೆ [ಕ.ರಾ.ಪ.ಇ.] ಬೆಂಗಳೂರು

೩೮. ತುಮಕೂರು ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರ ಸಂಘ(ರಿ), ಪೂರ್ವೋಕ್ತ, ೧೯೯೨, ಪು.೩೨

೩೯. ಮೈಸೂರು ಕಾಂಗ್ರೆಸ್ ಸಪ್ತಾಹದ ವರದಿ, ಕಡತದ ಸಂಖ್ಯೆ ೮೩೦-೧೨-೧೯೩೯, ದಿನಾಂಕ ೩-೭-೧೯೩೯ [ಕ.ರಾ.ಪ.ಇ.] ಬೆಂಗಳೂರು

೪೦. ಪ್ರಜಾವಾಣಿ ಪತ್ರಿಕೆ, ದಿನಾಂಕ ೧೬-೮-೧೯೯೭, ಬೆಂಗಳೂರು ಪು.೮

೪೧. ಮೈಸೂರು ಕಾಂಗ್ರೆಸ್ ಸಪ್ತಾಹದ ವರದಿ, ಕಡತದ ಸಂಖ್ಯೆ ೮೩೦-೧೨-೧೯೩೯, ದಿನಾಂಕ ೩-೭-೧೯೩೯ [ಕ.ರಾ.ಪ.ಇ.] ಬೆಂಗಳೂರು

೪೨. ವಿಶ್ವಕರ್ನಾಟಕ ಪತ್ರಿಕೆ, ದಿನಾಂಕ ೮-೯-೧೯೩೯, [ಕ.ರಾ.ಪ.ಇ.] ಬೆಂಗಳೂರು

೪೩. ಡೈಲಿ ಅಬಸ್ಟ್ರಾಕ್ಟ್ ಆಫ್ ಇನ್‌ಫರಮೇಷನ್ ಆನ್ ದಿ ಸಿವಿಲ್ ಡಿಸ್‌ಒಬಿಡಿಯಂಟ್ ಮೂಮೆಂಟ್ ಇನ್ ತುಮಕೂರ್ ಡಿಸ್ಟ್ರಿಕ್ಟ್ ಕಾನ್‌ಫಿಡೇಂಷಿಯಲ್ ಕಲೆಕ್ಷನ್ ನಂ-೪೦, ೪೩, ಸಿ.ಬಿ. ಫೈಲ್ ೧೪೭-೪೨-೧೭

೪೪. ಜವರೇಗೌಡ ದೇ. (ಸಂ), ಪೂರ್ವೋಕ್ತ ೧೯೮೨, ಪು.೮೦-೮೧

೪೫. ಸೂರ್ಯನಾಥ ಕಾಮತ್(ಸಂ), ಪೂರ್ವೋಕ್ತ, ೧೯೭೭ ಪು.೪೫೬

೪೬. ಮಾಲಿಮುದ್ದಣ್ಣ, ಪೂವೋಕ್ತ, ೧೯೯೬, ಪು.೭೩

೪೭. ಜವರೇಗೌಡ ದೇ.(ಸಂ), ಪೂರ್ವೋಕ್ತ, ೧೯೮೨, ಪು.೧೦೯

೪೮. ಸತ್ಯವಾದಿ ಪತ್ರಿಕೆ, ದಿನಾಂಕ ೧೨-೬-೧೯೪೪, [ಕ.ರಾ.ಪ.ಇ.] ಬೆಂಗಳೂರು

೪೯. ಜವರೇಗೌಡ ದೇ.(ಸಂ), ಪೂರ್ವೋಕ್ತ, ೧೯೮೨, ಪು.೫೦–೫೧

೫೦. ಸತ್ಯವಾದಿ ಪತ್ರಿಕೆ, ದಿನಾಂಕ ೧೭–೧೦–೧೯೪೫, [ಕ.ರಾ.ಪ.ಇ.] ಬೆಂಗಳೂರು

೫೧. ಸೂರ್ಯನಾಥ ಕಾಮತ್(ಸಂ), ಪೂರ್ವೋಕ್ತ, ೧೯೭೭, ಪು.೫೦೫

೫೨. ಜನವಾಣಿ ಪತ್ರಿಕೆ, ದಿನಾಂಕ ೨೮–೧೦–೧೯೪೬, [ಕ.ರಾ.ಪ.ಇ.] ಬೆಂಗಳೂರು

೫೩. ಮೂಡ್ಲಗಿರೀಶ್ ಎಂ.ವಿ., ಮಧುಗಿರಿಗಾಂಧಿ ಎಂ.ಪುಟ್ಟತಿಮ್ಮಯ್ಯ, ಮಧುಗಿರಿ, ೨೦೦೨, ಪು.೧೭–೧೯

೫೪. ತಿರುಮಲೆ ಅನಂತರಂಗಾಚಾರ್(ಅನು), ತುಮಕೂರು ಜಿಲ್ಲೆಯಲ್ಲಿ ಪೂಜ್ಯ ವಿನೋಭಾ, ಗಾಂಧಿ ವಿಚಾರ ಪರಿಷತ್, ತುಮಕೂರು, ೧೯೫೭, ಪು.೮೬

೫೫. ಬಾಪೂಜಿ ವಿದ್ಯಾಸಂಸ್ಥೆಯ ಪ್ರಾಂಶುಪಾಲರಾದ ಡಿ.ಎಚ್. ಗೌರಮ್ಮನವರೊಂದಿಗೆ ನಡಿಸಿದ ಸಂದರ್ಶನ ದಿನಾಂಕ ೩೦–೩–೨೦೦೭, ತುಮಕೂರು

೫೬. ಗಾಂಧೀಜಿ ಎಂ.ಕೆ., ವಿಲೇಜ್ ಇಂಡಸ್ಟ್ರೀಸ್, ನವಜೀವನ, ಅಹಮದಾಬಾದ್, ೧೯೬೦, ಪು.೧೧

೫೭. ಪಾಪಣ್ಣ ಕೆ.ಎಂ., ಪಾಪಣ್ಣ ಕೊತ್ತನೂರು ಇವರ ಸಂಗ್ರಹ, ಮೈಸೂರು ಚರಕಾ ಪ್ರಚಾರ ಸಂಘ [ಕ.ರಾ.ಪ.ಇ.] ಬೆಂಗಳೂರು

೫೮. ಗೊರೂರು ಅಯ್ಯಂಗಾರ್, ಮಹಾತ್ಮ ಗಾಂಧೀಜಿಯವರ ಪೂರ್ಣ ಸ್ವದೇಶಿ, ಗೊರೂರು, ೧೯೪೦, ಪು.೪೨

೫೯. ಸೂರ್ಯನಾಥ ಕಾಮತ್(ಸಂ), ಪೂರ್ವೋಕ್ತ, ೧೯೭೭, ಪು.೪೨–೪೩

೬೦. ನಂಜುಂಡಸ್ವಾಮಿ ಬಿ.(ಸಂ), ಕಲ್ಪಸಿರಿ, ಅಖಿಲ ಭಾರತ ೬೯ನೇ ಕನ್ನಡ ಸಾಹಿತ್ಯ ಸಮ್ಮೇಳನ ತುಮಕೂರು ೨೦೦೨ರ ಸ್ಮರಣ ಸಂಚಿಕೆ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೦೨, ಪು.೫೪೩–೫೪೪

೬೧. ಅದೇ, ಪು.೫೧೪

೬೨. ಹಯವದನರಾವ್(ಸಂ), ಮೈಸೂರು ರಾಜ್ಯ ಗ್ಯಾಸೆಟಿಯರ್, ಸಂಪುಟ–೫, ಗೌರ್ನಮೆಂಟ್ ಪ್ರೆಸ್, ಬೆಂಗಳೂರು, ೧೯೩೦, ಪು.೪೧೮

೬೩. ಕವಿತಾಕೃಷ್ಣ, ಸ್ವಾತಂತ್ರ್ಯ ಶ್ರೀ, ಕವಿತಾ ಪ್ರಕಾಶನ, ಕ್ಯಾತ್ಸಂದ್ರ, ತುಮಕೂರು, ೧೯೯೦, ಪು.೫೯

೬೪. ಭಾಸ್ಕರಪ್ಪ ಸಿ.ಎನ್.(ಸಂ), ತುಮಕೂರು ಜಿಲ್ಲಾದರ್ಶನ, ಟೈಮ್ಸ್ ಪಬ್ಲಿಕೇಷನ್ಸ್, ತುಮಕೂರು, ೧೯೮೧, ಪು.೫೫೬

೬೫. ಅದೇ, ಪು.೫೩೬

೬೬. ಸೂರ್ಯನಾಥ್ ಕಾಮತ್(ಸಂ), ಪೂರ್ವೋಕ್ತ, ೧೯೮೫, ಪು.೪೨-೪೩

೬೭. ಕವಿತಾಕೃಷ್ಣ, ಪೂರ್ವೋಕ್ತ ೧೯೯೦ ಪು.೫೯

೬೮. ಭಾಸ್ಕರಪ್ಪ ಸಿ.ಎನ್.(ಸಂ), ಪೂರ್ವೋಕ್ತ, ೧೯೮೧, ಪು.೫೫೬

೬೯. ಸ್ವಾತಂತ್ರ್ಯ ಹೋರಾಟಗಾರ್ತಿ ಜೆ.ಸಿ. ಭಾಗೀರಥಮ್ಮನವರೊಂದಿಗೆ ನಡೆಸಿದ ಸಂದರ್ಶನ, ದಿನಾಂಕ ೧೫-೨-೨೦೦೭, ತುಮಕೂರು

೭೦. ಕವಿತಾಕೃಷ್ಣ(ಸಂ), ವೀರವನಿತೆ, ಜೆ.ಸಿ. ಭಾಗೀರಥಮ್ಮನವರ ಅಭಿನಂದನಾ ಗ್ರಂಥ ಸಮಿತಿ, ತುಮಕೂರು, ೧೯೮೮, ಪು.೬

೭೧. ಸೂರ್ಯನಾಥ್ ಕಾಮತ್(ಸಂ), ಪೂರ್ವೋಕ್ತ, ೧೯೮೫, ಪು.೭೬

೭೨. ಭಾಸ್ಕರಪ್ಪ ಸಿ.ಎನ್.(ಸಂ), ಪೂರ್ವೋಕ್ತ, ೧೯೮೧, ಪು.೫೬೫

೭೩. ಸೂರ್ಯನಾಥ್ ಕಾಮತ್(ಸಂ), ಪೂರ್ವೋಕ್ತ, ೧೯೭೭, ಪು.೪೭೦

೭೪. ಕವಿತಾಕೃಷ್ಣ, ಪೂರ್ವೋಕ್ತ, ೧೯೯೦, ಪು.೬೫-೬೭

೭೫. ಸೂರ್ಯನಾಥ್ ಕಾಮತ್(ಸಂ), ಪೂರ್ವೋಕ್ತ, ೧೯೮೫, ಪು.೮೪

೭೬. ಭಾಸ್ಕರಪ್ಪ ಸಿ.ಎನ್.(ಸಂ), ಪೂರ್ವೋಕ್ತ, ೧೯೮೧, ಪು.೫೦೬-೫೦೭

೭೭. ಅದೇ, ಪು.೪೬೩

೭೮. ಅದೇ, ಪು.೫೦೬

೭೯. ಅದೇ, ಪು.೫೧೪

೮೦. ಅದೇ, ಪು.೫೦೭

೮೧. ಜವರೇಗೌಡ ದೇ.(ಸಂ), ಪೂರ್ವೋಕ್ತ, ೧೯೮೨, ಪು. ೪೫೫

೮೨. ಭಾಸ್ಕರಪ್ಪ ಸಿ.ಎನ್.(ಸಂ), ಪೂರ್ವೋಕ್ತ, ೧೯೮೧, ಪು.೫೦೬

೮೩. ಜವರೇಗೌಡ ದೇ.(ಸಂ), ಪೂರ್ವೋಕ್ತ, ೧೯೮೨, ಪು.೪೫೬

೮೪. ಸೂರ್ಯನಾಥ್ ಕಾಮತ್(ಸಂ), ಪೂರ್ವೋಕ್ತ, ೧೯೮೫, ಪು ೮೨

೮೫. ಪುಟ್ಟಗಂಗಮ್ಮ ಬಿ.ಆರ್., ಕೆ.ಎಸ್. ರಾಜಪ್ಪನವರ ಜೀವನ ಚರಿತ್ರೆ ಸಾಧನೆ ಮತ್ತು ಸಿದ್ಧಿ, ಬೆಂಗಳೂರು ೨೦೦೧, ಪು.೧೮

೩

# ಅಸ್ಪೃಶ್ಯತಾ ನಿವಾರಣೆ / ಹರಿಜನೋದ್ಧಾರ ಚಳುವಳಿ

ಸಾಮಾಜಿಕ ಶ್ರೇಣೀಕರಣವನ್ನು ಯಥಾಸ್ಥಿತಿ ಮುಂದುವರಿಸಲು ಹಾಗೂ ಗಟ್ಟಿಗೊಳಿಸಲು ಮೇಲ್ವರ್ಗ ಹುಟ್ಟುಹಾಕಿದ ವ್ಯವಸ್ಥೆಯೇ ಅಸ್ಪೃಶ್ಯತೆ. ಅಸ್ಪೃಶ್ಯರು ಎಂದರೆ, ಸಮಾನಾರ್ಥದಲ್ಲಿ ದಲಿತರು, ಅವರಲ್ಲೂ ಹರಿಜನರು, ಇವರು ಮೇಲ್ವರ್ಗದವರ ಗುಲಾಮಗಿರಿ ಸೇವೆ ಹಾಗೂ ಅವರ ಕೃಷಿ ದುಡಿಮೆಯಲ್ಲಿ ನಿರತರಾದ ಜಾತಿಗಳಿಗೆ ಸೇರಿದವರಾಗಿದ್ದರು. ವಂಶಪಾರಂಪರ್ಯವಾಗಿ ಚರ್ಮ ಹೊಲೆಯುವ, ಪಶುಗಳ ಚರ್ಮ ಸುಲಿಯುವ, ಹದ ಮಾಡಿದ ಚರ್ಮದ ವಸ್ತುಗಳನ್ನು ತಯರಿಸುವುದು, ಮದುವೆ ಸಮಾರಂಭ, ಹೆಣದ ಮೆರವಣಿಗೆಗಳಲ್ಲಿ ವಾದ್ಯ ನುಡಿಸುವುದು, ಸಾವಿನ ಸುದ್ದಿಗಳನ್ನು ಬಹಿರಂಗ ಪಡಿಸುವುದು, ಗ್ರಾಮ ನೈರ್ಮಲ್ಯವನ್ನು ನೋಡಿಕೊಳ್ಳುವ, ಸತ್ತ ಜಾನುವಾರುಗಳನ್ನು ಊರಿನಿಂದ ಹೊರಗೆ ಹಾಕುವ ಕೆಲಸಗಳಲ್ಲಿ ಅವರು ನಿರತರಾಗಿದ್ದರು. ಗ್ರಾಮಕ್ಕೆ ಮತ್ತು ಸರ್ಕಾರಿ ಅಧಿಕಾರಿಗಳಿಗೆ ಇವರು ಇತರ ಸೇವೆಗಳನ್ನು ಸಲ್ಲಿಸುತ್ತಿದ್ದರು.[೧] ಒಟ್ಟನಲ್ಲಿ ಸಮಾಜದಲ್ಲಿ ಸಕಲ ಜನತೆಯಿಂದ ನಿರ್ಲಕ್ಷಿಸಲ್ಪಟ್ಟ ಕೆಲಸ ಕಾರ್ಯಗಳನ್ನು ನಿರ್ವಹಿಸಬೇಕಾಗಿತ್ತು. ಅಸ್ಪೃಶ್ಯರಿಗೆ ಸಾರ್ವಜನಿಕ ಬಾವಿ, ಕೆರೆ, ದೇವಾಲಯ, ಶಾಲೆಗಳಲ್ಲಿ ಪ್ರವೇಶವನ್ನು ನಿರಾಕರಿಸಲಾಗಿತ್ತು. ಆದುದರಿಂದ ಈ ದೋಷ ನಿವಾರಣೆಗಾಗಿ ಕೆಲವು ಸಮಾಜ ಸುಧಾರಕರಾದ ಬುದ್ಧ, ಬಸವ, ರಾಮಾನುಜ, ಕಬೀರ, ಗುರುನಾನಕ್, ಸ್ವಾಮಿ ರಮಾನಂದ, ಫುಲೆ, ಪೆರಿಯಾರ್ ನಾರಾಯಣಗುರು, ಸ್ವಾಮಿವಿವೇಕಾನಂದ, ಸ್ವಾಮಿಶ್ರದ್ಧಾನಂದ, ಅಂಬೇಡ್ಕರ್, ಗಾಂಧೀಜಿಯವರುಗಳು ಬಹಳಷ್ಟು ಹೋರಾಟ ನಡೆಸಿದರು. ಬ್ರಹ್ಮ ಸಮಾಜ, ಆರ್ಯಸಮಾಜ, ಪ್ರಾರ್ಥನಾಸಮಾಜಗಳು ಅಸ್ಪೃಶ್ಯತೆ ಸಮಸ್ಯೆಯ ನಿವಾರಣೆಗಾಗಿ ಹೋರಾಟ ನಡೆಸಿವೆ.[೨]

ಕರ್ನಾಟಕದಲ್ಲಿ ಅಸ್ಪೃಶ್ಯತಾ ನಿವಾರಣೆಗಾಗಿ ೧೨ ನೆಯ ಶತಮಾನದಲ್ಲಿ ಬಸವಣ್ಣನವರು ಸಾಮಾಜಿಕ ಕ್ರಾಂತಿಯನ್ನು ನಡೆಸಿದ್ದರು. ದಾಸರು ಸಾಮಾಜಿಕ ನ್ಯಾಯಕ್ಕೆ ಪ್ರಾಮುಖ್ಯತೆ ನೀಡಿದ್ದರು. ಕನಕದಾಸರು, ಪುರಂದರದಾಸರು ತಮ್ಮ ಭಕ್ತಿಗೀತೆಗಳ ಮೂಲಕ ಜಾತಿಪದ್ಧತಿಯ ನಿರ್ಮೂಲನೆ ಕುರಿತು ಹಾಡಿದ್ದಾರೆ. ಇಂತಹುದೇ ಆದ ಘಟನೆಗಳಿಂದ ಕರ್ನಾಟಕವು

ಹರಿಜನೋದ್ಧಾರ ಕಾರ್ಯಕ್ರಮದ ಬಗ್ಗೆ ತಮ್ಮ ಮಹತ್ವವನ್ನು ಹೆಚ್ಚಿಸಿಕೊಂಡಿದೆ. ಇದೇ ರೀತಿಯಾಗಿ ಭಾರತದ ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಗಾಂಧೀಜಿಯವರು ಅಸ್ಪೃಶ್ಯತಾ ನಿವಾರಣೆಗಾಗಿ ಕೆಲವು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದರು.

ಗಾಂಧೀಜಿಯವರು ಸಬರಮತಿಯಲ್ಲಿ ಆಶ್ರಮವನ್ನು ಪ್ರಾರಂಭಿಸಿದ ನಂತರ ೬-೯-೧೯೧೫ ರಂದು ಅಮೃತಲಾಲ್ ಥಕ್ಕರ್ ಬಾಪ ಅವರಿಂದ ಆಶ್ರಮಕ್ಕೆ ಒಂದು ಪತ್ರ ಬಂದಿತು. "ಬಡವರಾದ ಪ್ರಾಮಾಣಿಕ ಅಸ್ಪೃಶ್ಯ ಕುಟುಂಬವೊಂದು ನಿಮ್ಮ ಆಶ್ರಮವನ್ನು ಸೇರ ಬಯಸುತ್ತದೆ. ಅವರನ್ನು ಸೇರಿಸುವಿರಾ? ಎಂದು, ಅವರು ಅದನ್ನು ಸ್ವಾಗತಿಸಿ ಆ ಕುಂಟುಂಬದ ಸದಸ್ಯರೆಲ್ಲಾ ಆಶ್ರಮದ ನಿಯಮಗಳನ್ನು ಪಾಲಿಸಲು ಸಿದ್ಧರಾಗಿದ್ದಲ್ಲಿ ಅವರನ್ನು ಆಶ್ರಮಕ್ಕೆ ಸೇರಿಸಿಕೊಳ್ಳಲು ನಾವು ಒಪ್ಪುತ್ತೇವೆ ಎಂದು ಪ್ರತಿಕ್ರಿಯಿಸಿದರು. ೧೧-೯-೧೯೧೫ ರಂದು ಆ ಅಸ್ಪೃಶ್ಯ ಕುಟುಂಬವು ಆಶ್ರಮಕ್ಕೆ ಆಗಮಿಸಿತು. ಕುಟುಂಬದಲ್ಲಿದ್ದವರು ದುದಾಬಾಯ್, ಆತನ ಪತ್ನಿ ದಾನೀಬಹನ್ ಮತ್ತು ಅವರ ಮಗಳು ಲಕ್ಷ್ಮಿ. ಆದರೆ ಅವರನ್ನು ಸೇರಿಸಿದ್ದರಿಂದ ಆಶ್ರಮಕ್ಕೆ ಸಹಾಯ ಮಾಡುತ್ತಿದ್ದ ಮಿತ್ರರಲ್ಲಿ ಸ್ವಲ್ಪ ಕಳವಳವುಂಟಾಯಿತು.[೩] ಮೊದಲು ಬಾವಿಯ ನೀರನ್ನು ಈ ಅಸ್ಪೃಶ್ಯರು ತೆಗೆದುಕೊಂಡು ಬರುತ್ತಿದ್ದರಿಂದ ಆಕ್ಷೇಪಣೆ ಪ್ರಾರಂಭವಾಯಿತು. ಬಾವಿಯ ಏತವನ್ನು ಎತ್ತುತ್ತಿದ್ದ ಆಳು ನೀರು ತೆಗೆದುಕೊಂಡು ಬರುತ್ತಿದ್ದ ದುದಾಬಾಯಿಗೆ ಕಿರುಕುಳ ಕೊಡುವುದಕ್ಕೆ ಪ್ರಾರಂಭಿಸಿದನು. ಆಗ ಗಾಂಧೀಜಿ ಅವರು ದುದಾಬಾಯಿಗೆ 'ಅವನು ಎಷ್ಟು ಕಿರುಕುಳ ಕೊಟ್ಟರೂ ಸಹಿಸಿಕೊಳ್ಳಿ, ಏನಾದರೂ ಸರಿಯೆ ಬಾವಿಯಿಂದ ನೀರು ತರುವುದನ್ನು ಬಿಡಬೇಡಿ' ಎಂದು ಹೇಳಿದರು. ಹೀಗೆ ಎಷ್ಟು ಬೈದರೂ ಸಹಿಸಿಕೊಂಡು ಸುಮ್ಮನೆ ನೀರು ತೆಗೆದುಕೊಂಡು ಹೋಗುತ್ತಿದ್ದುದನ್ನು ಕಂಡ ಏತ ಎತ್ತುವವನು ಸುಮ್ಮನಾದನು. ಆದರೆ ಕ್ರಮೇಣ ಆಶ್ರಮಕ್ಕೆ ಬರುತ್ತಿದ್ದ ಧನ ಸಹಾಯವೆಲ್ಲಾ ನಿಂತು ಹೋಯಿತು. ಧನ ಸಹಾಯ ನಿಂತುದರ ಜೊತೆಗೆ ಆಶ್ರಮದ ಮೇಲೆ ಸಾಮಾಜಿಕ ಬಹಿಷ್ಕಾರದ ಸುದ್ದಿಯೂ ಬಂದಿತು. ಇದಕ್ಕೆಲ್ಲಾ ಗಾಂಧಿ ಅವರು ಸಿದ್ಧರಾದರು. ಏನೇ ಆದರೂ ಅಹಮದಾಬಾದನ್ನು ಬಿಡುವುದಿಲ್ಲವೆಂದು ಆಶ್ರಮದ ಗೆಳೆಯರೆಲ್ಲರೂ ಸಂಕಲ್ಪಿಸಿದರು. ಅಹಮದಾಬಾದಿನ ಅಸ್ಪೃಶ್ಯರ ಕೇರಿಗೆ ಹೋಗಿ ದೇಹಶ್ರಮದ ಕಾರ್ಯದಿಂದ ಹಣ ಸಂಪಾದನೆ ಮಾಡಲು ಆಶ್ರಮದ ನಿವಾಸಿಗಳೆಲ್ಲಾ ಸಿದ್ಧರಾದರು.[೪] ಈ ರೀತಿ ಗಾಂಧೀಜಿಯವರು ಸಬರಮತಿ ಆಶ್ರಮದಲ್ಲಿ ಅಸ್ಪೃಶ್ಯತಾ ನಿವಾರಣೆಯ ಕಾರ್ಯ ಚಟುವಟಿಕೆಯನ್ನು ಆರಂಭಿಸಿದರು.

೧೯೧೭ರಲ್ಲಿ ನಡೆದ ಕಲ್ಕತ್ತಾ ಕಾಂಗ್ರೆಸ್ ಅಧಿವೇಶನದಲ್ಲಿ ಹರಿಜನೋದ್ಧಾರವನ್ನು ಕಾಂಗ್ರೆಸ್ ತಮ್ಮ ರಚನಾತ್ಮಕ ಕಾರ್ಯಗಳಲ್ಲಿ ಒಂದಾಗಿ ನಿರ್ಣಯಿಸಿತು. ಇದು ತುಂಬಾ ಹಳೆಯ ಸಮಸ್ಯೆಯಾಗಿದ್ದರೂ ಸಹಾ ರಾಷ್ಟ್ರೀಯ ಹೋರಾಟದ ತೆರೆಯ ಮೇಲೆ ಗಾಂಧೀಜಿಯವರ

ಆಗಮನದ ನಂತರ ಅದು ಇನ್ನೂ ಹೆಚ್ಚು ಮಹತ್ವವನ್ನು ಪಡೆಯುವಂತಾಯಿತು. ಇವರು ಈ ಘೋರ ಕಲಂಕದ ಬಗ್ಗೆ ಭಾಷಣದ ಮತ್ತು ಬರಹಗಳ ಯುದ್ಧವನ್ನು ಸಾರಿದರು. ೧೯೧೯ರಲ್ಲಿ ಗಾಂಧೀಜಿಯವರು ಯಂಗ್ ಇಂಡಿಯಾ ಪತ್ರಿಕೆಯ ಸಂಪಾದಕರಾದ ಮೇಲೆ ಹರಿಜನೋದ್ಧಾರದ ಬಗ್ಗೆ ಹರಿತವಾದ ಲೇಖನಗಳನ್ನು ಬರೆದು[೫] ಜನತೆಯಲ್ಲಿ ಈ ಅಂಶದ ಬಗ್ಗೆ ಅರಿವು ಮೂಡಿಸಿದರು. ಅಸ್ಪೃಶ್ಯತಾ ನಿವಾರಣೆಯು ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಒಂದಾಗಿದೆ. ಹಿಂದೂ ಧರ್ಮದಲ್ಲಿ ಬಂದಂತಹ ಈ ದೋಷ ಹಾಗು ಶಾಪವಾದ ಈ ಸಮಸ್ಯೆ ಅತ್ಯಗತ್ಯವಾಗಿ ನಿವಾರಣೆಯಾಗಬೇಕಾಗಿದೆ ಎಂಬುದು ಗಾಂಧೀಜಿಯವರ ಕಲ್ಪನೆ. ಇವರ ಪ್ರಕಾರ ಅಸ್ಪೃಶ್ಯತಾ ಸಮಸ್ಯೆ ನಿರ್ಮೂಲನೆಯಾಗದ ಹೊರತು ಸ್ವರಾಜ್ಯ ಪ್ರಾಪ್ತಿಯಾಗುವುದಿಲ್ಲ. ಇದು ಬರಿಯ ರಾಜಕೀಯ ಚಳುವಳಿಯಲ್ಲ, ಹರಿಜನರ ಸೇವೆಯನ್ನು ಹರಿಜನರ ವಿಷಯದಲ್ಲಿ ದಯೆಯಿಂದ ಮಾಡುವಂತೆ ಮಾಡಬಾರದು ಎಂಬುದಾಗಿತ್ತು.[೬]

ಅಸ್ಪೃಶ್ಯತೆಗೆ ಯಾವ ಶಾಸ್ತ್ರದ ಆಧಾರವೂ ಇಲ್ಲ. ಅಸ್ಪೃಶ್ಯತೆಯಿದ್ದರೆ ಹಿಂದೂ ಧರ್ಮ ನಾಶವಾಗುತ್ತದೆ. ಅಸ್ಪೃಶ್ಯತೆಯನ್ನು ಹಿಂದೂ ಸಮಾಜದಿಂದ ನಿರ್ಮೂಲನೆಗೊಳಿಸಬೇಕು. ಸಹಸ್ರಾರು ವರ್ಷಗಳಿಂದ ಹಿಂದು ಸಮಾಜದ ಒಂದು ಭಾಗವೆಂದು ಅಸ್ಪೃಶ್ಯರನ್ನು ಪರಿಗಣಿಸಿ ಶೋಷಿಸಿರುವ ಸವರ್ಣ ಹಿಂದುಗಳು, ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಪ್ರಾಯಶ್ಚಿತ್ತ ರೂಪವಾಗಿ ಹರಿಜನರ ಸೇವೆಯನ್ನು ಮಾಡಬೇಕು ಎಂದು ಅಸ್ಪೃಶ್ಯತಾ ನಿವಾರಣೆಯ ಬಗ್ಗೆ ಗಾಂಧೀಜಿಯವರ ವಿಚಾರ ಸರಣಿಯು ಹರಿಯುತ್ತಿತ್ತು.[೭] ಅಸ್ಪೃಶ್ಯತೆ ನಿವಾರಣೆ ಎಂದರೆ, ಅಸ್ಪೃಶ್ಯರೆಂದು ಕರೆಯದೇ ಅವರನ್ನು ನಮ್ಮ ಅಣ್ಣ-ತಮ್ಮಂದಿರಂತೆ, ಅಕ್ಕ-ತಂಗಿಯರಂತೆ ಸಹೋದರತ್ವ ಭಾವನೆಯಿಂದ ನಡೆಸಿಕೊಳ್ಳಬೇಕು. ಅವರನ್ನು ಈ ರೀತಿ ನಡೆಸಿಕೊಳ್ಳುವಲ್ಲಿ ಯಾವುದೇ ತಪ್ಪುವರ್ಣ ಭೇದಭಾವನೆ ಮಾಡಬಾರದು. ಇಡೀ ಜಗತ್ತೇ ತನ್ನ ಕುಟುಂಬವೆಂದು ಪರಿಗಣಿಸಿ ಅಸ್ಪೃಶ್ಯರನ್ನು ಆದರತೆಯಿಂದ ಭಾವಿಸಬೇಕು ಎಂಬುದು ಗಾಂಧೀಜಿಯವರ ಅಭಿಪ್ರಾಯವಾಗಿತ್ತು.

೧೯೨೦ ರಲ್ಲಿ ಬ್ರಾಹ್ಮಣೇತರ ವಿದ್ಯಾರ್ಥಿಗಳಿಗೆ ಬೆಂಗಳೂರು ಮತ್ತು ಮೈಸೂರುಗಳಲ್ಲಿನ ಸಂಸ್ಕೃತ ಶಾಲೆಗಳಲ್ಲಿ ಪ್ರವೇಶವನ್ನು ನಿರಾಕರಿಸಲಾಗಿತ್ತು. ಇದರಿಂದಾಗಿ ಗಾಂಧೀಜಿಯವರು ೧೯೨೭ರಲ್ಲಿ ಮೈಸೂರು ಸಂಸ್ಥಾನಕ್ಕೆ ಭೇಟಿ ನೀಡಿದಾಗ ಈ ವಿಚಾರವನ್ನು ಟೀಕಿಸಿ ಸಮಾಜದ ಉನ್ನತ ವರ್ಗದವರನ್ನು ಕುರಿತು ಗಾಂಧೀಜಿಯವರು ಹೀಗೆ ಹೇಳಿದರು "ಹಿಂದೂ ಧರ್ಮದಲ್ಲಿ ಅಸ್ಪೃಶ್ಯತೆಗೆ ಸ್ಥಾನವಿದೆ ಎಂದು ಯಾರಾದರೂ ಸಾಬೀತು ಮಾಡಿದರೆ, ನಾನು ಹಿಂದುತ್ವವನ್ನು ಬಿಡುತ್ತೇನೆ"______ ಮುಂದುವರೆದು ಹಿಂದೂ ಧರ್ಮದಲ್ಲಿ ಅಸ್ಪೃಶ್ಯತೆಗೆ ಸ್ಥಾನವಿಲ್ಲ

ಎಂದು, ಆ ರೀತಿ ಭಾವಿಸಿದರೆ ಅದು ದೇವರ ಮತ್ತು ಮಾನವತೆಗೆ ಎಸಗಿದ ಮಹಾ ಅಪರಾಧ್ ಎಂದು ತಿಳಿದು ಅಸ್ಪೃಶ್ಯತೆಯ ನಿವಾರಣೆಯ ಬಗ್ಗೆ ತಮ್ಮ ಭಾಷಣದಲ್ಲಿ ತಿಳಿಸಿದರು.

೧೯೩೧ರ ಕರಾಚಿ ಕಾಂಗ್ರೆಸ್ ಅಧಿವೇಶನವು ಹರಿಜನರಿಗೆ ಮೂಲಭೂತ ಹಕ್ಕುಗಳನ್ನು ಜಾರಿ ಮಾಡಿತು. ೧೯೩೨ ಸೆಪ್ಟೆಂಬರ್ ೨೪ರ ಪೂನಾ ಒಪ್ಪಂದದ ನಂತರ ಅಸ್ಪೃಶ್ಯತಾ ನಿರ್ಮೂಲನೆಗಾಗಿ ಇಡೀ ದೇಶದಾದ್ಯಂತ ಸೆಪ್ಟಂಬರ್ ೨೭ ರಿಂದ ಅಕ್ಟೋಬರ್ ೨ ರವರೆಗೂ ಅಸ್ಪೃಶ್ಯತಾ ವಿರೋಧ ವಾರವನ್ನು ಆಚರಿಸಲಾಯಿತು. ಅಲ್ಲದೆ ೧೯೩೨ರ ಸೆಪ್ಟೆಂಬರ್ ೩೦ರಂದು ಅಖಿಲ ಭಾರತ ಅಸ್ಪೃಶ್ಯತಾ ನಿರ್ಮೂಲನಾ ಸಂಘವನ್ನು ಪ್ರಾರಂಭಿಸಲಾಯಿತು. ಇದು ಮುಂದೇ ದೆಹಲಿ ಕೇಂದ್ರವಾಗಿ, ಗ್ಯಾನಶಾಮದಾಸ್ ಬಿರ್ಲಾ ಅಧ್ಯಕ್ಷರು, ಅಮೃತಲಾಲ್‌ಠಕ್ಕರ್‌ಬಾಪರವರು ಕಾರ್ಯದರ್ಶಿಗಳಾಗಿ ೧೯೩೨ ಅಕ್ಟೋಬರ್‌ನಲ್ಲಿ "ಹರಿಜನ ಸೇವಕ ಸಂಘ" ಎಂಬ ಹೆಸರನ್ನು ಪಡೆದು ದೇಶದಲ್ಲೆಲ್ಲಾ ಇದರ ಶಾಖೆಗಳು ಜನ್ಮ ತಾಳಿದವು.[೯] ಇದರ ಅಂಗವಾಗಿ ಕರ್ನಾಟಕದಲ್ಲಿ ೧೯೩೩ರಲ್ಲಿ ಹುಬ್ಬಳ್ಳಿಯು ಕೇಂದ್ರವಾಗಿ, ಕರ್ನಾಟಕ ಹರಿಜನ ಸೇವಕ ಸಂಘ ಸ್ಥಾಪನೆಯಾಯಿತು. ಇದರ ಶಾಖೆಗಳು ಬಿಜಾಪುರ, ಬಳ್ಳಾರಿ, ಬೆಳಗಾಂ, ಕಾರವಾರ, ಮಂಗಳೂರು, ಕೊಡಗು, ಬೆಂಗಳೂರುಗಳಲ್ಲಿ ಜನ್ಮ ತಾಳಿದವು. ಸರ್ದಾರ್ ವೀರಣ್ಣ ಗೌಡ ಪಾಟೀಲರು ಕರ್ನಾಟಕ ರಾಜ್ಯದ ಹರಿಜನ ಸೇವಕ ಸಂಘದ ಅಧ್ಯಕ್ಷರಾಗಿ ಹರಿಜನೋದ್ಧಾರದ ಬಗ್ಗೆ ದುಡಿದವರು.[೧೦] ಗಾಂಧೀಜಿಯವರು ಯರವಾಡ ಜೈಲಿನಲ್ಲಿ ಇದ್ದುಕೊಂಡೇ ಹರಿಜನ ಪತ್ರಿಕೆಯನ್ನು ಆರಂಭಿಸಿದರು. ೧೯೩೩ ಫೆಬ್ರುವರಿ ೧೧ರಂದು ಹರಿಜನ ಪತ್ರಿಕೆಯ ಮೊದಲ ಸಂಚಿಕೆ ಬಿಡುಗಡೆಗೊಳಿಸಿ, ಇದರಲ್ಲಿ ವಾರವಾರವೂ ಹರಿಜನರ ಸಮಸ್ಯೆಗಳನ್ನು ವಿಶ್ಲೇಷಿಸಿ ಪರಿಹಾರ ಸೂಚಿಸಿದರು.[೧೧] ಅಲ್ಲದೇ ಅಸ್ಪೃಶ್ಯತಾ ವಿರೋಧ ಚಳುವಳಿಯ ಮುಖ್ಯ ಕಾರ್ಯಕ್ರಮಗಳಲ್ಲಿ ದೇವಸ್ಥಾನ ಪ್ರವೇಶ ಚಳುವಳಿಯೂ ಮುಖ್ಯವಾಗಿತ್ತು. ಗುರುವಾಯೂರಿನ ಕೃಷ್ಣ ದೇವಾಲಯದಲ್ಲಿ ಕೆಳಪ್ಪನ್ ಅವರು ಹರಿಜನರ ಪ್ರವೇಶಕ್ಕೆ ಕೈಗೊಂಡಿದ್ದ ಉಪವಾಸ ಸತ್ಯಾಗ್ರಹದಲ್ಲಿ ಗಾಂಧೀಜಿಯವರು ಭಾಗವಹಿಸಿದರು.[೧೨] ಈ ಎಲ್ಲಾ ಹರಿಜನೋದ್ಧಾರ ಕಾರ್ಯಕ್ರಮಗಳಿಂದ ಪ್ರಭಾವಿತರಾದ ತಗಡೂರು ರಾಮಚಂದ್ರರಾಯರು ಮೈಸೂರು ಸಂಸ್ಥಾನದಲ್ಲಿ ಹರಿಜನಾಭಿವೃದ್ಧಿಗೆ ಚಾಲನೆ ನೀಡಿದರು. ಇವರು ಹರಿಜನರಿಗೆ ಸಾರ್ವತ್ರಿಕ ಸ್ಥಳಗಳಿಗೆ ಪ್ರವೇಶಿಸುವ ಹಕ್ಕು ಇದೆ ಎಂದು ೧೫-೫-೧೯೩೩ರಂದು ದೇವಸ್ಥಾನ ಪ್ರವೇಶ ಚಳುವಳಿಯನ್ನು ಪ್ರಾರಂಭಿಸಿದರು. ಇದರಿಂದಾಗಿ ಸಂಸ್ಥಾನದಲ್ಲಿ ಹರಿಜನರು ಸಾರ್ವಜನಿಕ ಸ್ಥಳಗಳಿಗೆ ಪ್ರವೇಶಿಸುವ ಹಕ್ಕು ಪಡೆದರು. ಈ ನಿಟ್ಟನಲ್ಲಿ ಬೆಂಗಳೂರಿನಲ್ಲಿ ದೀನಾದೇವ ಸಂಘ ಮತ್ತು ಕೆಂಗೇರಿ ಗುರುಕುಲಾಶ್ರಮಗಳನ್ನು ಪ್ರಾರಂಭಿಸಲಾಯಿತು. ತಗಡೂರು ರಾಮಚಂದ್ರರಾಯರ ಸೇವೆಯಿಂದ ಸಂಸ್ಥಾನದಲ್ಲೆಲ್ಲಾ

ಕಾಂಗ್ರೆಸ್ಸಿಗರು ಈ ಸಮಸ್ಯೆಗೆ ಸ್ಪಂದಿಸಿ, ಅಸ್ಪೃಶ್ಯತಾ ನಿವಾರಣೆಗಾಗಿ ಪ್ರಯತ್ನಿಸಿರುವುದು ಕಂಡು ಬರುತ್ತದೆ. ಈ ನಿಟ್ಟಿನಲ್ಲಿ ತುಮಕೂರು ಜಿಲ್ಲೆಯಲ್ಲಿಯೂ ಸಹ ಹರಿಜನೋದ್ಧಾರ ಕಾರ್ಯಗಳು ನಡೆದಿವೆ.

೧೯೨೭ರಲ್ಲಿ ಜುಲೈ ತಿಂಗಳಲ್ಲಿ ಗಾಂಧೀಜಿಯವರು ಖಾದಿ ಪ್ರಚಾರದ ನಿಮಿತ್ತವಾಗಿ ಮೈಸೂರು ಸಂಸ್ಥಾನದಾದ್ಯಂತ ಪ್ರವಾಸ ಕೈಗೊಂಡಿದ್ದರು. ಈ ವೇಳೆಯಲ್ಲಿಯೂ ಇವರು ಅಸ್ಪೃಶ್ಯತಾ ನಿವಾರಣೆಯ ಬಗ್ಗೆ ಪ್ರಚಾರ ಕೈಗೊಂಡರು. ಈ ಸಂದರ್ಭದಲ್ಲಿ ೧೯೨೭ ಜುಲೈ ೧೪ರಂದು ಕಸ್ತೂರಿಬಾಗಾಂಧಿ, ಗಂಗಾಧರರಾವ್‌ದೇಶಪಾಂಡೆ, ಮಹದೇವದೇಸಾಯಿ, ಮಣಿಬಹನಪಾಟೀಲ್, ದೇವದಾಸ್ ಗಾಂಧಿ, ಮೃದುಲಾಸಾರಾಬಾಯಿರವರೊಂದಿಗೆ ತುಮಕೂರಿಗೆ ಭೇಟಿ ನೀಡಿದರು. ಅಂದು ಇಲ್ಲಿ ಸಾರ್ವಜನಿಕ ಸಭೆಯ ನಂತರ ಗಾಂಧೀಜಿ ಹರಿಜನರು ವಾಸಿಸುವ ಕೇರಿಗಳಿಗೆ ಭೇಟಿ ನೀಡಿ, ಅವರಿಗೆ ಸ್ವಚ್ಛತೆಯಿಂದ ಇರಬೇಕು, ಹೆಂಡ ಕುಡಿಯುವುದನ್ನು ನಿಲ್ಲಿಸಬೇಕು, ಗೋ ಮಾಂಸ ತಿನ್ನುವುದನ್ನು ಬಿಡಬೇಕು ಎಂದು ಹರಿಜನರನ್ನು ಕುರಿತು ಭಾಷಣ ಮಾಡಿದರು. ಈಗಾಗಲೇ ತುಮಕೂರಿನಲ್ಲಿದ್ದ ಆದಿಕರ್ನಾಟಕ ವಸತಿ ಮತ್ತು ಔದ್ಯೋಗಿಕ ಶಿಕ್ಷಣ ಶಾಲೆಗೆ ಭೇಟಿ ನೀಡಿ ಅಲ್ಲಿನ ಅಡಿಗೆ ಮನೆ, ಪಾಯಖಾನೆಗಳ ಸ್ವಚ್ಛತೆಯನ್ನು ಮನಸಾರೆ ಕೊಂಡಾಡಿದರು. ಅಲ್ಲಿ ತಯಾರಿಸಿದ ರಾಗಿಯ ರೊಟ್ಟಿಗಳನ್ನು ತರಿಸಿಕೊಂಡು ಅಂದು ಮಧ್ಯಾಹ್ನದ ಊಟದ ಸಮಯದಲ್ಲಿ ಅಂದಿನ ಸಭೆಯ ಸ್ವಾಗತ ಸಮಿತಿಯ ಸದಸ್ಯರಿಗೆ ಬಡಿಸುವಂತೆ ಕೇಂದ್ರ ಸಮಿತಿಯ ಕಾರ್ಯದರ್ಶಿಯವರಿಗೆ ಗಾಂಧೀಜಿ ತಿಳಿಸಿದರು.[೧೩] ಮರುದಿನ ಬೆಳಿಗ್ಗೆಯ ಉಪಹಾರವನ್ನು ಅಸ್ಪೃಶ್ಯರ ಬಾಲಕನೊಬ್ಬನಿಂದ ಗಾಂಧೀಜಿಯವರಿಗೆ ಬಡಿಸಬೇಕೆಂದು ಸ್ಥಳೀಯ ವ್ಯವಸ್ಥಾಪಕರು ನಿರ್ಧರಿಸಿದರು. ಇದರಿಂದಾಗಿ ಹೆಚ್.ಎಂ. ಗಂಗಾಧರಯ್ಯನೆಂಬ ಹರಿಜನ ಬಾಲಕ ಆದಿ ಕರ್ನಾಟಕ ಮತ್ತು ಔದ್ಯೋಗಿಕ ವಸತಿ ಶಾಲೆಯಲ್ಲಿ ತಯಾರಿಸಿದ ರಾಗಿ ರೊಟ್ಟಿ ಮತ್ತು ಹುಚ್ಚೆಳ್ಳು ಚಟ್ನಿಯನ್ನು ತಂದು ಗಾಂಧೀಜಿ, ಕಸ್ತೂರಿ ಬಾ, ದೇವದಾಸ್ ಗಾಂಧೀಜಿಯವರಿಗೆ ಉಪಹಾರವಾಗಿ ಬಡಿಸಿದರು.[೧೪]

ಈ ಸಂದರ್ಭದಲ್ಲಿ ಗಾಂಧೀಜಿಯವರು ತುಮಕೂರಿನಲ್ಲಿ ಹರಿಜನರು ವಾಸಿಸುವ ನರಸಿಂಹ ರಾಜ ಕಾಲೋನಿಗೆ ಭೇಟಿ ನೀಡಿದರು. ಅಲ್ಲಿನ ಜನತೆಗೆ ಗಾಂಧೀಜಿಯವರು ಬಾವಿ, ಕೆರೆ, ಶಾಲೆ, ದೇವಸ್ಥಾನಗಳಿಗೆ ಸಾರ್ವಜನಿಕ ಪ್ರವೇಶ ಪಡೆಯುವುದಕ್ಕೆ ಮೇಲು-ಕೀಲು, ಶ್ರೇಷ್ಠ-ನೀಚ, ಉತ್ತಮ-ಅಧಮ ಎಂಬ ಭೇದ ಭಾವವನ್ನು ತೊಡೆದು ಹಾಕಲು ಹೋರಾಟ ನಡೆಸಬೇಕು ಎಂದು ತಿಳಿಸಿದರು. ಅಲ್ಲದೆ ಉತ್ತಮ ಪೌಷ್ಟಿಕ ಆಹಾರ ಸೇವಿಸಬೇಕು, ಸ್ವಚ್ಛತೆಯಿಂದ ಇರಬೇಕು, ಪರಿಸರ ನೈರ್ಮಲ್ಯವನ್ನು ಕಾಪಾಡಿಕೊಳ್ಳಬೇಕು ಎಂದು ತಿಳಿಸಿದರು.[೧೫]

ಗಾಂಧೀಜಿಯವರು ತುಮಕೂರಿನ ಭೇಟಿಯ ನಂತರ ೧೯೨೭ರ ಜುಲೈ ೧೫ ರಂದು ಜಿಲ್ಲೆಯ ಮಧುಗಿರಿ, ಕೊರಟಗೆರೆ, ತಿಪಟೂರು, ಕ್ಯಾತ್ಸಂದ್ರಗಳಿಗೆ ಭೇಟಿ ನೀಡಿದರು. ಆ ಸಂದರ್ಭದಲ್ಲಿ ಮಧುಗಿರಿ ಜನತೆ ದಾರಿದ್ರ ನಾರಾಯಣ ನಿಧಿಗೆ ಒಂದು ಸಾವಿರ ರೂಪಾಯಿಗಳನ್ನು, ಕೊರಟಗೆರೆಯಲ್ಲಿ ಒಂದು ನೂರು ರೂಪಾಯಿಗಳನ್ನು ಬರುವ ದಾರಿಯಲ್ಲಿ ಒಂದು ಹಳ್ಳಿಯಲ್ಲಿ ಮೂವತ್ತು ರೂಪಾಯಿಗಳನ್ನು ನಿಧಿಗೆ ಅರ್ಪಿಸಿದರು.[೧೬]

೧೯೩೨ರಲ್ಲಿ ಗಾಂಧೀಜಿಯವರು ಹರಿಜನರ ಸಮಸ್ಯೆ ನಿವಾರಣೆಗಾಗಿ ಉಪವಾಸ ಕೈಗೊಂಡಾಗ ತುಮಕೂರು ಜಿಲ್ಲೆಯ ಕೊರಟಗೆರೆ ತಾಲ್ಲೂಕಿನ ಟಿ.ಆರ್. ಚನ್ನಿಗರಾಮಯ್ಯನವರು ಹರಿಜನರ ದೇವಾಲಯ ಪ್ರವೇಶ. ಸಹಪಂಕ್ತಿಭೋಜನ, ಪಾನ ನಿರೋಧ ಆಂದೋಲನಗಳನ್ನು ಪ್ರಾರಂಭಿಸಿದರು. ಇವರು ಜಿಲ್ಲೆಯಲ್ಲೇ ಅಲ್ಲದೆ ರಾಜ್ಯದಲ್ಲಿಯೇ ಹರಿಜನೋದ್ಧಾರದ ಕೆಲಸ ಕಾರ್ಯಗಳಲ್ಲಿ ತೊಡಗಿದರು. ಇವರು ಮೈಸೂರು ರಾಜ್ಯದ ಆದಿಜಾಂಬವ ಅಭಿವೃದ್ಧಿ ಸಂಘವನ್ನು ಸ್ಥಾಪಿಸಿದರು. ಅದರ ಕಾರ್ಯದರ್ಶಿ ಚಿಕ್ಕಹನುಮಂತಯ್ಯನವರೊಡನೆ ರಾಜ್ಯದಲ್ಲಿ ಹರಿಜನರ ಸಂಘಟನೆಯನ್ನು ಮಾಡಿದರು. ಹರಿಜನರ ಪ್ರಜಾ ಸಂಖ್ಯೆಗೆ ಅನುಗುಣವಾಗಿ ಶಾಸನಸಭೆ, ಸ್ಥಳೀಯಸಂಸ್ಥೆಗಳಲ್ಲಿ ಅವರಿಗೆ ಪ್ರತ್ಯೇಕ ಪ್ರಾತಿನಿಧ್ಯವನ್ನು ಮೀಸಲಿಡುವುದಕ್ಕೆ ಹೋರಾಟವನ್ನು ಪ್ರಾರಂಭಿಸಿದರು.[೧೭]

೧೯೩೪ರಲ್ಲಿ ಅಸ್ಪೃಶ್ಯತಾ ನಿವಾರಣೆಯ ಆಂದೋಲನದ ಸಲುವಾಗಿ ಗಾಂಧೀಜಿ ದೇಶದಾದ್ಯಂತ ಪ್ರವಾಸ ಕೈಗೊಂಡು ಮೈಸೂರು ಸಂಸ್ಥಾನದಲ್ಲಿ ಕಾಲಿಟ್ಟರು. ಅವರ ಹರಿಜನೋದ್ಧಾರ ಭಿಕ್ಷಾ ಯಾತ್ರೆಯೂ ಇಲ್ಲಿಯೂ ನಡೆಯಿತು. ಸಂಸ್ಥಾನದ ವಿವಿಧ ವರ್ಗದ ಜನತೆ ಸೂಕ್ತವಾಗಿಯೇ ಈ ಸಮಸ್ಯೆಗೆ ಸ್ಪಂದಿಸಿತು. ಸಂಸ್ಥಾನ ಎಲ್ಲಾ ಬಗೆಯಲ್ಲಿ ಮಾದರಿಯೆನಿಸಿಕೊಂಡಿದೆ ಎಂಬ ಕಲ್ಪನೆ ಗಾಂಧೀಜಿಯವರಿಗೆ ಸ್ವಲ್ಪ ಸಮಾಧಾನ ತಂದಿತು.[೧೮] ಈ ಪ್ರವಾಸದ ಸಮಯದಲ್ಲಿ ಏರ್ಪಡಿಸುತ್ತಿದ್ದ ಸಭೆಗಳಲ್ಲಿ ಭಾಗವಹಿಸುತ್ತಿದ್ದ ಮಹಿಳೆಯರು ತಮ್ಮ ಮೈಮೇಲಿದ್ದ ಒಡವೆಗಳನ್ನು ಕಳಚಿ ಗಾಂಧೀಜಿಯವರ ದರಿದ್ರ ನಾರಾಯಣ ನಿಧಿಗೆ ಅರ್ಪಿಸುತ್ತಿದ್ದರು.

ಗಾಂಧೀಜಿಯವರು ೧೯೩೪ ಜನವರಿ ೪ರಂದು ಹರಿಜನ ಪ್ರವಾಸ ಕೈಗೊಂಡು ತುಮಕೂರಿಗೆ ಭೇಟಿ ನೀಡಿದರು. ಅಂದು ತುಮಕೂರಿನ ಸರ್ಕಾರಿ ಪ್ರೌಢಶಾಲೆಯ ಮೈದಾನದಲ್ಲಿ ಸಾರ್ವಜನಿಕ ಸಭೆಯನ್ನು ಉದ್ದೇಶಿಸಿ, ಈ ಅಸ್ಪೃಶ್ಯತಾ ನಿವಾರಣೆಯ ಚಳುವಳಿಯಲ್ಲಿ ತುಮಕೂರು ಜಿಲ್ಲೆಯ ಪ್ರತಿಯೊಬ್ಬ ನಾಗರೀಕರು ಭಾಗವಹಿಸಬೇಕೆಂದು ಪ್ರಾರ್ಥಿಸಿಕೊಂಡರು. ಈ ಸಂದರ್ಭದಲ್ಲಿ ತುಮಕೂರಿನ ಬೇರೆ ಬೇರೆ ಸಮಾಜಗಳವರು ಭಿನ್ನವತ್ತಳೆಗಳನ್ನು ಓದಿ, ಸಾರ್ವಜನಿಕರು ಹರಿಜನರ ನಿಧಿಗಾಗಿ ಒಂದು ಸಾವಿರ ರೂಪಾಯಿಗಳನ್ನು ಅರ್ಪಿಸಿದರು.

ಇದರಿಂದ ಗಾಂಧೀಜಿಯವರು ಸಾರ್ವಜನಿಕರನ್ನು ಭಾಷಣದಲ್ಲಿ ಅಭಿನಂದಿಸಿದರು.[೧೯] ಈ ಸಂದರ್ಭದಲ್ಲಿ ತುಮಕೂರಿನ ಕೆ. ನಾರಾಯಣ ಶೆಟ್ಟರು ಸ್ವಾಗತ ಸಮಿತಿಯ ಅಧ್ಯಕ್ಷರಾಗಿ ಅಭಿನಂದನಾ ಪತ್ರವನ್ನು ಅರ್ಪಿಸಿ, ಹರಿಜನೋದ್ಧಾರಕ್ಕಾಗಿ ತಮ್ಮ ಕೈಯಿಂದ ಸಾಧ್ಯವಾದಷ್ಟು ಕಿರು ಕಾಣಿಕೆಯನ್ನು ಸಲ್ಲಿಸಿದರು.[೨೦] ಈ ಸಮಾರಂಭದ ಸಮಯದಲ್ಲಿ ತುಮಕೂರು ತಾಲ್ಲೂಕಿನ ಓಬಳಾಪುರ ಗ್ರಾಮದ ಕೆ. ನರಸಿಂಹಯ್ಯನವರು ಸ್ವಯಂ ಸೇವಕರಾಗಿ ಹರಿಜನೋದ್ಧಾರ ಕಾರ್ಯದಲ್ಲಿ ಭಾಗವಹಿಸಿದ್ದರು.[೨೧] ತುಮಕೂರಿನಲ್ಲಿ ಹರಿಜನ ಪ್ರವಾಸ ಮುಗಿಸಿಕೊಂಡು ತುಮಕೂರಿನಿಂದ ಬೆಂಗಳೂರಿಗೆ ಹೋಗುವ ದಾರಿಯಲ್ಲಿ ಕ್ಯಾತ್ಸಂದ್ರದ ಬಳಿ ಸಾರ್ವಜನಿಕರು ಗಾಂಧೀಜಿಯವರನ್ನು ತಡೆದು ಹರಿಜನರಿಗಾಗಿ ನಿಧಿಯನ್ನು ಸಮರ್ಪಿಸಿದರು. ಈ ಸಂದರ್ಭದಲ್ಲಿ ಕೆ.ಎಸ್. ಸಿದ್ದಪ್ಪದೇವರು ಮತ್ತು ಕೆ.ಎಸ್. ರಾಜಪ್ಪನವರು ಕ್ಯಾತ್ಸಂದ್ರದ ಹರಿಜನರ ಕಾಲೋನಿಗೆ ಗಾಂಧೀಜಿಯವರನ್ನು ಭೇಟಿ ಮಾಡಲು ಕೇಳಿದರು. ಆದರೆ ಅವರು ಅನಾರೋಗ್ಯದಿಂದ ಅಸ್ವಸ್ಥರಾಗಿದ್ದರಿಂದ ಭೇಟಿ ನೀಡಲು ಆಗಲಿಲ್ಲ. ಆಗ ಗಾಂಧೀಜಿಯವರು ಹೂವು, ಹಣ್ಣು ಹಂಪಲುಗಳನ್ನು ಹರಿಜನರಿಗೆ ಕೊಡಲು ಕೆ.ಎಸ್. ಸಿದ್ದಪ್ಪದೇವರು ಅವರಿಗೆ ಕೊಟ್ಟು ಆಶೀರ್ವಾದ ಮಾಡಿದರು.[೨೨] ಗಾಂಧೀಜಿಯವರ ಹರಿಜನರ ಪ್ರವಾಸ ಕೈಗೊಂಡು ತುಮಕೂರಿಗೆ ಭೇಟಿ ನೀಡಿದ ನಂತರ ಜಿಲ್ಲೆಯ ಕೆಲವು ಸಂಘಸಂಸ್ಥೆಗಳು ಹರಿಜನಾಭಿವೃದ್ಧಿಗೆ ಹೆಚ್ಚಿನ ಬೆಂಬಲ ತೋರಿದವು. ಮಧುಗಿರಿಯಲ್ಲಿ ನಂಜಯ್ಯಶೆಟ್ಟರ ನಾಯಕತ್ವದಲ್ಲಿ ವಣಿಕವೃಂದ ಸಂಘವು ಗಾಂಧೀವಾದಿಗಳಿಗೆ, ಅಸ್ಪೃಶ್ಯತಾ ನಿವಾರಣೆಗೆ ಸಹಕರಿಸಲು ತಮ್ಮ ಬೆಂಬಲ ನೀಡುತ್ತಿತ್ತು. ಈ ಸಂಘಕ್ಕೆ ಎ.ವಿ. ವೆಂಕಟಸುಬ್ಬಯ್ಯ, ಶ್ಯಾಮಶಾಸ್ತ್ರಿ ಮತ್ತು ಕೆ. ಸುಬ್ಬರಾಯರು ಮಾರ್ಗದರ್ಶಕರಾಗಿದ್ದರು.[೨೩]

೧೯೩೪ರಲ್ಲಿ ಗಾಂಧೀಜಿ ತುಮಕೂರಿಗೆ ಭೇಟಿ ನೀಡಿದಾಗ ಸಿ.ಟಿ. ಹನುಮಂತಯ್ಯ ಎಂಬುವರು ನೆಲಗಡಲೆಯ ಹಾರ ಅರ್ಪಿಸಿದರು. ಇದರಿಂದ ಸಂತೋಷಗೊಂಡ ಗಾಂಧೀಜಿ ಇವರನ್ನು "ಮೈಸೂರಿನ ಹನುಮಾನ್" ಎಂದೂ ಕರೆದರು. ಅಲ್ಲದೆ ಬಡವರ ದಲಿತರ ಸೇವೆಯನ್ನು ಹನುಮಂತನಂತೆ ಮಾಡಬೇಕು ಎಂದು ಮೆಚ್ಚಿಗೆ ವ್ಯಕ್ತಪಡಿಸಿದರು. ಇದರಿಂದ ಪ್ರೇರಿತರಾದ ಇವರು ಜಿಲ್ಲೆಯ ಹರಿಜನರ ಅಭಿವೃದ್ಧಿಗಾಗಿ ತಮ್ಮ ಇಡೀ ಜೀವನವನ್ನೆಲ್ಲಾ ಮುಡುಪಾಗಿಟ್ಟು ದುಡಿದರು. ಇವರನ್ನು ಕೋಡಿಹಳ್ಳಿ ಹರಿಜನ ಮಠದ ಸರ್ವಾಧಿಕಾರಿಯನ್ನಾಗಿ ನೇಮಿಸಿದ ನಂತರ ಹರಿಜನರ ಹಿತರಕ್ಷಣೆಗಾಗಿ ಸಮ್ಮೇಳನಗಳನ್ನು ಸಂಘಟಿಸಿ, ಸಂಸ್ಥಾನದ ಕಾಂಗ್ರೆಸ್ ನಾಯಕರಾದ ಕೆ.ಸಿ. ರೆಡ್ಡಿ, ಹೆಚ್.ಸಿ. ದಾಸಪ್ಪ, ಹೆಚ್. ಸಿದ್ದಯ್ಯ, ಮಾಲಿಮರಿಯಪ್ಪ, ಕೆ. ಹನುಮಂತಯ್ಯನವರ ಸಹಕಾರವನ್ನು ಹರಿಜನೋದ್ದಾರಕ್ಕಾಗಿ ಪಡೆಯುತ್ತಿದ್ದರು. ಅಂದು ಅಸ್ಪೃಶ್ಯರಿಗೆ ಸಾರ್ವಜನಿಕ ಸ್ಥಳಗಳಾದ ಬಾವಿ, ಕೆರೆ, ದೇವಸ್ಥಾನ, ಶಾಲೆಗಳಲ್ಲಿ ಮುಕ್ತ ಪ್ರವೇಶಕ್ಕೆ

ಅವಕಾಶವಿರಲಿಲ್ಲ. ಆ ಸಮಯದಲ್ಲಿ ಸಿ.ಟಿ. ಹನುಮಂತಯ್ಯನವರು ೧೯೩೪-೩೫ರಲ್ಲಿ ಜಿಲ್ಲೆಯ ಹಲವು ಕಡೆ ತುಮಕೂರಿನ ಸಿಬಿಯ ನರಸಿಂಹಸ್ವಾಮಿ ದೇವಾಲಯ, ಗುಬ್ಬಿಯಲ್ಲಿ ಗುಬ್ಬಿಯಪ್ಪನ ದೇವಾಲಯ, ಬ್ಯಾಲ್ಯದ ಹನುಮಂತರಾಯನ ದೇವಾಲಯ, ಗೂಳೂರಿನ ವಿನಾಯಕ ದೇವಾಲಯಗಳಿಗೆ ಅಸ್ಪೃಶ್ಯರೊಡನೆ ಪ್ರವೇಶ ಮಾಡಿ ದೇವಾಲಯ ಪ್ರವೇಶ ಚಳವಳಿಯನ್ನು ಜಿಲ್ಲೆಯಲ್ಲಿ ಯಶಸ್ವಿಗೊಳಿಸಿದರು. ಹರಿಜನರು ಇತರ ಹಿಂದೂಗಳಿಗೆ ಸಮಾನರೆಂದು ಅವರಿಗೆ ಅವಕಾಶಗಳು ಸಿಗಬೇಕೆಂದು ಗೂಳೂರಿನಲ್ಲಿ ಸಾರ್ವಜನಿಕವಾಗಿ ಭಾಷಣ ಮಡಿದರು. ಇವರು ಹರಿಜನ ವಿದ್ಯಾರ್ಥಿಗಳ ಸಮಸ್ಯೆಗಳನ್ನರಿತು ತುಮಕೂರು, ಶಿರಾಗಳಲ್ಲಿ ಹರಿಜನ ವಿದ್ಯಾರ್ಥಿಗಳ ಹಾಸ್ಟೇಲ್‌ಗಳನ್ನು ಪ್ರಾರಂಭಿಸಿದರು. ಇವರು ಜಿಲ್ಲೆಯಲ್ಲಿ ಕಾಂಗ್ರೆಸ್ ಕಾರ್ಯಕರ್ತರ ಸಹಾಯದಿಂದ ಹರಿಜನೋದ್ಧಾರಕ್ಕಾಗಿ ಗಣನೀಯ ಸೇವೆಯನ್ನು ಸಲ್ಲಿಸಿದರು. ಆ ಸೇವೆಯ ಸ್ಮರಣಾರ್ಥವಾಗಿ ೧೯೩೬ರಲ್ಲಿ ಚಿಕ್ಕನಾಯಕನಹಳ್ಳಿಯಲ್ಲಿ ನಡೆದ ಹರಿಜನ ಸಮ್ಮೇಳನದಲ್ಲಿ ಇವರಿಗೆ "ಹರಿಜನ ಸಹಾಯ ಕೇಸರಿ" ಎಂಬ ಬಿರುದು, ಬಂಗಾರದ ಪದಕವನ್ನು ನೀಡಿ ಗೌರವಿಸಲಾಯಿತು.[೨೪] ತುಮಕೂರು ಜಿಲ್ಲೆಯ ಟಿ.ಆರ್. ಚನ್ನಿಗರಾಮಯ್ಯನವರು ೧೯೩೬ರಲ್ಲಿ ಮೈಸೂರು ಸಂಸ್ಥಾನದ ಸರ್ಕಾರ ಮತ್ತು ಹರಿಜನ ಸೇವಕ ಸಂಘದ ಪ್ರತಿನಿಧಿಯಾಗಿ ದೆಹಲಿ ಮತ್ತು ಕಲ್ಕತ್ತಗಳಿಗೆ ತೆರಳಿ ಪ್ರತ್ಯೇಕ ಮತದಾರರ ಸಂಘಗಳ ತತ್ವಕ್ಕೆ ವಿರುದ್ಧವಾದ ಜಂಟಿ ಮತದಾರರ ಸಂಘ ಮತ್ತು ಸ್ಥಾನಗಳ ಮೀಸಲಿಡಿಸುವಿಕೆಯ ತತ್ವಕ್ಕೆ ಬೆಂಬಲ ನೀಡಿದರು.[೨೫]

ಮೈಸೂರು ಕಾಂಗ್ರೆಸ್ಸಿನ ದ್ವಿತೀಯ ಅಧಿವೇಶನದಲ್ಲಿ ಅಂಗೀಕೃತವಾದ ನಿರ್ಣಯಗಳನ್ನು ಕಾರ್ಯರೂಪಕ್ಕೆ ತರಲು ರಾಜ್ಯದಾದ್ಯಂತ ೧೮-೫-೧೯೩೭ ರಿಂದ ೨೩-೫-೧೯೩೭ರವರೆಗೆ ಕಾಂಗ್ರೆಸ್ ಸಪ್ತಾಹವನ್ನು ಆಚರಿಸಬೇಕೆಂದು ಕಾಂಗ್ರೆಸ್ ನಿರ್ಧರಿಸಿತು. ಆ ಸಂದರ್ಭದಲ್ಲಿ ತುಮಕೂರು ಜಿಲ್ಲಾ ಕಾಂಗ್ರೆಸ್ ಸಮಿತಿಯು ೧೯-೫-೧೯೩೭ ರಂದು ಹರಿಜನ ಸೇವೆ ಕಾರ್ಯಕ್ರಮವನ್ನು ಹಮ್ಮಿಕೊಂಡಿತು. ಕಾಂಗ್ರೆಸ್ ಕಾರ್ಯಕರ್ತರು ಸಪ್ತಾಹದ ವಿವರಗಳನ್ನು ಶ್ರದ್ಧಾಸಕ್ತಿಯಿಂದ ವಿವರಿಸುತ್ತಾ ಹರಿಜನ ಕೇರಿಗಳಿಗೆ ಭೇಟಿ ನೀಡಿ ಅಸ್ಪೃಶ್ಯತೆಯನ್ನು ನಿವಾರಿಸಬೇಕಾದರೆ, ಹರಿಜನರು ವಿದ್ಯಾವಂತರಾಗಬೇಕು, ಮಧ್ಯಪಾನ ಸೇವಿಸಬಾರದು, ಗೋಮಾಂಸವನ್ನು ತಿನ್ನಬಾರದು ಎಂದು ಪ್ರಚಾರ ಮಾಡುತ್ತಿದ್ದರು. ಅಲ್ಲದೇ ಶುಚಿತ್ವ ಮತ್ತು ಪರಿಸರ ನೈರ್ಮಲ್ಯತೆಯಿಂದ ಇರಬೇಕು ಎಂದು ಕಾಂಗ್ರೆಸ್ ಕಾರ್ಯಕರ್ತರು ಹರಿಜನರಲ್ಲಿ ಅರಿವು ಮೂಡಿಸುತ್ತಿದ್ದರು.[೨೬] ಇದೇ ಸಮಯದಲ್ಲಿ ತುಮಕೂರು ನಗರ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಗಳಾಗಿದ್ದ ಆರ್.ಎಸ್. ಆರಾಧ್ಯರು ಅಸ್ಪೃಶ್ಯತಾ ನಿವಾರಣೆಗಾಗಿ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದರು. ಇದರ ಅಂಗವಾಗಿ ೨೨-೧೦-೧೯೪೧ರಲ್ಲಿ ಹರಿಜನರಿಗೆ ದೇವಾಲಯ ಪ್ರವೇಶ ಚಳುವಳಿಯನ್ನು ಆರಂಭಿಸಿದರು. ಜಿಲ್ಲೆಯಲ್ಲಿರುವ ಸಹಸ್ರಾರು ಹರಿಜನರು

ಉಳಿದ ಅಸಂಖ್ಯಾತ ಸವರ್ಣೀಯರೊಡನೆ ಕೂಡಿ ಬಾಳಬೇಕು ಎಂದು ಜನತೆಯಲ್ಲಿ ಮನವಿ ಮಾಡಿಕೊಂಡಿದ್ದರು. ಪತ್ರಿಕೆ, ಕರಪತ್ರಗಳ ಮೂಲಕ ಅಸ್ಪೃಶ್ಯತಾ ನಿವಾರಣೆಗಾಗಿ ಸಾರ್ವಜನಿಕರನ್ನು ನಿವೇದಿಸಿಕೊಂಡಿದ್ದರು. ಇದು ಅಲ್ಲದೆ ಆರ್.ಎಸ್. ಆರಾಧ್ಯರು ೧-೧೧-೧೯೪೧ರಂದು ಎಂ.ವಿ. ರಾಮರಾಯರ ಅಧ್ಯಕ್ಷತೆಯಲ್ಲಿ ತುಮಕೂರು ನಗರ ಕಾಂಗ್ರೆಸ್ ಸಭೆಯನ್ನು ಕರೆದು, ತುಮಕೂರಿನ ಹರಿಜನ ಕಾಲೋನಿಯಲ್ಲಿ ಪುಸ್ತಕ ಭಂಡಾರವನ್ನು ಆರಂಭಿಸಿದರು. ಇವರು ಅಸ್ಪೃಶ್ಯರಲ್ಲಿ ಅಕ್ಷರಜ್ಞಾನ, ವ್ಯವಹಾರಜ್ಞಾನವನ್ನು ಬೆಳೆಸಲು ಪ್ರಯತ್ನಿಸಿದರು.[೨೭]

ಜಿಲ್ಲೆಯ ಇನ್ನೊಬ್ಬ ಹರಿಜನ ನಾಯಕರಾದ ಹೆಚ್.ಎಂ. ಗಂಗಾಧರಯ್ಯನವರು ಗಾಂಧೀಜಿ, ಅಂಬೇಡ್ಕರ್‌ರವರ ಕೃತಿಗಳಿಂದ ಪ್ರಭಾವಿತರಾಗಿ ಅಸ್ಪೃಶ್ಯತೆಯ ನಿವಾರಣೆಗಾಗಿ ತುಮಕೂರು ತಾಲ್ಲೂಕಿನ ಗೊಲ್ಲಹಳ್ಳಿಯ ಸುತ್ತಮುತ್ತಲಿನ ಹಳ್ಳಿಗಳಿಗೆ ಭೇಟಿ ನೀಡಿ ಹರಿಜನರು ತಮ್ಮ ಮಕ್ಕಳನ್ನು ಶಾಲೆಗಳಿಗೆ ಕಳುಹಿಸಲು ಅವರ ಮೇಲೆ ಪ್ರಭಾವ ಬೀರಿದರು. ೧೯೪೨ರಲ್ಲಿ ದಲಿತ ವಿದ್ಯಾರ್ಥಿಗಳಿಗಾಗಿ ಹರಿಜನರ ವಿದ್ಯಾರ್ಥಿ ನಿಲಯವನ್ನು ಪ್ರಾರಂಭಿಸಿದರು. ಇವರು ೧೯೪೫ರಲ್ಲಿ ನ್ಯಾಯ ವಿಧಾಯಕ ಮೀಸಲು ಕ್ಷೇತ್ರದಿಂದ ಆರಿಸಿ ಬಂದ ನಂತರ ಹರಿಜನರಿಗಾಗಿ ಕೃಷಿ ಕಾಲೋನಿಗಳನ್ನು ಪ್ರಾರಂಭಿಸಿದರು. ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕಿನ ಮೆಕರಳ್ಳಿ ಗ್ರಾಮದ ದಲಿತರಿಗೆ ಅಮೃತ್ ಮಹಲ್ ಕಾವಲಿನಲ್ಲಿ ಜಮೀನನ್ನು ಮಂಜೂರು ಮಾಡಿಸಿದರು. ಅದೇ ರೀತಿಯಾಗಿ ಕುಣಿಗಲ್ಲು ತಾಲ್ಲೂಕು ಗೌಡಗೆರೆಯ ದಲಿತರಿಗೆ ಹೆಚ್ಚು ಆಹಾರ ಬೆಳೆಯುವ ಯೋಜನೆಯಡಿಯಲ್ಲಿ ಜಮೀನನ್ನು ಮಂಜೂರು ಮಾಡಿಸಿದರು. ಇದೇ ತಾಲ್ಲೂಕಿನ ಬೆನವಾರ ಗ್ರಾಮದಲ್ಲಿ ಹರಿಜನರ ಮನೆ ನಿವೇಶನಗಳಿಗಾಗಿ ಜಮೀನನ್ನು ಮಂಜೂರು ಮಾಡಿಸಿದರು. ಅಲ್ಲದೆ ಅಲ್ಲಿನ ಹರಿಜನರಿಗೆ ನಿವೇಶನಗಳನ್ನು ಹಂಚಿಕೆ ಮಾಡಿ ಅವರಿಗೆ ಮನೆಗಳನ್ನು ಕಟ್ಟಿಕೊಳ್ಳಲು ಮರ ಮುಟ್ಟಗಳನ್ನು, ಹೆಂಚುಗಳನ್ನು ಮಂಜೂರು ಮಾಡಿಸಿದರು. ತುಮಕೂರು ತಾಲ್ಲೂಕಿನ ಕೊತ್ತಿಹಳ್ಳಿಯ ದಲಿತರಿಗೆ ನಿವೇಶನಗಳನ್ನು ಹಂಚಿಕೆ ಮಾಡಿಸಿದರು. ಸಿದ್ಧಾರ್ಥ ನಗರದ ದಲಿತರಿಗೆ ಮನೆಗಳನ್ನು ಕಟ್ಟಿಸಿಕೊಟ್ಟು ಕೆಲವರಿಗೆ ಸರ್ಕಾರದಿಂದ ಜಮೀನನ್ನು ಮಂಜೂರು ಮಾಡಿಸಿದರು. ಕುಣಿಗಲ್ ತಾಲ್ಲೂಕಿನ ಎಡೆಯೂರು ಹೋಬಲಿಯ ಕೊಪ್ಪಾ ಗ್ರಾಮದ ದಲಿತರಿಗೆ ವಜಾ ಆಗಿದ್ದ ಜಮೀನನ್ನು ಕಂದಾಯ ಸಚಿವರ ಮೂಲಕ ಮತ್ತೆ ಮಂಜೂರು ಮಾಡಿಸಿದರು. ತುಮಕೂರು ತಾಲ್ಲೂಕು ಮಲ್ಲಸಂದ್ರದ ದಲಿತರಿಗೆ ಅರಣ್ಯ ಇಲಾಖೆಯಿಂದ ಜಮೀನನ್ನು ಮಂಜೂರು ಮಾಡಿಸಿ, ಹಂಚಿಕೆ ಮಾಡಿ ಅವರ ವ್ಯವಸಾಯಕ್ಕೆ ಅನುಕೂಲ ಕಲ್ಪಿಸಿದರು.[೨೮] ಹೀಗೆ ಭೂಮಿಯನ್ನು ಕಲ್ಪಿಸಿಕೊಡುವುದರ ಮೂಲಕ ನಿರ್ಗತಿಕರಾಗಿದ್ದ ದಲಿತರಿಗೆ ಬದುಕಲು ದಾರಿಯನ್ನು ಹೆಚ್.ಎಂ. ಗಂಗಾಧರಯ್ಯನವರು ತುಮಕೂರು

ಜಿಲ್ಲೆಯಲ್ಲಿ ಕಲ್ಪಿಸಿಕೊಟ್ಟಿದ್ದರು. ಈ ರೀತಿ ದಲಿತರು ಆರ್ಥಿಕವಾಗಿ ಪ್ರಬಲರಾಗಲು ಸೇವೆಯನ್ನು ಸಲ್ಲಿಸಿದರು.

ಕುಣಿಗಲ್ಲಿನ ಕಾಂಗ್ರೆಸ್ ನಾಯಕರಾದ ಕೆ.ವಿ. ಕೃಷ್ಣಸ್ವಾಮಿಯವರು ೧೯೪೫ರಲ್ಲಿ ಸ್ಥಳೀಯವಾಗಿ ತಮ್ಮ ಸ್ವಂತ ಖರ್ಚಿನಿಂದ ಹಸ್ತಪತ್ರಿಕೆಗಳ ಪ್ರಕಟಣೆ, ವಿತರಣೆ, ಬಹಿರಂಗ ಸಭೆಗಳನ್ನು ಏರ್ಪಡಿಸುತ್ತಾ ಅಸ್ಪೃಶ್ಯತಾ ನಿವಾರಣೆಯ ಬಗ್ಗೆ ಪ್ರಚಾರ ಮಾಡುತ್ತಿದ್ದರು. ಇದಕ್ಕಾಗಿ ಇವರು ತಿಂಗಳಿಗೆ ೨೫-೩೦ ರೂಪಾಯಿಗಳನ್ನು ಖರ್ಚು ಮಾಡುತ್ತಿದ್ದರು. ಜಿಲ್ಲಾ ಕಾಂಗ್ರೆಸ್ ನಾಯಕರು ಕುಣಿಗಲ್ಲಿಗೆ ಭೇಟಿ ನೀಡಿದಾಗ ತಾಲ್ಲೂಕು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯವರಿಂದ ಎರಡು ಅಥವಾ ಮೂರು ರೂಪಾಯಿಗಳನ್ನು ಹರಿಜನೋದ್ಧಾರಕ್ಕಾಗಿ ವಸೂಲಿ ಮಾಡುತ್ತಿದ್ದರು.[೨೯] ಹರಿಜನರ ಅಭಿವೃದ್ಧಿಯ ಅಂಗವಾಗಿ ತುಮಕೂರು ಸಬ್‌ಡಿವಿಷನ್ ನಿಂದ ೧೯೪೫-೪೬ನೇ ಸಾಲಿನಲ್ಲಿ ಹರಿಜನರ ಕಾಲೋನಿಗಳ ಅಭಿವೃದ್ಧಿಯ, ಶುಚಿತ್ವದ, ನೈರ್ಮಲ್ಯ, ಕೊಳಗೇರಿ ಕೆಲಸಗಳಿಗಾಗಿ ೧,೩೦೦ ರೂಪಾಯಿಗಳನ್ನು ಖರ್ಚು ಮಾಡಲಾಗಿತ್ತು. ಗುಬ್ಬಿ ತಾಲ್ಲೂಕಿನ ಹರಿಜನರ ಅಭಿವೃದ್ಧಿಗಾಗಿ ೧,೯೦೦ ರೂಪಾಯಿಗಳನ್ನು ಮಂಜೂರು ಮಾಡಿಸಲಾಗಿತ್ತು. ಈ ಸಾಲಿನಲ್ಲಿ ಮಧುಗಿರಿಯ ಸಬ್‌ಡಿವಿಷನ್ ನವರು ಹರಿಜನರ ಅಭಿವೃದ್ಧಿಗಾಗಿ ಮಂಜೂರು ಮಾಡಿದ ಎಲ್ಲಾ ಹಣವನ್ನು ಖರ್ಚು ಮಾಡಲಾಗಿತ್ತು. ಜಿಲ್ಲೆಯಲ್ಲಿ ೧೯೪೬-೪೭ನೇ ಸಾಲಿನಲ್ಲಿ ಹರಿಜನೋದ್ಧಾರ ಕಾರ್ಯಗಳಿಗಾಗಿ ೩೨,೦೦೦ ಸಾವಿರ ರೂಪಾಯಿಗಳನ್ನು ಖರ್ಚು ಮಾಡಲಾಯಿತು. ಈ ಮೊತ್ತದಲ್ಲಿ ೮,೦೦೦ ರೂಪಾಯಿಗಳನ್ನು ಹರಿಜನರ ವಾಸಸ್ಥಳಗಳ ಅಭಿವೃದ್ಧಿಗಾಗಿಯೂ, ಉಳಿದ ೨೨,೦೦೦ ಸಾವಿರ ರೂಪಾಯಿಗಳನ್ನು ಹರಿಜನರ ವಸತಿಗಳ ನಿರ್ಮಾಣದ ಕೆಲಸಕಾರ್ಯಗಳಿಗಾಗಿ ಖರ್ಚು ಮಾಡಲಾಗಿದೆ.[೩೦] ತುಮಕೂರಿನ ಹರಿಜನರ ಅಭಿವೃದ್ಧಿಗಾಗಿ ೧೯೪೯ ಏಪ್ರಿಲ್ ೩೧ ರಂದು ಹರಿಜನ ಮಂದಿರವನ್ನು ಮದರಾಸು ಪ್ರಾಂತ್ಯದ ಮಾಜಿ ಮಂತ್ರಿ ಮುನಿಸ್ವಾಮಿಯವರು ಪ್ರಾರಂಭಿಸಿದರು.[೩೧]

ಜಿ.ವಿ. ನಾರಾಯಣ ಮೂರ್ತಿಯವರು ತುಮಕೂರು ಜಿಲ್ಲೆಯಲ್ಲಿ ಹರಿಜನಾಭಿವೃದ್ಧಿ ಕಾರ್ಯದಲ್ಲಿ ಪ್ರಮುಖ ಪಾತ್ರವಹಿಸಿದರು. ಇವರು ಚಿಕ್ಕನಾಯಕನಹಳ್ಳಿಯ ತಾಲ್ಲೂಕಿನ ಹಳ್ಳಿಗಳಲ್ಲಿ ಹರಿಜನರ ಕೇರಿಗಳಿಗೆ ಭೇಟಿ ನೀಡಿ ಅವರಲ್ಲಿ ಸಂಕುಚಿತ ಮನೋಭಾವನೆಯನ್ನು ಹೋಗಲಾಡಿಸಿ, ಹರಿಜನರು ಅಭಿವೃದ್ಧಿಯಾಗಲು ಶಿಕ್ಷಣ ಪಡೆಯಲು ರಾಷ್ಟ್ರೀಯ ವಿದ್ಯಾಪೀಠವನ್ನು ಸ್ಥಾಪಿಸಿದರು. ಇವರು ಅಸ್ಪೃಶ್ಯತಾ ನಿವಾರಣೆಗಾಗಿ ಶ್ರೀರಾಮಸ್ವಾಮಿ ಎಂಬ ಲಾವಣಿಕಾರರಿಂದ ಲಾವಣಿಗಳನ್ನು ಹೇಳಿಸುವುದರ ಮೂಲಕ ಜನರಲ್ಲಿ ಹರಿಜನೋದ್ಧಾರದ ಬಗ್ಗೆ ಅರಿವು ಮೂಡಿಸುತ್ತಿದ್ದರು.[೩೨] ಜಿಲ್ಲೆಯ ಶಿರಾ ತಾಲ್ಲೂಕಿನ ಟಿ. ತಾರೇಗೌಡರು ಹರಿಜನೋದ್ಧಾರದ ಪ್ರಯುಕ್ತವಾಗಿ ೧೯೪೭ ಡಿಸೆಂಬರ್‌ನಲ್ಲಿ ಶಿರಾ ತಾಲ್ಲೂಕಿನ ತಾವರೆಕೆರೆ

ದೇವಸ್ಥಾನ, ಬಂಡೆ ರಂಗನಾಥ ದೇವಸ್ಥಾನಗಳಿಗೆ ಆಗಿನ ಶಿಕ್ಷಣ ಮಂತ್ರಿ ಚೆನ್ನಿಗ ರಾಮಯ್ಯನವರ ನೇತೃತ್ವದಲ್ಲಿ ಊರಿನವರ ಪ್ರೇರಣೆಯಿಂದ ಹರಿಜನರ ಪ್ರವೇಶವನ್ನು ಮಾಡಿಸಿದರು.[೩೩]

ಸ್ವಾತಂತ್ರ್ಯದ ನಂತರವೂ ಸಹಾ ಗಾಂಧೀಜಿಯವರ ಹರಿಜನೋದ್ಧಾರ ಕಾರ್ಯಕ್ರಮವನ್ನು ಯಶಸ್ವಿಗೊಳಿಸಲು ಜಿಲ್ಲೆಯ ಗಾಂಧೀಜಿಯ ಅನುಯಾಯಿಗಳು ಪ್ರಯತ್ನಿಸಿದರು. ಅದರಂತೆಯೇ ಟಿ.ಎ. ದಾಸಪ್ಪ ಎಂಬ ಹರಿಜನ ವ್ಯಕ್ತಿ ೧೯೪೮ರಲ್ಲಿ ತಿಪಟೂರಿನ ತಿಪಟೂರಮ್ಮನ ಗ್ರಾಮದೇವತೆಯ ಜಾತ್ರೆಯಲ್ಲಿ ತೇರಿನ ಹಗ್ಗವನ್ನು ಹಿಡಿದು ಎಳೆಯಲು ಪ್ರಯತ್ನಿಸಿದಾಗ ಸವರ್ಣಿಯರು ಇವರ ಮೇಲೆ ಹಲ್ಲೆ ನಡೆಸಿದರು. ಇದರಿಂದ ಕೋಪಗೊಂಡ ದಾಸಪ್ಪನವರು ಅಸ್ಪೃಶ್ಯತೆಯ ವಿರುದ್ಧ ಹೋರಾಡಲು ಮುಂದಾದರು. ಇವರು ಹರಿಜನರ ಅಭಿವೃದ್ಧಿಗಾಗಿ ೧೯೪೯ರ ತಿಪಟೂರಿನ ಮುನ್ಸಿಪಾಲಿಟಿಗೆ ಸ್ಪರ್ಧಿಸಿ ಆಯ್ಕೆಗೊಂಡರು. ಅಂದು ಅಸ್ಪೃಶ್ಯರು ಹಿಂದೂಗಳ ಮನೆಗಳಿಗೆ, ದೇವಾಲಯಗಳಿಗೆ, ಊರಿನ ಮುಖ್ಯ ಬೀದಿಗಳಿಗೆ, ಹೋಟೆಲ್‌ಗಳಿಗೆ ಪ್ರವೇಶಿಸುವಂತಿರಲಿಲ್ಲ. ಇದರಿಂದಾಗಿ ಟಿ.ಎ.ದಾಸಪ್ಪನವರು ತಿಪಟೂರಿನಲ್ಲಿ ಹೋಟೆಲ್ ಪ್ರವೇಶ ಚಳುವಳಿಯನ್ನು ಪ್ರಾರಂಭಿಸಿದರು. ಅಲ್ಲದೆ ಮುನ್ಸಿಪಾಲಿಟಿಯಲ್ಲಿ ಹರಿಜನರೊಂದಿಗೆ ಇತರ ಜಾತಿಯ ಸದಸ್ಯರು ಸಾಮೂಹಿಕವಾಗಿ ಉಪಹಾರ ತಿನ್ನುವ ಪದ್ಧತಿಯನ್ನು ಜಾರಿಗೆ ತರಲು ಹೋರಾಡಿದರು. ಇವರು ತಿಪಟೂರಿನಲ್ಲಿ ಈಗಿರುವ ಗಾಂಧಿ ನಗರದಲ್ಲಿ ಹರಿಜನರಿಗಾಗಿ ನಿವೇಶನಕ್ಕಾಗಿ ಸರ್ಕಾರದಿಂದ ೫ ಎಕರೆ ೨೯ ಕುಂಟೆಗಳ ಭೂಮಿಯನ್ನು ಮಂಜೂರು ಮಾಡಿಸಿದರು. ಆದರೆ ಹರಿಜನರಿಗೆ ಮಂಜೂರು ಮಾಡಿರುವ ಸ್ಥಳ ಎತ್ತರದಲ್ಲಿರುವುದರಿಂದ, ಅಲ್ಲಿ ವಾಸಿಸುವ ಹರಿಜನರ ವಾಸಿಗಳಿಂದ ಊರಿಗೆ ಗಾಳಿ ಬೀಸಿದರೆ ಅಪವಿತ್ರವಾಗುವುದರಿಂದ, ಊರು ಎಂದು ಏಳಿಗೆಯಾಗುವುದಿಲ್ಲವೆಂದು ನಿವೇಶನ ಹಂಚಿಕೆ, ಹಕ್ಕು ಪತ್ರಗಳನ್ನು ವಿತರಣೆ ಮಾಡದೆ ಒಂದು ರೀತಿಯ ಅಸಹಕಾರ ತೋರಲಾಗುತ್ತಿತ್ತು. ಇದರಿಂದ ಮತ್ತೆ ದಾಸಪ್ಪನವರು ಹರಿಜನರನ್ನು ಸಂಘಟಿಸಿ ಒಂದು ಚಳುವಳಿಯನ್ನು ಪ್ರಾರಂಭಿಸಿದರು. ಇದರ ಪರಿಣಾಮವಾಗಿ ಅಂದಿನ ಸಮಾಜ ಕಲ್ಯಾಣ ಸಚಿವರಾಗಿದ್ದ ಹೆಚ್. ಸಿದ್ಧವೀರಪ್ಪನವರು ಬಂದು ಸ್ಥಳ ಪರಿಶೀಲಿಸಿ ಸಮಸ್ಯೆಯನ್ನು ಕೂಲಂಕುಷವಾಗಿ ವಿಚಾರಣೆ ನಡೆಸಿ ನಿವೇಶನ ಹಂಚಲು ಆಜ್ಞೆ ಮಾಡಿದರು. ಇದರ ಫಲವಾಗಿ ೬೦ ಮಂದಿ ವಸತಿಹೀನ ಹರಿಜನರಿಗೆ ೩೯ × ೪೮ ಅಡಿಗಳ ನಿವೇಶನ ನೀಡಿ ಸೌಲಭ್ಯವನ್ನು ದೊರಕಿಸಿದರು. ಈ ಬಡಾವಣೆಗೆ ಮಹಾತ್ಮ ಗಾಂಧೀಜಿಯವರ ಹೆಸರನ್ನು ನಾಮಕರಣ ಮಾಡಲಾಯಿತು. ಈ ಗಾಂಧಿನಗರದಲ್ಲಿ ವಾಸಿಸುತ್ತಿರುವ ಹರಿಜನರಿಗೆ ಬಟ್ಟೆ ತೊಳೆಯಲು, ಪಾತ್ರೆ ತೊಳೆಯಲು, ಕುಡಿಯುವ ನೀರಿಗಾಗಿ ಕೊಳವೆ ಬಾವಿಯನ್ನು ಕೊರೆಯಿಸಲು ಸರ್ಕಾರದ ಮೇಲೆ ಒತ್ತಡ ತಂದು ನೀರಿನ ಸೌಲಭ್ಯ ಒದಗಿಸಿ ಕೊಟ್ಟರು. ೧೯೫೪ರಲ್ಲಿ ರಾಜ್ಯದ ಹರಿಜನ ಸೇವಕ ಸಂಘದ ಅಧ್ಯಕ್ಷರಾಗಿದ್ದ ಬುದ್ಧವೀರಾನಂದ

ಎಂದು ಪ್ರಸಿದ್ಧರಾಗಿದ್ದ ಎಂ.ಹೆಚ್ ಷಾರವರು ಟಿ.ಎ.ದಾಸಪ್ಪನವರಿಗೆ ಹರಿಜನರ ಮೇಲಿನ ಕಳಕಳಿ ಮತ್ತು ಅವರ ಸೇವಾಕಾರ್ಯವನ್ನು ಅರಿತು ರಾಜ್ಯ ಹರಿಜನ ಸೇವಕ ಸಂಘದ ಪ್ರಚಾರಕರನ್ನಾಗಿ ನೇಮಿಸಿದರು. ಈ ಅವಕಾಶವನ್ನು ಉಪಯೋಗಿಸಿಕೊಂಡ ದಾಸಪ್ಪನವರು ತುಮಕೂರು ಜಿಲ್ಲೆಯಲ್ಲಿಯೇ ಅಲ್ಲದೇ ರಾಜ್ಯದಾದ್ಯಂತ ಹರಿಜನೋದ್ಧಾರದ ಬಗ್ಗೆ ಪ್ರಚಾರ ಕೈಗೊಂಡರು. ಈ ಸಮಯದಲ್ಲಿ ಹರಿಜನರಲ್ಲಿ ಅಡಗಿರುವ ಕೀಳು ಭಾವನೆಯನ್ನು ತೊಡೆದು ಹಾಕಲು ಶ್ರಮಿಸಿದರು. ಹರಿಜನರು ಮೊದಲು ಅಕ್ಷರಸ್ಥರಾಗಬೇಕು. ಇದರ ಮೂಲಕವೇ ಅಸ್ಪೃಶ್ಯರ ಏಳ್ಗೆ ಸಾಧ್ಯ ಎಂದು ಸಾರಿದರು. ಹರಿಜನರು ಕೂಡಾ ಮಾನವರೆ, ಅವರಿಗೂ ಬದುಕುವ ಹಕ್ಕಿದೆ, ಎಲ್ಲರಿಗಿರುವಷ್ಟೇ ಸ್ವಾತಂತ್ರ್ಯವಿದೆ. ಎಲ್ಲಾ ಕ್ಷೇತ್ರಗಳಲ್ಲಿಯೂ ಅವರು ಪ್ರವೇಶಿಸಬಹುದು ಎಂದು ಸಭೆ ಸಮಾರಂಭಗಳಲ್ಲಿ ಹರಿಜನೋದ್ಧಾರದ ಬಗ್ಗೆ ಪ್ರಚಾರ ನಡೆಸುತ್ತಿದ್ದರು. ಹರಿಜನರು ದೇವಾಲಯಗಳನ್ನು ಪ್ರವೇಶಿಸುವುದರಿಂದ ದೇವರೇನು ಓಡಿ ಹೋಗುವುದಿಲ್ಲ ಎಂದು ಹರಿಜನರಿಗೆ ಪ್ರಚೋದನೆ ನೀಡಿ ದೇವಾಲಯಗಳನ್ನು ಪ್ರವೇಶಿಸಲು ಹುರಿದುಂಬಿಸುತ್ತಿದ್ದರು. ವಿದ್ಯೆಯ ಮೂಲಕ ಬೆಳಕಿನಲ್ಲಿ ಕವಿದಿರುವ ಕತ್ತಲನ್ನು ದೂಡಿಕೊಳ್ಳಬೇಕು ಎಂಬ ಮಾತಿನಲ್ಲಿ ನಂಬಿಕೆಯನ್ನು ಇಟ್ಟದ್ದ ಟಿ.ಎ. ದಾಸಪ್ಪನವರು ತುಮಕೂರು ಜಿಲ್ಲೆಯ ಹಳ್ಳಿಗಳ ಹರಿಜನರ ಮಕ್ಕಳ ಪರಿಸ್ಥಿತಿಯನ್ನು ಕಂಡು ಮಮ್ಮಲ ಮರುಗಿದರು. ಹರಿಜನರು, ಬಡತನ, ಕೂಲಿ ಮಾಡಿ ಹೊಟ್ಟೆ ಹೊರೆಯುವ, ಹರಿದ ಬಟ್ಟೆ ತೊಡುವ ಸ್ಥಿತಿ, ಅನಕ್ಷರತೆಯಿಂದಾಗಿ ಸರ್ಕಾರಿ ಶಾಲೆಗಳಿದ್ದರೂ, ಹರಿಜನರು ಮಕ್ಕಳನ್ನು ಶಾಲೆಗಳಿಗೆ ಕಳುಹಿಸುತ್ತಿರಲಿಲ್ಲ. ಅಂದು ಹರಿಜನರಿಗೆ ಹೊಟ್ಟಗಿದ್ರೆ ಬಟ್ಟೆಗಿಲ್ಲ, ಬಟ್ಟೆಗಿದ್ರೆ ಹೊಟ್ಟೆಗಿಲ್ಲದ ಪರಿಸ್ಥಿತಿ. ಇದರಿಂದಾಗಿ ಟಿ.ಎ.ದಾಸಪ್ಪನವರು ತಮ್ಮ ಹೆಂಡತಿ ರಾಜಮ್ಮನವರೊಂದಿಗೆ ಸಮಾಲೋಚಿಸಿ ೧೯೫೫ರಲ್ಲಿ ನಿಮ್ನವರ್ಗದ ವಿದ್ಯಾರ್ಥಿ ನಿಲಯವನ್ನು ತಿಪಟೂರಿನಲ್ಲಿ ಪ್ರಾರಂಭಿಸಿದರು. ಈ ವಿದ್ಯಾರ್ಥಿ ನಿಲಯಕ್ಕೆ ಪ್ರಾರಂಭದಲ್ಲಿ ೧೫ ಹರಿಜನ ವಿದ್ಯಾರ್ಥಿಗಳು ಸೇರಿದರು. ಈ ವಿದ್ಯಾರ್ಥಿಗಳ ಹೊಟ್ಟೆಗಾಗಿ ದಾಸಪ್ಪನವರು ಖಾಲಿ ಚೀಲ ಹಿಡಿದು ಬೀದಿ, ಬೀದಿ, ಕೆರೆ, ಕೇರಿ, ಊರೂರು ಸುತ್ತಿ ಭತ್ತ, ರಾಗಿ, ಧಾನ್ಯ, ಧನಿಯ, ದಿನಸಿ ವಸ್ತುಗಳನ್ನು ಸಂಗ್ರಹಿಸಿ ವಿದ್ಯಾರ್ಥಿ ನಿಲಯದ ಪ್ರಗತಿಗೆ ಶ್ರಮಿಸಿದರು. ಇಲ್ಲಿನ ವಿದ್ಯಾರ್ಥಿಗಳಿಗೆ ಊಟ ಬಡಿಸುವುದು, ಸ್ನಾನ ಮಾಡಿಸುವುದು, ಬಟ್ಟೆ ಒಗೆಯಲು ಮಾರ್ಗದರ್ಶನ ನೀಡುವುದು, ಪ್ರತಿದಿನ ಸಾಮೂಹಿಕ ಪ್ರಾರ್ಥನೆ ಮಾಡಿಸುವುದರ ಮೂಲಕ ತಮ್ಮ ಸ್ವಂತ ಮಕ್ಕಳಂತೆ ನೋಡಿಕೊಳ್ಳುತ್ತಿದ್ದರು. ಇಲ್ಲಿನ ವಿದ್ಯಾರ್ಥಿಗಳಿಗೆ ಸಹಪಂಕ್ತಿಭೋಜನ, ಸಾಮೂಹಿಕಅಧ್ಯಯನ, ಕೂಡಿಬಾಳುವ ಗುಣಗಳನ್ನು ಬೆಳೆಸಿದರು. ದಾಸಪ್ಪನವರ ಈ ರೀತಿಯ ಸೇವಾಕಾರ್ಯಗಳನ್ನು ಗಮನಿಸಿದ ಪ್ರಾಥಮಿಕ ಶಿಕ್ಷಣ ರಾಜ್ಯ ನಿರ್ದೇಶಕರಾಗಿದ್ದ ಮುನಿಸ್ವಾಮಿಯವರು ಈ ವಿದ್ಯಾರ್ಥಿ ನಿಲಯಕ್ಕೆ ವಾರ್ಷಿಕವಾಗಿ

ಹನ್ನೆರಡು ಸಾವಿರ ರೂಪಾಯಿಗಳ ಅನುದಾನ ನೀಡಿದರು.[೩೪] ಇಷ್ಟೇ ಅಲ್ಲದೆ ಟಿ.ಎ. ದಾಸಪ್ಪನವರು ಅಖಿಲ ಭಾರತ ಹರಿಜನ ಸೇವಕ ಸಂಘದ ಸದಸ್ಯರಾಗಿಯೂ ಸೇವೆ ಸಲ್ಲಿಸಿದ್ದರು.[೩೫]

೧೯೫೪ ನವೆಂಬರ್ ೨೯ ರಂದು ಜೈನಾಚಾರ್ಯರಾದ ಶ್ರೀ ವಿಜಯಲಕ್ಷ್ಮಣ ಸೂರೀ ಶ್ವಂಜೀಯವರು ತುಮಕೂರಿನಲ್ಲಿ ನಡೆದ ಪತ್ರಿಕಾ ಸಮ್ಮೇಳನವನ್ನು ಉದ್ದೇಶಿಸಿ ಹರಿಜನಾಭಿವೃದ್ಧಿಯ ಬಗ್ಗೆ ತಮ್ಮ ಅಭಿಪ್ರಾಯವನ್ನು ಈ ರೀತಿ ವ್ಯಕ್ತಪಡಿಸಿದರು. ಸವರ್ಣಿಯ ಜನತೆಯು ಹರಿಜನರಿಗಾಗಿ ಅನ್ನ, ಬಟ್ಟೆ, ವಸತಿ, ಮುಂತಾದ ಮೂಲಭೂತ ಸೌಲಭ್ಯಗಳಿಗಾಗಿ ಆರ್ಥಿಕವಾಗಿ ಸಹಾಯ ನೀಡಬೇಕು. ಹರಿಜನರು ತಮ್ಮ ಆತ್ಮವಿಕಾಸಕ್ಕೆ ಹಾಗೂ ತಮ್ಮ ಅಭಿವೃದ್ಧಿಗೆ ಹೆಚ್ಚಿನ ಪ್ರಾಧಾನ್ಯತೆ ನೀಡಬೇಕು ಎಂದು ತಿಳಿಸಿದರು.[೩೬] ೧೯೬೯ರಲ್ಲಿ ತುಮಕೂರಿನಲ್ಲಿ ಎಂ. ಬಸವಯ್ಯನವರು ಬಾಪೂಜಿ ವಿದ್ಯಾ ಸಂಸ್ಥೆಯನ್ನು ಪ್ರಾರಂಭಿಸಿದರು. ಈ ಸಂಸ್ಥೆಯ ಮೂಲಕ ಇವರು ಗಾಂಧೀಜಿಯವರ ಅಸ್ಪೃಶ್ಯತೆಯ ನಿವಾರಣೆಯ ಕಾರ್ಯಕ್ರಮವನ್ನು ಹಮ್ಮಿಕೊಂಡು ಯಶಸ್ವಿಗೊಳಿಸಿದರು. ಈ ವಿದ್ಯಾ ಸಂಸ್ಥೆಯಲ್ಲಿ ಹೆಚ್ಚಾಗಿ ತುಮಕೂರಿನ ನರಸಿಂಹರಾಜ ಕಾಲೋನಿಯ ಹರಿಜನ ವಿದ್ಯಾರ್ಥಿಗಳಿಗೆ ಉಚಿತವಾಗಿ ಶಿಕ್ಷಣ ಸೌಲಭ್ಯವನ್ನು ಕಲ್ಪಿಸಿಕೊಟ್ಟಿದ್ದರು. ಈ ಸಂಸ್ಥೆಯು ಅನಾಥ ಮಕ್ಕಳಿಗೂ ಮತ್ತು ಹರಿಜನ ಮಕ್ಕಳಿಗೂ ವಸತಿ ಸೌಲಭ್ಯ ಕಲ್ಪಿಸಲು ಬಾಪೂಜಿಯವರ ಹೆಸರಿನಲ್ಲಿ "ಬಾಪೂಜಿ ವಿಕಾಸ ಮಂದಿರ" ಎಂಬ ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸಿತು. ಈ ವಿಕಾಸ ಮಂದಿರದಲ್ಲಿ ಯಾವುದೇ ರೀತಿಯ ಜಾತಿ ಭೇದ ಭಾವನೆಗೆ ಅವಕಾಶವಿಲ್ಲ.[೩೭] ಈ ಶಿಕ್ಷಣ ಸಂಸ್ಥೆಯಂತೆ ಜಿಲ್ಲೆಯಲ್ಲಿ ಹರಿಜನರ ಮಕ್ಕಳಿಗಾಗಿ ಶಿಕ್ಷಣ ಸಂಸ್ಥೆಗಳನ್ನು ಗಾಂಧೀಜಿಯವರ ಅನುಯಾಯಿಗಳು ಸ್ಥಾಪಿಸಿದರು. ಇದರಂತೆಯೇ ಬಾಬು ಜಗಜೀವನ್ ರಾಂ, ಆಚಾರ್ಯ ವಿನೋಬಾ ಭಾವೆ, ಜಯ ಪ್ರಕಾಶ ನಾರಾಯಣ ಇವರು "ಅಸ್ಪೃಶ್ಯರಿಗಾಗಿ ಶಾಲೆಯನ್ನು ತೆರೆದು ಶಿಕ್ಷಣ ನೀಡು" ಎಂದು ದಾಸಪ್ಪನವರಿಗೆ ಸಲಹೆ ನೀಡಿದರಿಂದಾಗಿ ೧೯೭೫–೭೬ ನೇ ಸಾಲಿನಲ್ಲಿ ಪ್ರಾಥಮಿಕ, ಪ್ರೌಢಶಾಲೆಗಳನ್ನು ತಿಪಟೂರಿನಲ್ಲಿ ಪ್ರಾರಂಭಿಸಿದರು. ತುಮಕೂರಿನ ನರಸಿಂಹರಾಜ ಕಾಲೋನಿಯಲ್ಲಿ ವಾಸಿಸುತ್ತಿದ್ದ ಹರಿಜನರಲ್ಲಿ ಅಕ್ಷರಸ್ಥರು ತುಂಬಾ ಕಡಿಮೆ ಇದ್ದರು. ಅಜ್ಞಾನ, ಮೂಢನಂಬಿಕೆ, ಬಡತನಗಳಿಂದ ಹರಿಜನರ ಮಕ್ಕಳು ಜೀತದಾಳುಗಳಾಗಿ ಅನ್ಯರ ಮನೆಗಳಲ್ಲಿ ದುಡಿಯುತ್ತಿದ್ದರು. ಹೆಣ್ಣು ಮಕ್ಕಳು ಕೂಲಿ ಮಾಡಿಕೊಂಡು ಜೀವನ ನಡೆಸುತ್ತಿದ್ದರು. ಹೀಗಾಗಿ ಕಾಲೋನಿಯ ಮಕ್ಕಳಿಗೆ ಶಿಕ್ಷಣ ಕೊಡಲು ೧೯೮೦ ಮೇ ನಲ್ಲಿ ಜಯಪ್ರಕಾಶ್ ನಾರಾಯಣರ ಹೆಸರಿನಲ್ಲಿ ಪ್ರಾಥಮಿಕ, ಪ್ರೌಢಶಾಲೆಗಳನ್ನು ಟಿ.ಎ.ದಾಸಪ್ಪನವರು ಪ್ರಾರಂಭಿಸಿದರು.[೩೮] ಈ ರೀತಿಯಾಗಿ ಟಿ.ಎ.ದಾಸಪ್ಪನವರು ಹರಿಜನ ವಿದ್ಯಾರ್ಥಿಗಳ ಶಿಕ್ಷಣದ ಪ್ರಗತಿಗಾಗಿ ಸೇವೆ ಸಲ್ಲಿಸಿದರು.

ಅಸ್ಪೃಶ್ಯತಾ ನಿವಾರಣೆಗಾಗಿ ಜಿಲ್ಲೆಯ ಇನ್ನಿತರ ಗಣ್ಯವ್ಯಾಪಾರಸ್ಥರು, ಕಾಂಗ್ರೆಸ್ಸಿಗರು ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆ. ತಿಪಟೂರಿನ ಪ್ರಮುಖ ವ್ಯಾಪಾರಿಯಾಗಿದ್ದ ಬಿ. ವಿಶ್ವನಾಥ

ಶೆಟ್ಟರು ತಮ್ಮ ವ್ಯಾಪಾರದಲ್ಲಿನ ಆದಾಯದ ಸ್ವಲ್ಪ ಭಾಗವನ್ನು ಹರಿಜನೋದ್ಧಾರ ಕಾರ್ಯಕ್ರಮಗಳಿಗೆ ವಿನಿಯೋಗಿಸುತ್ತಿದ್ದರು.[೬] ಇದೇ ರೀತಿಯಾಗಿ ತಿಪಟೂರಿನ ಪಲ್ಲಾಗಟ್ಟ ಅಡವಪ್ಪನವರು ಹರಿಜನರಾದ ಸರ್ವೋದಯ ಕಾರ್ಯಕರ್ತರಾದ ಟಿ.ಎ. ದಾಸಪ್ಪನವರನ್ನು ತಮ್ಮ ಮನೆಯೊಳಗೆ ಮುಕ್ತವಾಗಿ ಪ್ರವೇಶಿಸುವಂತೆ ಅವಕಾಶ ಕಲ್ಪಿಸಿದರು. ಇದು ಅವರಲ್ಲಿದ್ದ ಅಸ್ಪೃಶ್ಯತಾ ನಿವಾರಣೆಯ ಕಾರ್ಯಕ್ರಮದ ಬಗ್ಗೆ ಇದ್ದ ಕಾಳಜಿಯನ್ನು ತೋರಿಸುತ್ತದೆ.[೧೦]

ಈ ರೀತಿಯಾಗಿ ತುಮಕೂರು ಜಿಲ್ಲೆಯಲ್ಲಿ ಕಾಂಗ್ರೆಸ್ಸಿನ ಕಾರ್ಯಕರ್ತರು, ಹಲವರು ತಾವು ಹರಿಜನರಾಗಿ ಹುಟ್ಟದಿದ್ದರೂ ಅವರ ಕಷ್ಟ ಕಾರ್ಪಣ್ಯಗಳನ್ನು ಅರಿತು ಅವರ ಜೊತೆಗೂಡಿ ಹಲವಾರು ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳುವುದರ ಮೂಲಕ ಜಿಲ್ಲೆಯಲ್ಲಿ ಗಾಂಧೀಜಿಯವರ ಅಸ್ಪೃಶ್ಯತಾ ನಿವಾರಣೆಯ ಅಂಶವನ್ನು ಪ್ರಚಾರ ಮಾಡಿದರು. ಸ್ವಾತಂತ್ರ್ಯಾನಂತರ ಸಮಾಜ ಕಲ್ಯಾಣ ಇಲಾಖೆಯು ಅಸ್ಪೃಶ್ಯತೆಯನ್ನು ನಿವಾರಿಸಲು ಹರಿಜನೋದ್ಧಾರದ ಅಂಗವಾಗಿ ಜಿಲ್ಲೆಯ ಪ್ರತಿಯೊಂದು ತಾಲ್ಲೂಕು, ಹೋಬಳಿ ಕೇಂದ್ರಗಳಲ್ಲಿ ಹರಿಜನ ಮಕ್ಕಳ ವಿದ್ಯಾಭ್ಯಾಸದ ಅಭಿವೃದ್ಧಿಗಾಗಿ ಪ್ರತ್ಯೇಕ ವಸತಿ ವಿದ್ಯಾರ್ಥಿ ನಿಲಯಗಳನ್ನು ವ್ಯವಸ್ಥೆ ಮಾಡಿತು.

ಅಡಿಟಿಪ್ಪಣಿಗಳು

೧. ಚಂದ್ರಶೇಖರ ಎಸ್.(ಸಂ), ಕರ್ನಾಟಕ ಚರಿತ್ರೆ, ಸಂ.೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೭, ಪು.೧೭೬

೨. ಹಾಲಪ್ಪ ಜಿ.ಎಸ್.(ಸಂ), ಹಿಸ್ಟರಿ ಆಫ್ ಫ್ರೀಡಂಮೂಮೆಂಟ್ ಇನ್ ಕರ್ನಾಟಕ, ಸಂ.೨, ಗೌರ್ನಮೆಂಟ್ ಆಫ್ ಮೈಸೂರ್, ೧೯೬೪, ಪು. ೬೩೫

೩. ವೇಮಗಲ್ ಸೋಮಶೇಖರ, ಮಹಾತ್ಮಗಾಂಧೀಜಿ ಮತ್ತು ಅಸ್ಪೃಶ್ಯತೆ, ಗಾಂಧಿ ಅಧ್ಯಯನ ಕೇಂದ್ರ ಮಾಲೆ-೩, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೨೦೦೫, ಪು.೩-೪

೪. ಜ್ಯೂಡಿತ್ ಎಂ. ಬ್ರೌನ್, ಗಾಂಧೀ ಪ್ರಿಸನರ್ ಆಫ್ ಹೋಪ್, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಡೆಲ್ಲಿ, ೧೯೯೨, ಪು.೧೦೧

೫. ಹಾಲಪ್ಪ ಜಿ.ಎಸ್.(ಸಂ), ಪೂರ್ವೋಕ್ತ, ೧೯೬೪, ಪು.೪೩೨

೬. ಗಾಂಧೀ ಎ.ಕೆ., ಕನ್‌ಸ್ಟ್ರಕ್ಟಿವ್ ಪ್ರೋಗ್ರಾಮ್ಸ್ ಇಟ್ಸ್ ಮೀನಿಂಗ್ ಅಂಡ್ ಪ್ಲೇಸ್, ನವಜೀವನ, ಅಹಮದಾಬಾದ್, ೧೯೪೧, ಪುಟ-೮

೭. ಜವರೇಗೌಡ ದೇ.(ಸಂ), ಸರ್ವೋದಯಪಥ, ಜಿ.ವಿ.ನಾ. ಅಭಿನಂದನಾ ಗ್ರಂಥ ಸಮಿತಿ, ಚಿಕ್ಕನಾಯಕನಹಳ್ಳಿ, ೧೯೮೨, ಪು. ೫೧೪

೮. ವಿಶ್ವಕರ್ನಾಟಕ ಪತ್ರಿಕೆ, ದಿನಾಂಕ ೮–೯–೧೯೨೭, [ಕ.ರಾ.ಪ.ಇ.] ಬೆಂಗಳೂರು

೯. ವೀರ ಮುಕ್ತ ಬಿಹಾರಿ, ಹಿಸ್ಟರಿ ಆಫ್ ಹರಿಜನ ಸೇವಕ ಸಂಘ, ದೆಹಲಿ, ೧೯೭೧, ಪು.೧೨೨, ೧೨೩

೧೦. ಹಾಲಪ್ಪ ಜಿ.ಎಸ್.(ಸಂ), ಪೂರ್ವೋಕ್ತ, ೧೯೬೪, ಪು.೪೩೩

೧೧. ಲೀಲಾ ಮಣ್ಣಾಲ, ನಿರಂತರ ಸತ್ಯ, ನಿಸರ್ಗ ಪ್ರಕಾಶನ, ಸಿದ್ಧಾರ್ಥನಗರ, ಮೈಸೂರು, ೨೦೦೧, ಪು.೧೫೬

೧೨. ಜ್ಯೂಡಿತ್ ಎಂ. ಬ್ರೌನ್, ಗಾಂಧೀ ಪ್ರಿಸನರ್ ಆಫ್ ಹೋಪ್, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಡೆಲ್ಲಿ, ೧೯೯೨, ಪು.೨೬೯

೧೩. ಸಿದ್ದವ್ವನಹಳ್ಳಿ ಕೃಷ್ಣಶರ್ಮ(ಸಂ), ಗಾಂಧೀ ಮತ್ತು ಕರ್ನಾಟಕ, ಗಾಂಧೀ ಸ್ಮಾರಕ ನಿಧಿ, ಬೆಂಗಳೂರು, ೧೯೬೯, ಪು.೧೯೩

೧೪. ಮಾದೇವ್ ಭರಣಿ, ಶಿಕ್ಷಣ ಭೀಷ್ಮ ಸಿದ್ಧಾರ್ಥ ಶಿಕ್ಷಣ ಸಮಿತಿ, ಸಿದ್ಧಾರ್ಥ ನಗರ, ತುಮಕೂರು, ೧೯೯೪, ಪು.೨೯

೧೫. ಜೆ.ಸಿ. ಭಾಗೀರಥಮ್ಮನವರೊಂದಿಗೆ ನಡೆಸಿದ ಸಂದರ್ಶನ ದಿನಾಂಕ ೧೫–೨–೨೦೦೭, ತುಮಕೂರು

೧೬. ಸಿದ್ದವ್ವನಹಳ್ಳಿ ಕೃಷ್ಣಶರ್ಮ(ಸಂ), ಪೂರ್ವೋಕ್ತ, ೧೯೬೯, ಪು.೧೯೪

೧೭. ಸೂರ್ಯನಾಥ ಕಾಮತ್(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು ಸಂ.೨, ಗೀತಾ ಬುಕ್ ಹೌಸ್, ಮೈಸೂರು, ೧೯೭೭, ಪು.೫೦೯

೧೮. ದಿ ಕಲೆಕ್ಟೆಡ್ ವರ್ಕ್ಸ್ ಆಫ್ ಮಹಾತ್ಮಗಾಂಧಿ, ಸಂ.೫೬, ನವಜೀವನ, ಅಹಮದಾಬಾದ್, ೧೯೪೭, ಪು.೪೩೭–೪೩೮

೧೯. ಸಿದ್ದವ್ವನಹಳ್ಳಿ ಕೃಷ್ಣಶರ್ಮ(ಸಂ), ಪೂರ್ವೋಕ್ತ, ೧೯೬೯, ಪು.೨೩೪–೨೩೫

೨೦. ನಂಜುಂಡಸ್ವಾಮಿ ಬಿ.(ಸಂ), ಧಾನ್ಯಲಕ್ಷ್ಮಿ ವಜ್ರ ಮಹೋತ್ಸವದ ಸ್ಮರಣ ಸಂಚಿಕೆ ೧೯೨೬–೨೦೦೧, ತುಮಕೂರು, ೨೦೦೧, ಪು.೧

೨೧. ಭಾಸ್ಕರಪ್ಪ ಸಿ.ಎನ್(ಸಂ), ತುಮಕೂರು ಜಿಲ್ಲಾದರ್ಶನ, ಟೈಮ್ಸ್ ಪಬ್ಲಿಕೇಷನ್ಸ್, ತುಮಕೂರು – ೧೯೮೧, ಪು.೩೩೬

೨೨. ಪುಟ್ಟಗಂಗಮ್ಮ ಬಿ.ಆರ್., ಕೆ.ಎಸ್. ರಾಜಪ್ಪನವರ ಜೀವನ ಚರಿತ್ರೆ, ಸಾಧನೆ ಮತ್ತು ಸಿದ್ಧಿ ಬೆಂಗಳೂರು, ೨೦೦೧, ಪು.೧೧೧

೨೩. ಮಾಲಿಮುದ್ದಣ, ಮಾಲಿಮರಿಯಪ್ಪ, ಸಾಹಿತ್ಯಾಲಯ, ಗಾಂಧೀನಗರ, ತುಮಕೂರು, ೧೯೬೯, ಪು.೩೬

೨೪. ಸೂರ್ಯನಾಥ ಕಾಮತ್(ಸಂ), ಪೂರ್ವೋಕ್ತ, ೧೯೭೭ ಪು. ೫೦೯

೨೫. ಅದೇ, ಪು.೫೦೯

೨೬. ಮೈಸೂರು ಕಾಂಗ್ರೆಸ್ ಸಪ್ತಾಹದ ವರದಿ, ಕಡತದ ಸಂಖ್ಯೆ ೮೩೦/೧೨/೧೯೩೯/ ದಿನಾಂಕ: ೩-೭-೧೯೩೯ [ಕ.ರಾ.ಪ.ಇ.] ಬೆಂಗಳೂರು

೨೭. ಕವಿತಾಕೃಷ್ಣ, ಸ್ವಾತಂತ್ರ್ಯ ಶ್ರೀ, ಕವಿತಾ ಪ್ರಕಾಶನ, ಕ್ಯಾತ್ಸಂದ್ರ, ತುಮಕೂರು, ೧೯೯೦, ಪು.೨೮-೨೯

೨೮. ಮಾದೇವ್ ಭರಣಿ, ಪೂರ್ವೋಕ್ತ, ೧೯೯೪, ಪು. ೬೨-೬೯

೨೯. ಸೂರ್ಯನಾಥ ಕಾಮತ್(ಸಂ), ಪೂರ್ವೋಕ್ತ, ೧೯೭೭, ಪು.೫೦೩

೩೦. ನಟರಾಜನ್ ಸಂಗ್ರಹ, ತುಮಕೂರು ಕೈಪಿಡಿ, ಖಾಸಗಿ ದಾಖಲೆ, [ಕ.ರಾ.ಪ.ಇ.] ಬೆಂಗಳೂರು, ಪು.೧೨೬

೩೧. ಸತ್ಯವಾದಿ ಪತ್ರಿಕೆ, ದಿನಾಂಕ ೪-೫-೧೯೪೬, [ಕ.ರಾ.ಪ.ಇ.] ಬೆಂಗಳೂರು

೩೨. ಜವರೇಗೌಡ ದೇ.(ಸಂ), ಪೂರ್ವೋಕ್ತ, ೧೯೮೨, ಪು.೮೨

೩೩. ಸೂರ್ಯನಾಥ ಕಾಮತ್(ಸಂ), ಪೂರ್ವೋಕ್ತ, ೧೯೭೭, ಪು. ೪೭೭

೩೪. ಕವಿತಾಕೃಷ್ಣ, ಸರ್ವೋದಯಕಿರಣ ಟಿ.ಎ.ದಾಸಪ್ಪ, ರಾಕ್‌ಲೈನ್ ಪ್ರಕಾಶನ, ತುಮಕೂರು, ೨೦೦೧, ಪು.೧೪-೨೧, ೩೩-೩೭

೩೫. ಭಾಸ್ಕರಪ್ಪ ಸಿ.ಎನ್.(ಸಂ), ಪೂರ್ವೋಕ್ತ, ೧೯೮೧, ಪು.೫೫೪

೩೬. ಸತ್ಯವಾದಿ ಪತ್ರಿಕೆ, ದಿನಾಂಕ: ೨೦-೧೧-೧೯೫೪, [ಕ.ರಾ.ಪ.ಇ.] ಬೆಂಗಳೂರು

೩೭. ಬಾಪೂಜಿ ವಿದ್ಯಾ ಸಂಸ್ಥೆಯ ಪ್ರಾಂಶುಪಾಲರಾದ ಡಿ.ಎಚ್. ಗೌರಮ್ಮನವರೊಂದಿಗೆ ನಡೆಸಿದ ಸಂದರ್ಶನ, ದಿನಾಂಕ ೩೦-೩-೨೦೦೭, ತುಮಕೂರು

೩೮. ಕವಿತಾಕೃಷ್ಣ, ಪೂರ್ವೋಕ್ತ, ೨೦೦೧, ಪು.೪೧

೩೯. ಭಾಸ್ಕರಪ್ಪ ಸಿ.ಎನ್.(ಸಂ), ಪೂರ್ವೋಕ್ತ, ೧೯೮೧, ಪು.೫೩೯

೪೦. ಕವಿತಾಕೃಷ್ಣ, ಪೂರ್ವೋಕ್ತ, ೨೦೦೧, ಪು.೭೯

೪

# ಪಾನ ನಿರೋಧ ಚಳುವಳಿ

ಮತ್ತುಬರಿಸುವ ವಸ್ತುಗಳು ಹಾಗು ಮಾದಕ ಪದಾರ್ಥಗಳು ಯಾವಾಗಲೂ ಸಮಾಜದ ಒಂದು ಪಿಡುಗಾಗಿರುತ್ತವೆ. ಅಲ್ಲದೆ ಬಡವರು ಮತ್ತು ದುರ್ಬಲ ವರ್ಗದವರು ಈ ಚಟಕ್ಕೆ ಬಲಿಯಾಗುತ್ತಾರೆ. ಪಾನ ನಿರೋಧದ ಸಮಸ್ಯೆಯು ಟಿಪ್ಪುಸುಲ್ತಾನನ ಕಾಲದಿಂದಲೂ ಇತ್ತು. ಟಿಪ್ಪು ತನ್ನ ರಾಜ್ಯದಾದ್ಯಂತ ಸಾರಾಯಿ, ಮಧ್ಯದ ಸೇವನೆ, ಗಾಂಜಾ, ಅಫೀಮುಗಳ ಮಾರಾಟವನ್ನು ನಿಷೇಧಿಸಿದನು. ಈ ಮಧ್ಯಪಾನ ನಿಷೇಧವು ೧೭೮೬ ರಿಂದ ೧೭೮೮ ರವರೆಗೂ ಮೈಸೂರು ಸಂಸ್ಥಾನದಾದ್ಯಂತ ಜಾರಿಯಲ್ಲಿತ್ತು. ಸ್ವಾತಂತ್ರ್ಯ ಪೂರ್ವಕ್ಕೆ ಮುನ್ನ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಇದರ ಪರಿಣಾಮಗಳನ್ನು ಗಮನಹರಿಸಿ ಇದರ ನಿರೋಧಕ್ಕೆ ಗಮನಹರಿಸಿತು.[೧]

೧೯೨೦ರ ದಶಕದಲ್ಲಿ ಪಾನ ನಿರೋಧ ಚಳುವಳಿಯ ಬಗ್ಗೆ ಅಸೆಂಬ್ಲಿ ಮತ್ತು ಕೌನ್ಸಿಲ್ ಸಭೆಗಳಲ್ಲಿ ಚರ್ಚೆಯು ನಡೆಯಿತು. ಸರ್ಕಾರಕ್ಕೆ ಸುಮಾರು ಎಪ್ಪತ್ತು ಲಕ್ಷ ರೂ. ಗಳ ಆದಾಯವು ಅಬಕಾರಿ ಸುಂಕದಿಂದ ಬರುತ್ತಿದ್ದರಿಂದ ಇದರ ಬಗ್ಗೆ ವಿರೋಧ ವ್ಯಕ್ತ ಪಡಿಸಲು ಸರ್ಕಾರ ಮುಂದಾಗಲಿಲ್ಲ. ಆದ್ದರಿಂದ ಅಕ್ಷರಸ್ಥರಿಂದ ಈ ಪಾನನಿರೋಧವನ್ನು ಕಡಿಮೆ ಮಾಡಲು ಪ್ರಯತ್ನಗಳು ನಡೆದವು. ಮೈಸೂರಿನ ದಿವಾನರಾದ ಸರ್. ಮಿರ್ಜಾ ಇಸ್ಮಾಯಿಲ್‌ರವರು ಜನತೆಯು ಕುಡಿಯುವುದನ್ನು ಬಿಡಲು ತಯಾರಿದ್ದರೆ, ಸರ್ಕಾರಕ್ಕೆ ಕೋಟಿ ರೂಪಾಯಿಗಳು ನಷ್ಟವಾದರೂ ಸಹಾ ಸಂಸ್ಥಾನದಲ್ಲಿ ಪಾನ ನಿರೋಧವನ್ನು ಜಾರಿಗೆ ತರಲು ಸಿದ್ಧ ಎಂದು ತಮ್ಮ ಒಪ್ಪಿಗೆಯನ್ನು ಸೂಚಿಸಿದರು.[೨] ಮಧ್ಯಪಾನ ವಿಷಯಕ್ಕೆ ಸಂಬಧಿಸಿದ ರಚನಾತ್ಮಕ ಕೆಲಸವನ್ನು ಸಂಸ್ಥಾನದ ವಿವಿಧ ವರ್ಗವು ಸಾಕಷ್ಟು ಪ್ರೋತ್ಸಾಹದಾಯಕವಾಗಿಯೇ ಸ್ವೀಕರಿಸಿತು. ಸಂಸ್ಥಾನದ ಕಾಂಗ್ರೆಸ್ ಕಾರ್ಯಕರ್ತರು ಸಹಾ ಈ ವಿಷಯದಲ್ಲಿ ಸ್ಪಷ್ಟ ಪ್ರತಿಕ್ರಿಯೆಗೆ ಒಳಗಾಗಿ ಖಾದಿ ಪ್ರಚಾರದ ಜೊತೆಯಲ್ಲಿಯೇ ಪಾನ, ನಿರೋಧದ ಬಗ್ಗೆ ಸಲಹೆಯನ್ನು ಜನರಿಗೆ ತಿಳಿಯಪಡಿಸುತ್ತಿದ್ದರು. ಸ್ತ್ರೀಯರು ಸಹಾ ಈ ಕಾರ್ಯದಲ್ಲಿ ಯಶಸ್ವಿಯಾಗಿ ಪಾಲ್ಗೊಂಡರು. ವಿದ್ಯಾರ್ಥಿ ಸಮುದಾಯವು ಪಾನ ನಿರೋಧದ ಅಂಗವಾಗಿ ಮಧ್ಯದ ಅಂಗಡಿಗಳ ಮುಂದೆ

ಯಶಸ್ವಿ ಪಿಕೆಟಿಂಗ್ ಕಾರ್ಯಕ್ರಮಗಳನ್ನು ಸಹ ಹಮ್ಮಿಕೊಂಡಿತು. ಸಂಸ್ಥಾನದ ಸರಕಾರ ಮಾತ್ರ ಈ ವಿಷಯಕ್ಕೆ ಸಂಬಂಧಿಸಿದಂತೆ ಕೇವಲ ಪ್ರಯೋಗಾತ್ಮಕವಾಗಿ ಸ್ಪಂದಿಸಿತು.

ಪಾನ ನಿರೋಧವು ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಒಂದಾಗಿದೆ. ಮಧ್ಯಪಾನ ವ್ಯಸನಕ್ಕೆ ತುತ್ತಾದ ರಾಷ್ಟ್ರಕ್ಕೆ ಆತ್ಮನಾಶವಲ್ಲದೆ ಅನ್ಯಗತಿಯಿಲ್ಲ, ಮದ್ಯಪಾನವು ಕಳುವಿಗಿಂತ, ವ್ಯಭಿಚಾರಕ್ಕಿಂತಲೂ ಹೇಯವಾದದ್ದು, ಮಾದಕ ಪದಾರ್ಥಗಳ ದಾಸರಾದ ಜನತೆ ಪೂರ್ಣ ಸ್ವರಾಜ್ಯವನ್ನು ಎಂದಿಗೂ ಪಡೆಯಲಾರರು. ಹಿಂಸೆಯಿಂದ ಈ ಸುಧಾರಣೆ ಬರಲು ಸಾಧ್ಯವಿಲ್ಲ, ಶಾಶ್ವತ ಆತ್ಮಶ್ರದ್ಧೆ ಹಾಗೂ ಶುದ್ಧತೆಯಿಂದ ಮಾತ್ರ ಸಾಧ್ಯ.[೩] ಎಂದು, ಮಾದಕ ಪದಾರ್ಥಗಳ ಬಲಿಯಲ್ಲಿ ಬಿದ್ದವನಲ್ಲಿ ಮನುಷ್ಯತ್ವ ನಷ್ಟವಾಗುತ್ತದೆಂಬುದು ಮರೆಯಬಾರದು[೪] ಎಂದು ಗಾಂಧೀಜಿಯವರು ನವಭಾರತ ಪತ್ರಿಕೆಯಲ್ಲಿ ಬರೆದರು. ಬೆಂಕಿ ದೇಹವನ್ನು ಮಾತ್ರ ನಾಶ ಮಾಡಿದರೆ ಕುಡಿತ ದೇಹ ಮತ್ತು ಆತ್ಮ ಎರಡನ್ನು ನಾಶ ಮಾಡುವ ಅನಿಷ್ಟ ಶಕ್ತಿ. ಆದುದರಿಂದ ಗಾಂಧೀಜಿಯವರು ಮದ್ಯದ ಅಂಗಡಿಗಳಿಗೆ ಬದಲಾಗಿ ಮಜ್ಜಿಗೆಯ ಅಂಗಡಿಗಳನ್ನು ತೆರೆಯಿರಿ ಎಂದು ಜನತೆಗೆ ಕರೆ ನೀಡಿದ್ದರು.

ಮಹಾತ್ಮ ಗಾಂಧೀಜಿಯವರು ಮದ್ಯಪಾನ ಸೇವನೆಯ ಕಡು ವಿರೋಧಿಯಾಗಿದ್ದರು. ಭವ್ಯ ಸಂಸ್ಕೃತಿಯ ನಾಡಾದ ಭಾರತದಲ್ಲಿ ಮಾದಕ ಪದಾರ್ಥಗಳಿಗೆ ಅವಕಾಶವಿರಕೂಡದು. ಹರಿಜನಾಭಿವೃದ್ಧಿಯಾಗಬೇಕಾದರೆ, ಉತ್ತಮ ನಾಗರಿಕ ಸಂಸಾರಿಕ ವಾತಾವರಣವಿರಬೇಕಾದರೆ ಬೆಳೆಯುತ್ತಿರುವ ಮಕ್ಕಳ ಗುಣ, ಉತ್ಕೃಷ್ಟ ರೂಪ ಪಡೆಯಬೇಕಾದಲ್ಲಿ ಪಾನ ನಿರೋಧವನ್ನು ಕಡ್ಡಾಯವಾಗಿ ಜಾರಿಗೊಳಿಸಬೇಕು[೫] ಎಂಬುದು ಗಾಂಧೀಜಿಯವರ ಅಭಿಪ್ರಾಯವಾಗಿತ್ತು. ಆದುದರಿಂದಾಗಿ ಪಾನ ನಿರೋಧವನ್ನು ತಮ್ಮ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಒಂದಾಗಿ ಹಮ್ಮಿಕೊಂಡಿದ್ದರು. ಅಲ್ಲದೇ ರಾಷ್ಟ್ರೀಯ ಚಳುವಳಿಯ ಜೊತೆಯಲ್ಲಿಯೇ ಪಾನ ನಿರೋಧ ಚಳುವಳಿಯನ್ನು ಭಾರತದಾದ್ಯಂತ ಹಮ್ಮಿಕೊಂಡರು. ಇದರಿಂದ ಸ್ಫೂರ್ತಿ ಪಡೆದ ಕಾಂಗ್ರೆಸ್ ಕಾರ್ಯಕರ್ತರು ಈ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಯಶಸ್ವಿಗೊಳಿಸಿದರು. ಇದೆ ರೀತಿಯಾಗಿ ತುಮಕೂರು ಜಿಲ್ಲೆಯ ಕಾಂಗ್ರೆಸ್ ಕಾರ್ಯಕರ್ತರು ಖಾದಿ ಪ್ರಚಾರದ ಜೊತೆಯಲ್ಲಿಯೇ ಪಾನ ನಿರೋಧ ಚಳುವಳಿಯನ್ನು ಕೈಗೊಂಡು ಯಶಸ್ವಿಗೊಳಿಸಿದರು.

## ೪.೧. ಕಾನೂನು ಭಂಗ ಚಳುವಳಿಯ ಸಮಯದಲ್ಲಿ ತುಮಕೂರು ಜಿಲ್ಲೆಯಲ್ಲಿ ಪಾನ ನಿರೋಧ ಚಳುವಳಿ

೧೯೩೦ ಮಾರ್ಚ ೩೦ ಗಾಂಧೀಜಿಯವರು ದಂಡಿ ಸತ್ಯಾಗ್ರಹವನ್ನು ಪ್ರಾರಂಭಿಸಿದರು. ಈ ಸತ್ಯಾಗ್ರಹವು ದೇಶದ ಮೂಲೆ ಮೂಲೆಗೂ ಹರಡಿತು. ಉಪ್ಪಿನ ಕಾನೂನನ್ನು ಮುರಿಯುವುದು,

ಅರಣ್ಯ ಕಾನೂನನ್ನು ಮುರಿಯುವುದು, ಪಾನ ನಿರೋಧ ಮುಂತಾದ ಕಾರ್ಯಗಳಲ್ಲಿ ದೇಶದ ಪ್ರತಿಯೊಂದು ಭಾಗದ ಜನತೆಯೂ ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಸ್ತ್ರೀ-ಪುರುಷರಿಬ್ಬರೂ ಸಕ್ರಿಯವಾಗಿ ಭಾಗವಹಿಸಿದರು. ನಾಗರಿಕ ಕಾನೂನು ಭಂಗ ಚಳುವಳಿಯು ಮೈಸೂರು ಸಂಸ್ಥಾನದ ಪ್ರತಿಯೊಂದು ಜಿಲ್ಲೆಯಲ್ಲಿ ಒಂದಲ್ಲ ಒಂದು ರೀತಿಯಲ್ಲಿ ನಡೆದು ಹೋಯಿತು. ಪಾನ ನಿರೋಧ ಚಳುವಳಿಯ ಅಂಗವಾಗಿ ಈಚಲ ಮರಗಳನ್ನು ಕಡಿಯುವುದು, ಸೇಂದಿ ಅಂಗಡಿಗಳ ಮುಂದೆ ಪಿಕೆಟಿಂಗ್ ಕಾರ್ಯ ಹಮ್ಮಿಕೊಳ್ಳುವುದು ಮುಂತಾದ ಪಾನನಿರೋಧ ಚಟುವಟಿಕೆಗಳು ಪ್ರಾರಂಭವಾದವು. ಮೈಸೂರಿನ ಪಾನ ನಿರೋಧ ಮಂಡಲಿ ಬಹಳ ಶ್ರಮವಹಿಸಿ ಪಾನ ನಿರೋಧ ಕಾರ್ಯವನ್ನು ಕೈಗೆತ್ತಿಕೊಂಡಿತು. ಇದೇ ರೀತಿಯಾಗಿ ಪಾನ ನಿರೋಧವನ್ನು ಯಶಸ್ವಿಗೊಳಿಸಬೇಕೆಂಬ ನಿಟ್ಟನಲ್ಲಿ ತುಮಕೂರು ಜಿಲ್ಲೆಯಲ್ಲಿ ಈ ಚಳುವಳಿ ಬಹಳ ಬಿರುಸಿನಿಂದ ನಡೆಯಿತು.

ಪಾನನಿರೋಧ ಚಳುವಳಿಯು ಮೈಸೂರು ಸಂಸ್ಥಾನದಲ್ಲಿಯೇ ಮೊದಲ ಬಾರಿಗೆ ೧೯೩೧-೩೨ ರಲ್ಲಿ ತುಮಕೂರು ಜಿಲ್ಲೆಯಲ್ಲಿ ಪ್ರಾರಂಭವಾಯಿತು. ಈ ಚಳುವಳಿಯನ್ನು ತುಮಕೂರಿಗೆ ಮೂರು ಮೈಲಿ ದೂರದ ಮಧುಗಿರಿಯ ರಸ್ತೆಯಲ್ಲಿರುವ ಯಲ್ಲಾಪುರದ ಹೆಂಡದ ಅಂಗಡಿಯ ಮುಂದೆ ಪಿಕೆಟಿಂಗ್ ನಡೆಸುವುದರ ಮೂಲಕ ಕೆ. ರಂಗೈಯ್ಯಾಂಗಾರ್, ಟಿ. ಸುಬ್ರಮಣ್ಯಂ, ಎಂ.ಎನ್. ವಿಠೋಬರಾವ್, ಎ. ರೇವಣ್ಣ, ಟಿ.ಎಲ್. ಸಂಗಣ್ಣನವರು ಪ್ರಾರಂಭಿಸಿದರು. ದಿನಕ್ಕೆ ನಾಲ್ಕು ಸತ್ಯಾಗ್ರಹಿಗಳಂತೆ ಸುಮಾರು ೧೨೦ ಜನರು ಈ ಪಿಕೆಟಿಂಗ್‌ನಲ್ಲಿ ಭಾಗವಹಿಸಿದ್ದರು. ಇದರಿಂದಾಗಿ ಕುಡಕರ ಸಂಖ್ಯೆ ಕಡಿಮೆಯಾಯಿತು. ಇಲ್ಲಿ ಹೆಂಡ ಕುಡಿಯುತ್ತಿದ್ದ ಕುಡುಕರು ಶೀಸೆಗಳನ್ನು ನೆಲಕ್ಕೆ ಕುಕ್ಕಿ ಇನ್ನು ಮುಂದೆ ಹೆಂಡ ಕುಡಿಯುವುದಿಲ್ಲ ಎಂದು ಪ್ರತಿಜ್ಞೆ ಮಾಡಿ ಹೊರಟು ಹೋದರು. ಇದರಿಂದ ಕೋಪಗೊಂಡ ಸೇಂದಿ ಅಂಗಡಿಗಳ ಮಾಲೀಕರು ಚಳುವಳಿಗಾರರ ಮೇಲೆ ಗೂಂಡಾಗಳನ್ನು ಛೂ ಬಿಟ್ಟು ಹೊಡೆಸುವುದು, ಸೇಂದಿಯನ್ನು ಮೇಲೆರಚಿಸುವುದು, ಮುಂತಾದ ದುಷ್ಕೃತ್ಯಗಳಲ್ಲಿ ತೊಡಗಿದರು. ಸರ್ಕಾರವು ಚಳುವಳಿಯನ್ನು ಹತ್ತಿಕ್ಕುವ ನೆಪದಲ್ಲಿ ಪೋಲೀಸರಿಂದ ಲಾಠಿಚಾರ್ಜ್, ಬೂಟು ಕಾಲಿನ ಹೊಡೆತಗಳಂತಹ ಅವಮಾನವೀಯ ಹಿಂಸೆಗಳನ್ನು ಚಳುವಳಿಗಾರರಿಗೆ ನೀಡುತ್ತಿತ್ತು.[೬] ೧೯೩೧ ಮೇ ೧೨ ರಂದು ತುಮಕೂರು ಜಿಲ್ಲಾ ಪೋಲಿಸ್ ವರಿಷ್ಠರ ಆಜ್ಞೆಯ ಮೇರೆಗೆ ಪಾನ ನಿರೋಧ ಚಳುವಳಿಯ ಸತ್ಯಾಗ್ರಹಿಗಳ ಮೇಲೆ ಲಾಠಿ ಚಾರ್ಜ್ ನಡೆಸಲಾಯಿತು. ಇದರಿಂದಾಗಿ ನಾಯಕರಾದ ಕೆ. ರಂಗೈಯ್ಯಂಗಾರ್, ಸೆಟ್ಲೂರ್, ಚೆಲುವ ಅಯ್ಯಂಗಾರ್ ಇನ್ನು ಮುಂತಾದವರು ಗಾಯಗೊಂಡರು.[೭] ಈ ಪಾನ ನಿರೋಧ ಚಳುವಳಿಯ ತಡೆಗಾವಲು ಹಳೆಯ ಮೈಸೂರು ಸಂಸ್ಥಾನದ ನಗರ ಪಟ್ಟಣಗಳಿಗೂ ವ್ಯಾಪಿಸಿತು. ಸಂಸ್ಥಾನದಲ್ಲಿ ಪ್ರಾಯೋಗಿಕವಾಗಿ ಪಾನ

ಪ್ರತಿಬಂಧ, ಜಿಲ್ಲೆಯ ತುಮಕೂರು, ಮಧುಗಿರಿ, ಚಿಕ್ಕನಾಯಕನಹಳ್ಳಿ, ಪಾವಗಡ ತಾಲ್ಲೂಕುಗಳಲ್ಲಿ ತೀವ್ರತರವಾಗಿ ನಡೆದು ಜಿಲ್ಲೆಯ ಈ ಸ್ಥಳಗಳಲ್ಲಿ ಮಧ್ಯದ ಅಂಗಡಿಗಳ ಮುಂದೆ ಪಿಕೆಟಿಂಗ್, ಈಚಲು ಮರಗಳಿಗೆ ಕಟ್ಟಿದ ಪಾನದ ಗಡಿಗೆಗಳನ್ನು ಹೊಡೆದುಹಾಕುವುದು, ಮದ್ಯದ ಗಾಡಿಗಳ ಮೇಲೆ ಹಲ್ಲೆ ನಡೆಸುವುದು ಭರದಿಂದ ಸಾಗಿದವು. ಈ ಚಳುವಳಿಯ ಅಂಗವಾಗಿ ಮಧುಗಿರಿಯ ನಿಟ್ರಹಳ್ಳಿಯಲ್ಲಿ, ಪಾವಗಡ ತಾಲ್ಲೂಕಿನ ಪಳವಳ್ಳಿಯಲ್ಲಿ ಚಳುವಳಿ ಭರದಿಂದ ಸಾಗಿತು.[೮] ಮಧುಗಿರಿ ತಾಲ್ಲೂಕಿನ ನಿಟ್ರಹಳ್ಳಿಯಲ್ಲಿ ಪಾನ ನಿರೋಧ ಚಳುವಳಿಗಾರರಿಗೂ ಮತ್ತು ಮಾಲೀಕರಿಗೂ ನಡುವೆ ತೀವ್ರ ಹೋರಾಟ ನಡೆಯಿತು. ಇದೇ ಅವಕಾಶವನ್ನು ಉಪಯೋಗಿಸಿಕೊಂಡ ಪೋಲೀಸರು ಚಳುವಳಿಕಾರರ ಮೇಲೆ ಲಾಠಿ ಚಾರ್ಜ್ ಮಾಡಿ ಸತ್ಯಾಗ್ರಹಿಗಳನ್ನು ದಸ್ತಗಿರಿ ಮಾಡಿದರು. ಹೀಗೆ ಪಾನ ನಿರೋಧ ಚಳುವಳಿಯಿಂದಾಗಿ ಸರ್ಕಾರದ ಅಧಿಕಾರಿಗಳಿಗೂ ಮತ್ತು ಸತ್ಯಾಗ್ರಹಿಗಳಿಗೂ ಘರ್ಷಣೆಗಳುಂಟಾಗಿ ಸತಾಗ್ರಹಿಗಳು ಶಿಕ್ಷೆಯನ್ನು ಅನುಭವಿಸಬೇಕಾಯಿತು.[೯]

ಪಾನ ನಿರೋಧದ ಅಂಗವಾಗಿ ೧೯೩೨ರಲ್ಲಿ ಪಿ. ಸಣ್ಣಪ್ಪ, ಹನುಮೇಗೌಡ, ನಂಜುಂಡಾ ರಾವ್, ಲಿಂಗಪ್ಪ, ಮುದ್ದವೀರಗೌಡರವರು ಶಿರಾದ ಸೇಂದಿ ಅಂಗಡಿಯ ಮುಂದೆ ಪಿಕೆಟಿಂಗ್ ನಡೆಸುತ್ತಿರುವಾಗ ಕುಡುಕರು ಪಾನಮತ್ತರಾಗಿ ವಾಲಾಡುತ್ತಾ ಇವರ ಹತ್ತಿರಕ್ಕೆ ಬಂದು ಸ್ವಾರೇ ಬುರುಡೆಯಲ್ಲಿನ ಸೇಂದಿಯನ್ನು ಇವರ ಬಾಯಿಯ ಮುಂದೆ ಹಿಡಿದು ನೀವೂ ಕುಡಿಯಿರಿ ಮಜಾ ಹೇಗಿರುತ್ತೋ ನೋಡಿರಿ ಎಂದು ಸತ್ಯಾಗ್ರಹಿಗಳ ಮೇಲೆ ಮದ್ಯವನ್ನು ಚೆಲ್ಲಿದರು. ಅನಂತರ ಇವರು ಶಿರಾ ಹತ್ತಿರದ ಸೇಂದಿ ವನದಿಂದ ಕತ್ತೆಗಳ ಮೇಲೆ ಚರ್ಮದ ಚೀಲಗಳಲ್ಲಿ ತುಂಬಿಕೊಂಡು ಬರುತ್ತಿದ್ದ ಸೇಂದಿ ಚೀಲಗಳನ್ನು ತಿವಿದು ಹೆಂಡ ಸೋರುವಂತೆ ಮಾಡಿದರು. ಇದರಿಂದಾಗಿಯೂ ಸಹಾ ಇವರು ಸೇಂದಿಯ ಮಾಲೀಕರ ಗೂಂಡಾಗಳಿಂದ ಹೊಡೆತವನ್ನು ಅನುಭವಿಸಿದರು.[೧೦]

ತುಮಕೂರು ಜಿಲ್ಲೆಯ ಕಾಂಗ್ರೆಸ್ ಮುಖಂಡರು ಕಾಂಗ್ರೆಸ್ ಸಭೆಗಳನ್ನು ಏರ್ಪಡಿಸಿ ಪ್ರತಿಯೊಂದು ಸಭೆಯಲ್ಲಿ ಪಾನ ನಿರೋಧದ ಬಗ್ಗೆ ಮಾತನಾಡಿ ಜನತೆಗೆ ಅದರಿಂದಾಗುವ ಕೆಟ್ಟ ಪರಿಣಾಮಗಳ ಬಗ್ಗೆ ಅರಿವು ಮೂಡಿಸುತ್ತಿದ್ದರು. ೨೮-೮-೧೯೩೮ ರಂದು ಮಧುಗಿರಿಯಲ್ಲಿ ನಡೆದ ಕಾಂಗ್ರೆಸ್ ಸಭೆಯಲ್ಲಿ ಟಿ. ಸುಬ್ರಮಣ್ಯಂ, ಕೆ.ಟಿ. ಭಾಷ್ಯಂ, ಕೆ. ಹೆಂಜೇರಪ್ಪ, ಮಾಲಿ ಮರಿಯಪ್ಪ ಇವರೆಲ್ಲರೂ ಪಾನ ನಿರೋಧ ಬಗ್ಗೆ ಪ್ರಸ್ತಾಪಿಸಿದರು.[೧೧] ಪಾನ ನಿರೋಧದ ಬಗ್ಗೆ ಜಿಲ್ಲೆಯ ಕಾಂಗ್ರೆಸ್ಸಿಗರೇ ಅಲ್ಲದೇ ಸಂಸ್ಥಾನದ ಕಾಂಗ್ರೆಸ್ ಮುಖಂಡರು ಬಂದು ಉಪನ್ಯಾಸಗಳನ್ನು ನೀಡುತ್ತಿದ್ದರು. ೧೯೩೮ ರಲ್ಲಿ ತುಮಕೂರು ನಗರದ ಕಾಂಗ್ರೆಸ್ ಸಮಿತಿಯು ಸುನಂದಾದೇವಿ ಯವರಿಂದ ಭಾಷಣವನ್ನು ಏರ್ಪಡಿಸಿತ್ತು. ಪ್ರತಿಯೊಂದು ಹಳ್ಳಿಯಲ್ಲಿ ಒಂದೊಂದು ಮದ್ಯದ

ಅಂಗಡಿಗಳಿವೆ. ಆದರೆ ಹಳ್ಳಿಗೊಂದು ಶಾಲೆ ಇಲ್ಲ ಎಂದು ಸರ್ಕಾರವನ್ನು ಟೀಕಿಸಿ ಶಿಕ್ಷಣದ ಮಹತ್ವವನ್ನು ತಿಳಿಸಿ ಪಾನ ನಿರೋಧವನ್ನು ಕೈಗೊಳ್ಳಬೇಕೆಂದು ಪರೋಕ್ಷವಾಗಿ ಹೇಳಿದರು.[೧೨]

ಪಾನ ನಿರೋಧದ ಅಂಗವಾಗಿ ತುಮಕೂರು ಜಿಲ್ಲೆಯ ಮಧುಗಿರಿಯಲ್ಲಿ ೧೯೩೯ ಮೇ ೫ ರಂದು ಚಿಕ್ಕಚೌಡಯ್ಯ, ಗೋವಿಂದಯ್ಯ ಮತ್ತು ರಂಗಪ್ಪ ಎಂಬುವರು ಸೇಂದಿ ಅಂಗಡಿಯ ಮುಂದೆ ಪಿಕೆಟಿಂಗ್ ನಡೆಸಿದ ಆಪಾದನೆಯ ಮೇಲೆ ಇವರಿಗೆ ಮಧುಗಿರಿಯ ನ್ಯಾಯಾಧೀಶರು ತಲಾ ೧೦ ರೂ. ದಂಡ ಇಲ್ಲವೇ ೧೫ ದಿನ ಸಾದಾಶಿಕ್ಷೆಯನ್ನು ವಿಧಿಸಿದರು.[೧೩] ಮೈಸೂರು ಕಾಂಗ್ರೆಸ್‌ನ ಸಪ್ತಾಹದ ಕಾರ್ಯಕ್ರಮಗಳಲ್ಲಿ ಪಾನ ನಿರೋಧವು ಒಂದಾಗಿದ್ದು, ಆದರಂತೆ ತುಮಕೂರು ಜಿಲ್ಲೆಯ ಕಾಂಗ್ರೆಸ್ ಸಮಿತಿಯು ಕಾಂಗ್ರೆಸ್ ಸಪ್ತಾಹದ ಕಾರ್ಯಕ್ರಮಗಳನ್ನು ೧೭-೫-೧೯೩೯ ರಿಂದ ೨೩-೫-೧೯೩೯ ರವರೆಗೆ ಆಚರಿಸಲಾಯಿತು. ಈ ಸಪ್ತಾಹದ ಕಾರ್ಯಕ್ರಮಗಳಿಂದ ಪ್ರೇರಿತರಾದ ಕಾಂಗ್ರೆಸ್ ಕಾರ್ಯಕರ್ತರಾದ ಮಾಗಡಿ ಆದಿರಾಜಯ್ಯನವರು ೨೦-೫-೧೯೩೯ ರಂದು ತುಮಕೂರು ಟೌನಿನಲ್ಲಿರುವ ಮದ್ಯದ ಅಂಗಡಿಗಳ ಮುಂದೆ ಪಿಕೆಟಿಂಗ್ ನಡೆಸಿದ್ದರಿಂದ ಟೌನ್ ಪೋಲಿಸರು ಅವರನ್ನು ದಸ್ತಗಿರಿ ಮಾಡಿದರು. ಈ ಸಮಯದಲ್ಲಿ ಮದ್ಯದ ಅಂಗಡಿಗಳ ಮುಂದೆ ಪಿಕೆಟಿಂಗ್ ನಡೆಸುತ್ತಿದ್ದ ಸುಮಾರು ೧೨೦ ಮಂದಿಯನ್ನು ತುಮಕೂರು ಜಿಲ್ಲೆಯಲ್ಲಿ ದಸ್ತಗಿರಿ ಮಾಡಲಾಯಿತು. ೧೯೩೯ ಮೇ ೨೨ ರಂದು ತುಮಕೂರು ಜಿಲ್ಲಾ ಕಾಂಗ್ರೆಸ್ ಸಮಿತಿಯ ಕಾರ್ಯಕರ್ತರು ಹರಿಜನರ ಕೇರಿಗಳಿಗೆ ಭೇಟಿ ನೀಡಿ ಮೈಸೂರು ಕಾಂಗ್ರೆಸ್‌ನ ಸಪ್ತಾಹದ ವಿವರಗಳನ್ನು ಶ್ರದ್ಧಾಸಕ್ತಿಯಿಂದ ವಿವರಿಸಿ, ಪಾನ ನಿರೋಧಕ್ಕೆ ಹರಿಜನರನ್ನು ಸಹಕರಿಸುವಂತೆ ಕೋರಿ, ಕೆಲವೆಡೆ ಅವರಿಂದ ಮದ್ಯಪಾನ ಮಾಡದಿರುವ ಹಾಗೆ ಪ್ರತಿಜ್ಞೆಯನ್ನು ಮಾಡಿಸಿದರು. ಇದೇ ಸಮಯದಲ್ಲಿ ತುಮಕೂರು ಮತ್ತು ಕ್ಯಾತ್ಸಂದ್ರದಲ್ಲಿ ಸೇಂದಿ ಅಂಗಡಿಗಳ ಮುಂದೆ ಪಿಕೆಟಿಂಗ್ ಯಶಸ್ವಿಯಾಗಿ ನಡೆಯಿತು.[೧೪]

ಜಿಲ್ಲೆಯಲ್ಲಿ ಪಾನ ನಿರೋಧ ಚಳುವಳಿಯು ಖಾದಿ ಪ್ರಚಾರದಷ್ಟು ಸುಲಭವಾಗಿರಲಿಲ್ಲ. ಮಾಲಿಮರಿಯಪ್ಪನವರು ಜಿಲ್ಲೆಯಲ್ಲಿ ಪಾನ ನಿರೋಧದ ಪ್ರಚಾರಕ್ಕೆ ಹೋದ ಕಡೆಯೆಲ್ಲೆಲ್ಲಾ ಸರ್ಕಾರದ ಪ್ರತಿಭಟನೆಯನ್ನು ಮತ್ತು ಸಾರಾಯಿ ಕಂಟ್ರಾಕ್ಟದಾರರುಗಳ ದೌರ್ಜನ್ಯವನ್ನು ಎದುರಿಸಬೇಕಾಯಿತು. ಶಿರಾ ತಾಲ್ಲೂಕಿನ ಬರಗೂರಿಗೆ ಪಟೇಲರಾದ ನರಸಿಂಹಗೌಡರು ಅಬಕಾರಿ ಗುತ್ತಿಗೆದಾರರು. ಮಾಲಿಮರಿಯಪ್ಪನವರು ಬರಗೂರಿನಲ್ಲಿ ಆಗಾಗ ಸಭೆಗಳನ್ನು ಏರ್ಪಡಿಸಿ ತಮ್ಮ ಭಾಷಣದಲ್ಲಿ ಹರಿಜನಾಭಿವೃದ್ಧಿ ಮತ್ತು ಪಾನ ನಿರೋಧದ ಬಗ್ಗೆ ಪ್ರಚಾರ ನಡೆಸುತ್ತಿದರು. ಇದರಿಂದಾಗಿ ಬರಗೂರಿನಲ್ಲಿ ಮತ್ತು ಸುತ್ತಮುತ್ತಲಿನ ಹಳ್ಳಿಗಳಲ್ಲಿ ಮದ್ಯದ ಮಾರಾಟವು ಇಳಿಮುಖವಾಯಿತು. ಇದರಿಂದಾಗಿ ಕೋಪಗೊಂಡ ಪಟೇಲರು ಮಾಲಿಮರಿಯಪ್ಪ ನವರ ಭಾಷಣಗಳನ್ನು ನಿಷೇಧಿಸಿ, ಇವರ ಸಭೆಗಳಿಗೆ ಸುತ್ತಮುತ್ತಲಿನ ಹಳ್ಳಿಗಳ ಜನರು

ಹೋಗಬಾರದೆಂದು ಕಟ್ಟಾಜ್ಞೆಯನ್ನು ವಿಧಿಸಿದರು. ಆದರೆ ಒಮ್ಮೆ ಮದ್ಯಪಾನ ನಿರೋಧದ ವಿಷಯವನ್ನು ಬರಗೂರಿನಲ್ಲಿ ತಮಟೆಯನ್ನು ಹೊಡೆದು ಸುದ್ದಿ ಸಾರಿಕೊಂಡು ಬರಲು ಯಾರು ಮುಂದೆ ಬರಲಿಲ್ಲ. ಆಗ ಪಟೇಲರ ಹಿರಿಯ ಮಗನಾದ ಬಿ.ಎನ್.ರಾಮೇಗೌಡರು ತಮಟೆಯನ್ನು ಹೆಗಲಿಗೆ ಹಾಕಿಕೊಂಡು ಪಾನ ನಿರೋಧದ ವಿಷಯವನ್ನು ಸಾರುತ್ತಾ ಊರೆಲ್ಲ ಸುತ್ತಿಕೊಂಡು ಬಂದು ಪಟೇಲರ ಮನೆಯ ಮುಂದೆ ಐದು ನಿಮಿಷಗಳು ತಮಟೆಯನ್ನು ಬಾರಿಸಿ ಪಾನ ನಿರೋಧ ವಿಷಯವನ್ನು ತಿಳಿಸಿದರು. ಇದರಿಂದಾಗಿ ಬರಗೂರಿನ ಜನತೆಯೆಲ್ಲರೂ ಮಾಲಿಮಾರಿಯಪ್ಪನವರ ಪಾನ ನಿರೋಧ ಸಭೆಗೆ ಹಾಜರಾಗಿದ್ದರು. ಇದೇ ರೀತಿಯಾಗಿ ಮಾಲಿಮರಿಯಪ್ಪನವರು ಪಾನ ನಿರೋಧದ ಬಗ್ಗೆ ಭಾಷಣ ಮಾಡಲು ಪಾವಗಡಕ್ಕೆ ಆಗಮಿಸಿದಾಗ ಅಂದು ಸಹಾ ಪಾವಗಡದ ಅಬ್ಕಾರಿ ಕಂಟ್ರಾಕ್ಟರ್ ಶಂಕರಶೆಟ್ಟಯವರು ಸಭೆಯನ್ನು ಸೇರದಂತೆ ಕಟ್ಟಾಜ್ಞೆಯನ್ನು ವಿಧಿಸಿದರು. ಪಾವಗಡದಲ್ಲಿ ಅಂದು ಪಾನ ನಿರೋಧದ ಬಗ್ಗೆ ಪ್ರಚಾರ ಮಾಡುತ್ತಿದ್ದ ನಿಷ್ಠಾವಂತ ಕಾಂಗ್ರೆಸ್ ಕಾರ್ಯಕರ್ತರಾದ ನಂಜುಂಡರಾಯರಿಗೆ ಹೆಂಡದ ಸ್ನಾನವೇ ಆಯಿತು. ಆದ್ದರಿಂದ ಮಾಲಿಮರಿಯಪ್ಪನವರ ಪಾನ ನಿರೋಧದ ವಿಷಯವನ್ನು ಪಾವಗಡದಲ್ಲಿ ಸಾರಿ ಕೊಂಡು ಬರಲು ಯಾರು ಮುಂದೆ ಬರಲಿಲ್ಲ. ಆಗ ಕಾಂಗ್ರೆಸ್ ಕಾರ್ಯಕರ್ತರು ಏನು ಮಾಡಬೇಕು ಎಂದು ಯೋಚಿಸುತ್ತಿರುವಾಗ ಹರಿಜನ ಮಣೆಗಾರನ ಮಗನಾದ ಅಂಜನಪ್ಪ [ಮಾಜಿ ಶಾಸಕರು] ಎಂಬುವರು ಮುಂದೆ ಬಂದು ತಮಟೆಯನ್ನು ಹೆಗಲಿಗೆ ಹಾಕಿಕೊಂಡು ಪಾನ ನಿರೋಧದ ವಿಷಯವನ್ನು ಪಾವಗಡದಲ್ಲಿ ಸಾರಿಕೊಂಡು ಬಂದು ಕಾಂಗ್ರೆಸ್ಸಿನ ಪಾನ ನಿರೋಧದ ಪ್ರಚಾರ ಕಾರ್ಯಕ್ಕೆ ಅನುವು ಮಾಡಿಕೊಟ್ಟಿದ್ದರು.[೯೫]

ಸಂಸ್ಥಾನದ ಸರ್ಕಾರವು ಪಾನ ನಿರೋಧವನ್ನು ಜಾರಿಗೆ ತರುವಲ್ಲಿ ವಿಫಲವಾಗಿದ್ದರಿಂದ ಮೈಸೂರು ಕಾಂಗ್ರೆಸ್ ನಾಯಕರು ಅರಣ್ಯ ಸತ್ಯಾಗ್ರಹವನ್ನು ಪ್ರಾರಂಭಿಸಲು ತೀರ್ಮಾನ ಕೈಗೊಂಡರು. ಸರ್ಕಾರಿ ಈಚಲ ಮರಗಳನ್ನು ಕಡಿದು ಹೆಂಡ ಸರಬರಾಜು ಆಗದಂತೆ ಮಾಡುವ ಮಹತ್ವದ ಗುರಿಯಿಂದ ಅರಣ್ಯ ಚಳುವಳಿಯನ್ನು ಕೈಗೊಳ್ಳಲಾಯಿತು. ೧೯೩೯ ರ ಈ ಚಳುವಳಿಯೇ ಮೈಸೂರು ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದಲ್ಲಿ ಪ್ರಸಿದ್ಧಿ ಪಡೆದಿರುವ ಅರಣ್ಯ ಸತ್ಯಾಗ್ರಹ. ಇದು ಕರ್ನಾಟಕದಲ್ಲಿ ಮೊದಲು ಚಿತ್ರದುರ್ಗ ಜಿಲ್ಲೆಯ ತುರುವನೂರಿನಲ್ಲಿ ಪ್ರಾರಂಭವಾಯಿತು. ಅನಂತರ ಈ ಚಳುವಳಿಯು ಶಿರಸಿ, ಸಿದ್ಧಾಪುರ, ಚಳ್ಳಕೆರೆ, ಹಿರಿಯೂರು, ಮಲ್ಲಾಡಿಹಳ್ಳಿ, ದಾವಣಗೆರೆ, ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕಿನ ತಾವರೆಕೆರೆ, ಎಲೆಯೂರು, ವಡ್ಡನಹಳ್ಳಿಗಳಿಗೂ ಹರಡಿತು.[೯೬]

ತುಮಕೂರು ಜಿಲ್ಲಾ ಕಾಂಗ್ರೆಸ್ ಸಮಿತಿಯು ಸಹ ಅರಣ್ಯ ಸತ್ಯಾಗ್ರಹವನ್ನು ಪ್ರಾರಂಭಿಸಲು ತೀರ್ಮಾನವನ್ನು ತೆಗೆದುಕೊಂಡಿತು. ಶಿರಾ ತಾಲ್ಲೂಕಿನ ತಾವರೆಕೆರೆ, ಎಲೆಯೂರು, ವಡ್ಡನ

ಹಳ್ಳಿಗಳಲ್ಲಿ ಸರ್ಕಾರದ ವಲಯಕ್ಕೆ ಸೇರಿದ ಈಚಲು ಮರಗಳು ಹೆಚ್ಚಾಗಿದ್ದವು. ಆದ್ದರಿಂದ ಮಾಲಿಮರಿಯಪ್ಪನವರು ೨೮-೯-೧೯೩೮ರಂದು ಈ ಪ್ರದೇಶಗಳಲ್ಲಿ ಅರಣ್ಯ ಸತ್ಯಾಗ್ರಹವನ್ನು ನಡೆಸಬೇಕೆಂದು ತೀರ್ಮಾನಿಸಿದರು.[೧೭] ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕಿನಲ್ಲಿ ನಡೆದ ಅರಣ್ಯ ಸತ್ಯಾಗ್ರಹದ ನಾಯಕತ್ವವನ್ನು ಮಧುಗಿರಿಯ ಮಾಲಿಮರಿಯಪ್ಪನವರು ವಹಿಸಿದ್ದರು. ಇವರು ಜಿಲ್ಲೆಯಲ್ಲೆಲ್ಲಾ ಸಂಚರಿಸಿ ಕಾಂಗ್ರೆಸ್ ಕಾರ್ಯಕರ್ತರೊಡನೆ ಚರ್ಚಿಸಿ, ಭಾಷಣಗಳನ್ನು ಮಾಡಿಹಳ್ಳಿಯ ಯುವಕರನ್ನು ಚಳುವಳಿಯಲ್ಲಿ ಭಾಗವಹಿಸುವಂತೆ ಹುರಿದುಂಬಿಸಿದರು. ಅಲ್ಲದೇ ಅರಣ್ಯ ಸತ್ಯಾಗ್ರಹ ಯಶಸ್ವಿಯಾಗುವಂತೆ ಮಾರ್ಗದರ್ಶನ ನೀಡುವುದು ಇವರ ಮುಖ್ಯ ಕರ್ತವ್ಯವಾಗಿತ್ತು. ಎಲ್ಲೆಡೆಗಳಿಂದ ಸತ್ಯಾಗ್ರಹಿಗಳು ಶಿರಾಕ್ಕೆ ಬರುವುದಕ್ಕೆ ಎಲ್ಲಾ ರೀತಿಯಲ್ಲಿ ವ್ಯವಸ್ಥೆ ಮಾಡಿದರು. ಚಿತ್ರದುರ್ಗದಲ್ಲಿ ಈಗಾಗಲೆ ನಡೆಯುತ್ತಿದ್ದ ಅರಣ್ಯ ಸತ್ಯಾಗ್ರಹದ ರೀತಿನೀತಿಗಳ ಏರ್ಪಾಡುಗಳನ್ನು ತಿಳಿದು ಬರಲು ಲಕ್ಷ್ಮೀಸಾಗರದ ಭೀಮಣ್ಣನವರನ್ನು ಕಳುಹಿಸಿದರು. ಜಿಲ್ಲೆಯ ಸತ್ಯಾಗ್ರಹಿಗಳ ಮುಖ್ಯ ಶಿಬಿರ ಶಿರಾ. ಜಿಲ್ಲೆಯ ಸತ್ಯಾಗ್ರಹಿಗಳೆಲ್ಲಾ ಬಂದು ಬಿಡಾರ ಹೂಡಲು ಶಿರಾದ ಮುಖ್ಯ ಬೀದಿಯಲ್ಲಿ ವ್ಯವಸ್ಥೆ ಮಾಡಿದರು. ಒಂದೊಂದು ಶಿಬಿರಕ್ಕೂ ಬೇಕಾದ ಅನುಕೂಲಗಳನ್ನು ನೋಡಿಕೊಳ್ಳಲು ಕಾರ್ಯಕರ್ತರುಗಳನ್ನು ನೇಮಿಸಿದರು.[೧೮]

ಅರಣ್ಯ ಸತ್ಯಾಗ್ರಹದ ಸಂಘಟನಾಕರರಾದ ಮಾಲಿಮರಿಯಪ್ಪ, ಬಿ.ಸಿ. ನಂಜುಂಡಯ್ಯ, ರೇವಣ್ಣ, ವಿಠೋಬರಾವ್, ಕೆ. ಹೆಂಜೇರಪ್ಪ, ರಾಮೇಗೌಡ, ಬರಗೂರು ರಾಮಣ್ಣ ಮುಂತಾದವರು ಶಿರಾದ ಅರಣ್ಯ ಸತ್ಯಾಗ್ರಹದ ಶಿಬಿರಕ್ಕೆ ಆಗ್ಗಿಂದಾಗೆ ಭೇಟಿ ನೀಡಿ ಸೂಕ್ತ ಸಲಹೆ ಸೂಚನೆಗಳನ್ನು ನೀಡುತ್ತಿದುದ್ದಲ್ಲದೆ ಹಣ, ಧಾನ್ಯ ಸಂಗ್ರಹದ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು. ಅಲ್ಲದೆ ಸಾರ್ವಜನಿಕರನ್ನು ಸತ್ಯಾಗ್ರಹ ಚಳುವಳಿಯಲ್ಲಿ ಭಾಗವಹಿಸುವಂತೆ ಹುರಿದುಂಬಿಸುತ್ತಿದ್ದರು.[೧೯]

ಹೀಗೆ ಶಿರಾ ತಾಲ್ಲೂಕಿನ ತಾವರೆಕೆರೆ, ಎಲೆಯೂರು, ವಡ್ಡನಹಳ್ಳಿಗಳಲ್ಲಿ ಸತ್ಯಾಗ್ರಹ ಶಿಬಿರಗಳು ವ್ಯವಸ್ಥಿತವಾಗಿ ರೂಪಗೊಂಡವು. ೨೯-೯-೧೯೩೮ ರಂದು ಅರಣ್ಯ ಸತ್ಯಾಗ್ರಹವು ಈ ಮೂರು ಪ್ರದೇಶಗಳಲ್ಲಿಯೂ ಪ್ರಾರಂಭವಾಯಿತು. ಮಾಲಿಮರಿಯಪ್ಪನವರು ನಾಲ್ಕು ಜನ ಸತ್ಯಾಗ್ರಹಿಗಳೊಡನೆ ಹಾಸ್ಯದ ಚಟಾಕಿಗಳನ್ನು ಹಾರಿಸುತ್ತಾ ನಗುನಗುತ್ತಾ ಮದದಾನೆಯಂತೆ ಈಚಲು ವನಕ್ಕೆ ನುಗ್ಗಿ ತಾವೇ ತಂದಿದ್ದ ಕೊಡಲಿಯಿಂದ ಈಚಲು ಮರಕ್ಕೆ ಒಂದು ಏಟು ಹಾಕಿ ಅರಣ್ಯ ಸತ್ಯಾಗ್ರಹವನ್ನು ತುಮಕೂರು ಜಿಲ್ಲೆಯಲ್ಲಿ ಪ್ರಾರಂಭಿಸಿದರು. ಇವರ ಜೊತೆಯಲ್ಲಿದ್ದ ಹೆಚ್.ಆರ್. ದಾಸೇಗೌಡ, ಬಿ. ಕೆಂಚಣ್ಣ, ಮಠದ ಬಸವಯ್ಯ ಮತ್ತು ಗಿರಿಯಣ್ಣನವರು ತಮ್ಮ ತಮ್ಮ ಕೊಡಲಿಗಳಿಂದ ಈಚಲು ಮರಗಳನ್ನು ಕಡಿಯ ತೊಡಗಿದರು.[೨೦] ಅದೇ ರೀತಿಯಾಗಿ

ವಡ್ಡನಹಳ್ಳಿಯಲ್ಲಿ ಕೆ. ಹೆಂಜಾರಪ್ಪ ಮೊದಲು ಈಚಲ ಮರವನ್ನು ಕಡಿದು ಅರಣ್ಯ ಸತ್ಯಾಗ್ರಹವನ್ನು ಪ್ರಾರಂಭಿಸಿದರು. ಎಲೆಯೂರಿನಲ್ಲಿ ಬಿ.ಎನ್. ರಾಮೇಗೌಡರು ಮೊದಲು ಈಚಲು ಮರಗಳನ್ನು ಕಡಿದು ಅರಣ್ಯ ಸತ್ಯಾಗ್ರಹ ಚಳುವಳಿಯನ್ನು ಪ್ರಾರಂಭಿಸಿದರು.[೨೧]

ಇದರ ಪರಿಣಾಮವಾಗಿ ಮಾಲಿಮರಿಯಪ್ಪ ಮತ್ತು ಇತರ ನಾಲ್ಕು ಮಂದಿ ಸತ್ಯಾಗ್ರಹಿಗಳನ್ನು ತಾವರೆಕೆರೆಯಲ್ಲಿ ಮೈಸೂರು [೧೯೩೯ ಸೆಪ್ಟೆಂಬರ್ ೨೬ರ] ಸಾರ್ವಜನಿಕ ರಕ್ಷಣಾ ಕಾಯ್ದೆ ೧೪ ರ ಪ್ರಕಾರ ಅಬಕಾರಿ ಇಲಾಖೆಯ ಸಿಬ್ಬಂದಿಯವರು ದಸ್ತಗಿರಿ ಮಾಡಿ ಬಂಧಿಸಿದರು. ಅಲ್ಲದೇ ಅರಣ್ಯ ಸತ್ಯಾಗ್ರಹವನ್ನು ತಡೆಗಟ್ಟಲು ತುಮಕೂರು ಜಿಲ್ಲಾ ಕಾಂಗ್ರೆಸ್ ಸಮಿತಿಯನ್ನು ಕಾನೂನು ಬಾಹಿರ ಎಂದು ಘೋಷಿಸಲಾಯಿತು.[೨೨] ಅಬಕಾರಿ ಪೋಲಿಸರು ಈ ೫ ಜನರನ್ನು ಮತ್ತು ಅವರು ಕಡಿದ ಈಚಲ ಮರಗಳ ತುಂಡುಗಳನ್ನು, ಅವರ ಕೊಡಲಿಗಳನ್ನು, ಎತ್ತಿನ ಗಾಡಿಗಳಲ್ಲಿ ಹೇರಿಕೊಂಡು ಶಿರಾದ ಪುರಸಭೆಯೊಳಗೆ ಕರೆ ತಂದರು. ಆಗ ಪುರಸಭೆಯವರು ಸತ್ಯಾಗ್ರಹಿಗಳಿಗೆ ಹಾರ ಹಾಕಿ ಕಹಳೆ ಕೊಂಬುಗಳೊಂದಿಗೆ ಜಯಕಾರ ಹಾಕುತ್ತಾ ಸ್ವಾಗತಿಸಿದರು. ಮಾಲಿಮರಿಯಪ್ಪನವರನ್ನು ಪೋಲಿಸರು ಜೈಲಿಗೆ ಕರೆದುಕೊಂಡು ಹೋಗುವಾಗ ಶಿರಾದ ಪ್ರೌಢಶಾಲಾ ರಸ್ತೆಯಿಂದ ಹಿಡಿದು ಆಸ್ಪತ್ರೆಯವರೆಗೂ ಬೃಹತ್ ಮೆರವಣಿಗೆಯನ್ನು ನಡೆಸಲಾಯಿತು. ಇವರೊಡನೆ ಉಳಿದ ೩ ಶಿಬಿರಗಳಿಂದ ಬಂಧಿತರಾದ ಒಟ್ಟು ೧೪ ಮಂದಿಗೂ ಮಧುಗಿರಿಯ ಪ್ರಥಮ ದರ್ಜೆ ನ್ಯಾಯಾಧೀಶರು ೬ ತಿಂಗಳು ಕಠಿಣ ಸಜೆ ಹಾಗೂ ೧೫೦ ರೂ. ದಂಡ ವಿಧಿಸಿ ಬೆಂಗಳೂರಿನ ಸೆಂಟ್ರಲ್ ಜೈಲಿಗೆ ರವಾನಿಸಲು ಅನುಮತಿ ನೀಡಿದರು. ಇವರ ಬಂಧನದಿಂದ ಹೋರಾಟ ನಿಲ್ಲಲಿಲ್ಲ. ಚಳುವಳಿಯು ಸುಗಮವಾಗಿ ನಡೆಯಲು ಎಲ್ಲಾ ರೀತಿಯ ವ್ಯವಸ್ಥೆಯನ್ನು ಮಾಡಿದ್ದರು. ಮೂರು ಶಿಬಿರಗಳಲ್ಲಿದ್ದ ಸತ್ಯಾಗ್ರಹಿಗಳು ಪ್ರತಿದಿನ ಸಣ್ಣ ಸಣ್ಣ ತಂಡಗಳಲ್ಲಿ ಹೋಗಿ ಈಚಲ ಮರಗಳನ್ನು ಕಡಿದು ಸತ್ಯಾಗ್ರಹವನ್ನು ಮುಂದುವರೆಸುತ್ತಿದ್ದರು.[೨೩]

ತುಮಕೂರು ಜಿಲ್ಲೆಯಲ್ಲಿನ ಅರಣ್ಯ ಸತ್ಯಾಗ್ರಹದ ಪರ, ಸರ್ಕಾರದ ವಿರುದ್ಧ ಆರ್.ಎಸ್. ಆರಾಧ್ಯರು ತ್ರಿಶೂಲ, ಕಹಳೆ, ಸಮರ, ಕ್ರಾಂತಿ ಮುಂತಾದ ಪತ್ರಿಕೆಗಳನ್ನು ಮತ್ತು ಬುಲೆಟಿನ್ ಮುದ್ರಣವನ್ನು ಗುಟ್ಟಾಗಿ ಪ್ರಾರಂಭಿಸಿ ಸೈಕ್ಲೋಸ್ಟೈಲ್ ಸಂಚಿಕೆಗಳನ್ನು ಬರೆದರು. ೧೯೩೯ ರಲ್ಲಿ ತುಮಕೂರಿನ ಅಂದಿನ ಜಿಲ್ಲಾಧಿಕಾರಿಗಳಾದ ಗುರುದತ್ತರವರಿಗೆ ಅರಣ್ಯ ಸತ್ಯಾಗ್ರಹಿಗಳನ್ನು ಕಂಡರೆ ಆಗುತ್ತಿರಲಿಲ್ಲ. ತಮ್ಮ ಕುಟಲೋಪಾಯದಿಂದ ಸತ್ಯಾಗ್ರಹಿಗಳನ್ನು ಬಗ್ಗುಬಡಿಯುತ್ತಿದ್ದರು. ಇದರಿಂದ ಕೋಪಗೊಂಡ ಆರಾಧ್ಯರು "ಗುರುದತಕ್ ದರ್ಬಾರ್" ಎಂಬ ವಿಶೇಷಾಂಕವನ್ನು ಹೊರಡಿಸಿ, ಅವರ ಹೀನ ಪ್ರವೃತ್ತಿಗಳನ್ನು ಬಯಲಿಗೆಳೆದರು. ಸರ್. ಮಿರ್ಜಾ ಎಂಬ ಸಾಗರದಲ್ಲಿ ಕೆ. ಗುರುದತ್ತ ಎಂಬ ಕಪ್ಪೆಯು ವಾಸ ಮಾಡುತ್ತಾ ಸತ್ಯಾಗ್ರಹಿಗಳ ಮೇಲೆ ಮನಸ್ವೆಚ್ಛಧಿಕಾರ ಚಲಾಯಿಸುತ್ತಿದೆ ಎಂದು ಉಪಮೇಯಗಳ ಮುಖಾಂತರವಾಗಿ ಟೀಕಿಸಿ ಪತ್ರಿಕೆಗಳಲ್ಲಿ ಬರೆದರು.

೨೯-೯-೧೯೩೯ ರಂದು ಪ್ರಕಟವಾದ ಈ ಸೈಕ್ಲೋಸ್ಟೈಲ್ ಸಂಚಿಕೆಗಳು ತರುಣ ಸತ್ಯಾಗ್ರಹಿಗಳ ಮೂಲಕ ತುಮಕೂರು ಜಿಲ್ಲೆಯಾದ್ಯಂತ ಪ್ರಚಾರಗೊಂಡವು. ಇದರ ಸುದ್ದಿ ತಿಳಿದ ಜಿಲ್ಲಾಧಿಕಾರಿಗಳು ಅಪರಾಧಿಗಳ ಶೋಧನೆಗಾಗಿ ಕಟ್ಟಾಜ್ಞೆ ವಿಧಿಸಿದರು. ಸರ್ಕಾರದ ಅತಿ ಎಚ್ಚರಿಕೆಯ ಶೋಧನೆಯಿಂದಾಗಿ ಆರಾಧ್ಯರ ಪತ್ರಿಕೆಗಳ ಮುದ್ರಣದ ರಹಸ್ಯಸ್ಥಾನದ ಮೇಲೆ ಪೋಲಿಸರು ದಾಳಿ ನಡೆಸಿ ಸೈಕ್ಲೋಸ್ಟೈಲ್ ಸಂಚಿಕೆಗಳು ಹಾಗೂ ಯಂತ್ರಸಹಿತವಾಗಿ ಅವರನ್ನು ದಸ್ತಗಿರಿ ಮಾಡಲಾಯಿತು. ವೃತ್ತ ಪತ್ರಿಕಾ ಕಾನೂನಿನ ಪ್ರಕಾರ ಅವರ ವಿರುದ್ಧವಾಗಿ ಮೊಕದ್ದಮೆಯನ್ನು ಹೂಡಲಾಯಿತು. ಆರಾಧ್ಯರು ಮಾಡಿದ ತಪ್ಪನ್ನು ಒಪ್ಪಿಕೊಂಡಿದ್ದರಿಂದ ತುಮಕೂರಿನ ಪ್ರಥಮ ದರ್ಜೆ ನ್ಯಾಯಾಧೀಶರು ಇವರಿಗೆ ೬ ತಿಂಗಳ ಸೆರೆಮನೆ ವಾಸದ ಶಿಕ್ಷೆಯನ್ನು ವಿಧಿಸಿದರು. ಅನಂತರ ಇವರನ್ನು ಶಿವಮೊಗ್ಗ ಜೈಲಿಗೆ ರವಾನಿಸಲಾಯಿತು.[೨೪]

ಶಿರಾದ ಅರಣ್ಯ ಸತ್ಯಾಗ್ರಹದಿಂದ ಪ್ರಭಾವಿತರಾದ ಕೊರಟಗೆರೆ ತಾಲ್ಲೂಕಿನ ತೀತಾ ಗ್ರಾಮದ ಡಿ.ಆರ್. ಮುದ್ದಪ್ಪನವರು ತೀತಾ ಗ್ರಾಮದ ಸೇಂದಿ ಅಂಗಡಿಗಳ ಮುಂದೆ ಯಶಸ್ವಿಯಾಗಿ ಪಿಕೆಟಿಂಗ್ ನಡೆಸಿದರು. ಇದರಿಂದಾಗಿ ಮುಂದೆ ಜಿಲ್ಲಾ ಕಾಂಗ್ರೆಸ್‌ನ ಮುಖ್ಯ ಕಾರ್ಯದರ್ಶಿಯಾದ ಎಸ್. ವಾಸುದೇವರಾಯರು ಇವರನ್ನು ಅರಣ್ಯ ಸತ್ಯಾಗ್ರಹದ ಐದನೆಯ ಸರ್ವಾಧಿಕಾರಿಯಾಗಿ ನೇಮಕ ಮಾಡಿದ ನಂತರ ಇವರು ಅರಣ್ಯ ಸತ್ಯಾಗ್ರಹವನ್ನು ಮುಂದುವರೆಸಿದ್ದರು.[೨೫] ಸೆಪ್ಟೆಂಬರ್ ೩೦ ರಂದು ಅರಣ್ಯ ಸತ್ಯಾಗ್ರಹದಲ್ಲಿ ಪಾಲ್ಗೊಂಡಿದ್ದ ತುಮಕೂರಿನ ಎಂ. ನೀಲಕಂಠರಾಯರು, ಶಿರಾದ ಎ. ಗುಂಡೂರಾವ್, ಚಿಕ್ಕನಾಯಕನಹಳ್ಳಿಯ ಸಿ.ಜೆ. ಮೂರ್ಕಣ್ಣಪ್ಪನವರನ್ನು ಎಲೆಯೂರಿನಲ್ಲಿ ಬಂಧಿಸಲಾಯಿತು. ೧೯೩೯ ಅಕ್ಟೋಬರ್ ೪ ರಂದು ಬರಗೂರಿನ ರಾಮೇಗೌಡ ಮತ್ತು ಕುರುಬರ ಸಿದ್ದಪ್ಪನವರು ಎಲೆಯೂರು, ವಡ್ಡನಹಳ್ಳಿ, ತಾವರೆಕೆರೆಗಳಿಗೆ ಭೇಟಿ ನೀಡಿ ಅಲ್ಲಿನ ಜನತೆಯಲ್ಲಿ ಮದ್ಯಪಾನವನ್ನು ಸೇವಿಸದಂತೆ ಮನವಿ ಮಾಡಿಕೊಂಡರು.[೨೬]

೧೯೩೯ರ ಅಕ್ಟೋಬರ್ ೪ ರಂದು ಸತ್ಯಾಗ್ರಹದ ಸಂಘಟನಾ ಕಾರ್ಯಕರ್ತರಾದ ಬಿ.ಸಿ. ನಂಜುಂಡಯ್ಯ, ರೇವಣ್ಣ, ವಿಠೋಬರಾವ್‌ರವರು ಸತ್ಯಾಗ್ರಹದ ಚಲನವಲನಗಳ ಬಗ್ಗೆ ಸೂಕ್ತ ಸಲಹೆಗಳನ್ನು ನೀಡುತ್ತಿದ್ದರು. ಇದರಿಂದಾಗಿ ಇವರನ್ನು ಮೈಸೂರು ಸಾರ್ವಜನಿಕ ರಕ್ಷಣಾ ಕಾಯ್ದೆ ೧೪ ರನ್ವಯ ಪೋಲಿಸರು ಬಂಧಿಸಿದರು. ಅದೇ ದಿನ ತಾವರೆಕೆರೆಯಲ್ಲಿ ೮ ಜನರು, ಎಲಿಯೂರಿನಲ್ಲಿ ೫ ಜನ, ವಡ್ಡನಹಳ್ಳಿಯಲ್ಲಿ ೪ ಜನರ ಬಂಧನವಾಯಿತು. ೧೯೩೯ ರ ಸೆಪ್ಟೆಂಬರ್ ೨೮ ರಿಂದ ೧೯೩೯ ರ ಅಕ್ಟೋಬರ್ ೧೧ ರವರೆವಿಗೂ ಶಿರಾದ ಅರಣ್ಯ ಸತ್ಯಾಗ್ರಹದಲ್ಲಿ ಭಾಗವಹಿಸಿ ಬಂಧನಕ್ಕೊಳಗಾದವರು ೧೯೮ ಜನ, ಇವರಲ್ಲಿ ೧೬೩ ಜನರಿಗೆ ಶಿಕ್ಷೆಯಾಯಿತು. ೩೫ ಜನರನ್ನು ಎಚ್ಚರಿಸಿ ಬಿಡಲಾಯಿತು.[೨೭] ೧೯೩೯ ಅಕ್ಟೋಬರ್ ೧೯ ರಂದು ಶಿರಾದಲ್ಲಿ ನಡೆಯುತ್ತಿದ್ದ ಅರಣ್ಯ ಸತ್ಯಾಗ್ರಹದಲ್ಲಿ ಪಾಲ್ಗೊಂಡಿದ್ದ ತುಮಕೂರು ಜಿಲ್ಲಾ

ಕಾಂಗ್ರೆಸ್‌ನ ತೃತೀಯ ಸರ್ವಾಧಿಕಾರಿಯೂ ಸೇರಿದಂತೆ ಇತರ ೧೧ ಮಂದಿ ಸತ್ಯಾಗ್ರಹಿಗಳನ್ನು ಬಂಧಿಸಲಾಯಿತು. ಇಲ್ಲಿಯವರೆವಿಗೂ ಅರಣ್ಯ ಸತ್ಯಾಗ್ರಹದಿಂದ ದಸ್ತಗಿರಿಯಾದವರ ಸಂಖ್ಯೆ ೨೪೦ ಮಂದಿಯಾಗಿದ್ದು ಅದರಲ್ಲಿ ೬೪ ಮಂದಿಯನ್ನು ಸೆಂಟ್ರಲ್ ಜೈಲಿಗೆ ರವಾನಿಸಲಾಗಿತ್ತು.[೨೮]

೧೯೩೯ ನವೆಂಬರ ೫ರಂದು ಕೆ.ಪುಟ್ಟಸ್ವಾಮಿ ಜೋಯಿಸ್. ರಾಮಣ್ಣ ಮತ್ತು ಸಿದ್ದಪ್ಪನವರು ಶಿರಾ ತಾಲ್ಲೂಕಿನಾದ್ಯಂತ ಹಣ, ದವಸ, ಧಾನ್ಯಕ್ಕಾಗಿ ಪ್ರವಾಸ ಕೈಗೊಂಡು ಅರಣ್ಯ ಸತ್ಯಾಗ್ರಹಕ್ಕೆ ಸ್ವಯಂ ಸೇವಕರನ್ನು ಹುರಿದುಂಬಿಸುತ್ತಿದ್ದರು. ಆದ್ದರಿಂದ ಇವರನ್ನು ನವೆಂಬರ್ ೬ರಂದು ಮೈಸೂರು ಸಾರ್ವಜನಿಕ ರಕ್ಷಣಾ ಕಾಯ್ದೆಯ ಅನ್ವಯ ಬಂಧಿಸಲಾಯಿತು.[೨೯] ೧೯೩೯ರ ನವೆಂಬರ್ ೨೬ ರಂದು ಅರಣ್ಯ ಸತ್ಯಾಗ್ರಹದಲ್ಲಿ ಭಾಗವಹಿಸಿದ ವೆಂಕಟಪ್ಪ ಅಮ್ಮತೂರು, [ಕುಣಿಗಲ್ಲು ತಾಲ್ಲೂಕು] ಎ. ನಂಜಪ್ಪ ಮತ್ತು ಎ. ಚಿಕ್ಕಣ್ಣ [ಕೊರಟಗೆರೆ ತಾಲ್ಲೂಕು] ಈ ಮೂವರನ್ನು ನವೆಂಬರ್ ೨೭ ರಂದು ಬಂಧಿಸಲಾಯಿತು. ಆದುದರಿಂದ ನವೆಂಬರ್ ೩೦ ರಂದು ಅರಣ್ಯ ಸತ್ಯಾಗ್ರಹದ ನಾಯಕತ್ವವನ್ನು ಕುಣಿಗಲ್ಲಿನ ಸುಂದರರಾಜ ಆಯ್ಯಂಗಾರ್‌ರವರು ವಹಿಸಿಕೊಂಡು ಮುಂದುವರೆಸಿದರು.[೩೦] ಹೀಗೆ ಸತ್ಯಾಗ್ರಹಿಗಳು ಅರಣ್ಯಗಳಿಗೆ ನುಗ್ಗಿ ಈಚಲ ಮರಗಳನ್ನು ಕಡಿಯುವುದು, ಪೋಲಿಸರು ದಸ್ತಗಿರಿ ಮಾಡುವುದು, ಮಧುಗಿರಿಯ ನ್ಯಾಯಾಧೀಶರು ಕಠಿಣ ಶಿಕ್ಷೆ ವಿಧಿಸುವುದು, ರಾಜಕೀಯ ಕೈದಿಗಳನ್ನು ಬೆಂಗಳೂರಿನ ಸೆಂಟ್ರಲ್ ಜೈಲಿಗೆ ರವಾನಿಸುವುದು. ಈ ದಿನನಿತ್ಯ ಘಟನೆಗಳಿಂದ ಪೋಲಿಸ್ ಅಧಿಕಾರಿಗಳು ತಾಳ್ಮೆ ಕೆಟ್ಟು ಕೊನೆಗೆ ಸತ್ಯಾಗ್ರಹಿಗಳನ್ನು ಬೆದರಿಸಲು ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಹುಳಿಯಾರಿನ ಹತ್ತಿರವಿರುವ ಒಂದು ದುರ್ಗಮಯ ಅರಣ್ಯ ಪ್ರದೇಶವಾದ ಕುದುರೆ ಕಣಿವೆಗೆ ಬಿಟ್ಟುಬಂದರು. ಇದರಿಂದಾಗಿ ಶಿರಾದಲ್ಲಿ ಕಾಂಗ್ರೆಸ್ ಕಾರ್ಯಕರ್ತರು ಸಭೆ ಸೇರಿ ಬಂಧಿತರನ್ನು ಹುಡುಕಿ ತರಲು ರಾಮೇಗೌಡ ಮತ್ತು ಎಂ.ಆರ್. ರಾಜಪ್ಪನವರನ್ನು ಕಳುಹಿಸಲಾಯಿತು. ಅದೃಷ್ಟವಶಾತ್ ಹುಳಿಯಾರಿಗೆ ಹೋಗುವ ಮುನ್ನವೇ ಭೇಟಿಯಾಗಿ ಸತ್ಯಾಗ್ರಹಿ ಬಂಧಿಗಳನ್ನು ಶಿರಾಕ್ಕೆ ಕರೆದುಕೊಂಡು ಬಂದು ವಿಜೃಂಭಣೆಯಿಂದ ಮೆರವಣಿಗೆಯನ್ನು ನಡೆಸಲಾಯಿತು. ಹೀಗೆ ೧೯೩೯ ಸೆಪ್ಟಂಬರ್ ೨೯ ರಂದು ಆರಂಭವಾದ ಅರಣ್ಯ ಸತ್ಯಾಗ್ರಹದ ಚಳುವಳಿ ೧೯೩೯ ನವೆಂಬರವರೆವಿಗೂ ಅವ್ಯಾಹತವಾಗಿ ನಡೆದು ಹೋಯಿತು. ರಾಜ್ಯದಲ್ಲಿ ನಡೆದ ಅರಣ್ಯ ಸತ್ಯಾಗ್ರಹದಲ್ಲಿ ಸುಮಾರು ೧೨೩೮ ಮಂದಿ ದಸ್ತಗಿರಿಯಾದರು. ತುಮಕೂರು ಜಿಲ್ಲೆಯಿಂದ ಸುಮಾರು ೩೪೦ ಮಂದಿ ಸತ್ಯಾಗ್ರಹಿಗಳು ದಸ್ತಗಿರಿಯಾಗಿದ್ದು, ಬಹುಶಃ ಮತ್ತಾವ ಜಿಲ್ಲೆಯಿಂದ ಇಷ್ಟೊಂದು ಮಂದಿ ಸತ್ಯಾಗ್ರಹಿಗಳು ಭಾಗವಹಿಸಿ ದಸ್ತಗಿರಿಯಾಗಿರಲಿಲ್ಲ. ಧ್ವಜ ಸತ್ಯಾಗ್ರಹದಲ್ಲಿ ಪಡೆದಿದ್ದ ತನ್ನ ಮೊದಲ ಸ್ಥಾನವನ್ನು ಅರಣ್ಯ ಸತ್ಯಾಗ್ರಹದಲ್ಲಿಯೂ ತುಮಕೂರು ಜಿಲ್ಲೆಯು ಉಳಿಸಿಕೊಂಡು ಒಂದು ವಿಕ್ರಮವನ್ನು ಸ್ಥಾಪಿಸಿತು.[೩೧]

ಮೈಸೂರು ಕಾಂಗ್ರೆಸ್ ಸಮಿತಿಯ ನಿರ್ಣಯದಂತೆ, ತುಮಕೂರು ಜಿಲ್ಲಾ ಕಾಂಗ್ರೆಸ್ಸಿನ ಮುಖಂಡರಾದ ಟಿ.ಪಿ. ಬ್ರಹ್ಮಯ್ಯನವರು ಶಿರಾದಲ್ಲಿ ಅರಣ್ಯ ಸತ್ಯಾಗ್ರಹ ನಡೆಸುತ್ತಿದ್ದ ಸುಂದರರಾಜ ಅಯ್ಯಂಗಾರ್‌ರವರಿಗೆ ೭-೧೨-೧೯೩೯ ರಂದು ಒಂದು ಪತ್ರ ಬರೆದು, ಸತ್ಯಾಗ್ರಹವನ್ನು ಕೊನೆಗೊಳಿಸಿ ಲೆಕ್ಕ ಪತ್ರಗಳೊಂದಿಗೆ ತುಮಕೂರಿಗೆ ಸಾಯಂಕಾಲದ ಹೊತ್ತಿಗೆ ವಾಪಸ್ಸು ಬರಬೇಕೆಂದು ತಿಳಿಸಿದರು. ಇದರಿಂದಾಗಿ ಸುಂದರರಾಜ ಅಯ್ಯಂಗಾರ್ ರವರು ಅರಣ್ಯ ಸತ್ಯಾಗ್ರಹವನ್ನು ಕೊನೆಗೊಳಿಸಿ ತುಮಕೂರಿಗೆ ಹಿಂತಿರುಗಿದರು.[೨೨]

೧೯೩೯ ರ ಅರಣ್ಯ ಸತ್ಯಾಗ್ರಹದಿಂದ ಪ್ರಭಾವಿತರಾದ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಯುವ ಕಾಂಗ್ರೆಸ್ ಕಾರ್ಯಕರ್ತರಾದ ಸಿ.ಎಸ್. ನಾರಾಯಣರಾವ್, ಸಿ.ಎ. ಹುಚ್ಚಣ್ಣ, ಶ್ರೀ ಪಾಪಯ್ಯ, ಟೈಲರ್ ಯತಿರಾಜು, ಶ್ರೀನಿವಾಸ, ಹುಲುಗಯ್ಯ, ದೇವಾಂಗದ ನಾಗೇಶಯ್ಯ, ಸಣ್ಣ ಮುರುಡಯ್ಯ, ಮುರುಡಯ್ಯನವರ ಬಸವಣ್ಣ, ಬಾಡಿಗಾರ್ಡ ಕೃಷ್ಣರಾವ್, ಕುಪ್ಪೂರು ಗೊಪಾಲ ಮುಂತಾದವರು ಮದ್ಯದ ಅಂಗಡಿಗಳ ಮುಂದೆ ಪಿಕೆಟಿಂಗ್, ಈಚಲ ಮರಗಳನ್ನು ಕಡಿಯುವುದು ಮುಂತಾದ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದರು. ಇವರಿಗೆ ಅಂದು ಸೇಂದಿ ಹೊತ್ತು ತರುವ ಲಾರಿಗಳು ಕಣ್ಣಿಗೆ ಬಿದ್ದರೆ, ಹಿಂದಿನಿಂದ ಹೋಗಿ ಲಾರಿಗಳ ಪೇಂಟನ್ನು ಕೀಳುವುದು, ಟೈರುಗಳನ್ನು ಕತ್ತರಿಸುವುದು, ಸೇಂದಿಯನ್ನೆಲ್ಲ ಚೆಲ್ಲಿ ರಸ್ತೆ ತುಂಬಾ ಹರಿದು, ಆ ಸುತ್ತಮುತ್ತಲಿನ ಪ್ರದೇಶವೆಲ್ಲಾ ಸೇಂದಿ ವಾಸನೆಯಿಂದ ಕೂಡಿರುವಂತೆ ಮಾಡುವುದು ಅಂದಿನ ಅವರ ಪಾನ ನಿರೋಧದ ಕಾರ್ಯಕ್ರಮಗಳಾಗಿದ್ದವು. ಒಂದು ಭಾರಿ ಸೇಂದಿ ಹೊತ್ತು ತರುತ್ತಿದ್ದ ಲಾರಿಯನ್ನು ಚಿಕ್ಕನಾಯಕನಹಳ್ಳಿಯ ಮೆಣಸಿನಕಾಯಿ ಸಿದ್ದಪ್ಪನ ತೋಪಿನ ಹತ್ತಿರ ತಡೆದು ನಿಲ್ಲಿಸಿದರು. ಈ ಪಾನ ನಿರೋಧ ಚಳುವಳಿಗಾರರು, ಸೇಂದಿಯ ಪೇಂಟನ್ನು ಕೀಳಲು, ಲಾರಿಯ ಟೈರುಗಳನ್ನು ಕತ್ತರಿಸಲು ರಸ್ತೆಗೆ ಅಡ್ಡಲಾಗಿ ದೊಡ್ಡ ದೊಡ್ಡ ಕಲ್ಲು ಬಂಡೆಗಳನ್ನು, ಮುಳ್ಳುಗಳನ್ನು ತಂದು ಹಾಕಿದರು. ಸೇಂದಿ ಲಾರಿ ಬಂದು ನಿಂತಿತ್ತು. ಲಾರಿಯ ಚಾಲಕನ ಹತ್ತಿರ ಪಿಸ್ತೂಲು ಇದ್ದರು ಸಹಾ ಅವನ ಕಣ್ಣನ್ನು ತಪ್ಪಿಸಿ, ಒಬ್ಬ ಪಾನ ನಿರೋಧಗಾರ ಸೇಂದಿ ಲಾರಿಯ ಪೇಂಟನ್ನು ಕಿತ್ತು ಪರಾರಿಯಾದರೆ, ಇನ್ನೊಬ್ಬನು ಚಕ್ರದ ಗಾಳಿಯನ್ನು ಕಿತ್ತು ಪರಾರಿಯಾದನು.[೨೩] ಹೀಗೆ ಪಾನ ನಿರೋಧ ಚಳುವಳಿಗಾರರು ಗೂಂಡಾಗಳಿಗೆ, ಪೋಲಿಸರಿಗೆ, ಅಂಗಡಿಗಳ ಮಾಲೀಕರಿಗೆ ಹೆದರದೆ ಈ ರೀತಿಯಾಗಿ ತುಮಕೂರು ಜಿಲ್ಲೆಯಲ್ಲಿ ಪಾನ ನಿರೋಧ ಚಟುವಟಿಕೆಗಳನ್ನು ಮುಂದುವರೆಸಿದರು.

ಆರ್.ಎಸ್. ಆರಾಧ್ಯರು ಅರಣ್ಯ ಸತ್ಯಾಗ್ರಹಕ್ಕೆ ಪತ್ರಿಕೆಗಳ ಮೂಲಕ ಪ್ರೇರಣೆ ನೀಡಿದ ಫಲವಾಗಿ ಸೆರೆಮನೆ ವಾಸವನ್ನು ಅನುಭವಿಸಿದರು. ಸೆರೆಯಿಂದ ಹೊರ ಬಂದು ಮಾಡಿದ ಮೊದಲ ಕಾರ್ಯವೆಂದರೆ ೧೯-೪-೧೯೪೦ರಂದು ಮಹಾತ್ಮ ಗಾಂಧೀಜಿಯವರ ಭಾವಚಿತ್ರ

ದೊಂದಿಗೆ ತುಮಕೂರಿನ ರಾಜಬೀದಿಗಳಲ್ಲಿ ಅದ್ಭುತವಾದ ಮೆರವಣಿಗೆಯನ್ನು ನಡೆಸುವುದರೊಂದಿಗೆ ಅರಣ್ಯ ಸತ್ಯಾಗ್ರಹಿಗಳ ದಿನಾಚರಣೆಯನ್ನು ಆಚರಿಸಿದರು. ಸಾರ್ವಜನಿಕ ಸಭೆಯಲ್ಲಿ ಆರ್.ಎಸ್. ಆರಾಧ್ಯರು ಅರಣ್ಯ ಸತ್ಯಾಗ್ರಹಿಗಳ ಪಾತ್ರವನ್ನು ಕುರಿತು ಮನೋಜ್ಞವಾಗಿ ಭಾಷಣ ಮಾಡಿದರು. ಮೈಸೂರು ಸಂಸ್ಥಾನದ ಸೆರೆಮನೆಗಳಲ್ಲಿ ಅರಣ್ಯ ಸತ್ಯಾಗ್ರಹಿಗಳ ಮೇಲೆ ನಡೆಯುವ ಅಮಾನುಷ ವರ್ತನೆಯನ್ನು ಉಗ್ರವಾಗಿ ಖಂಡಿಸಿದರು.[೩೪]

## ೪.೨. ಕ್ವಿಟ್ ಇಂಡಿಯಾ ಚಳುವಳಿಯ ಸಮಯದಲ್ಲಿ ತುಮಕೂರು ಜಿಲ್ಲೆಯಲ್ಲಿ ಪಾನ ನಿರೋಧ ಚಳುವಳಿ

೧೯೪೨ ರಲ್ಲಿ ಕ್ರಿಪ್ಸ್ ಮಿಷನಿನ ವರದಿಯ ವಿಫಲತೆಯ ನಂತರ ಅಖಿಲ ಭಾರತ ಕಾಂಗ್ರೆಸ್ ಕಾರ್ಯಕಾರಿ ಸಮಿತಿ "ಭಾರತ ಬಿಟ್ಟು ತೊಲಗಿ" ಎಂಬ ನಿರ್ಣಯವನ್ನು ಹೂಡಿತು. ೧೯೪೨ ಆಗಸ್ಟ ೯ ರಂದು ಅಖಿಲ ಭಾರತ ಕಾಂಗ್ರೆಸ್ ಸಮಿತಿಯು ಬೊಂಬಾಯಿಯಲ್ಲಿ ಸೇರಿದ ಅಧಿವೇಶನದಲ್ಲಿ ಇತಿಹಾಸ ಪ್ರಸಿದ್ಧ ಕ್ವಿಟ್ ಇಂಡಿಯಾ ನಿರ್ಣಯವನ್ನು ಅಂಗೀಕರಿಸಿತು. ಅಧಿವೇಶನದ ನಂತರವೇ ಸರ್ಕಾರ ಗಾಂಧಿ, ನೆಹರು, ಅಬ್ದುಲ್ ಕಲಾಂ ಅಜಾದ್ ರವರನ್ನು ಬೊಂಬಾಯಿಯಲ್ಲಿ ಬಂಧಿಸಲಾಯಿತು.[೩೫]

ಇದರಿಂದ ಸ್ಪೂರ್ತಿ ಪಡೆದ ತುಮಕೂರು ಜಿಲ್ಲೆಯ ಕಾಂಗ್ರೆಸ್ಸಿನ ನಾಯಕರು ಈ ಚಳುವಳಿಯನ್ನು ೧೯೪೨ ರ ಆಗಸ್ಟ ೯ ರಂದು ಪ್ರಾರಂಭಿಸಿದರು. ಮಧುಗಿರಿಯಲ್ಲಿ ಕೆ. ಹೆಂಜಾರಪ್ಪ, ಮಾಲಿಮರಿಯಪ್ಪನವರು ಹರಿತಾಳ, ಮೆರವಣಿಗೆಯನ್ನು ನಡೆಸುವಂತೆ ಆದೇಶವನ್ನು ನೀಡಿ ಜಿಲ್ಲೆಯಲ್ಲಿ ಈ ಚಳುವಳಿಯನ್ನು ಪ್ರಾರಂಭಿಸಿದರು.[೩೬] ಈ ಚಳುವಳಿಯ ಸಮಯದಲ್ಲಿ ತುಮಕೂರು ಜಿಲ್ಲೆಯ ಮಧುಗಿರಿ, ಕೊರಟಗೆರೆ, ಶಿರಾ, ತಿಪಟೂರು, ಪಾವಗಡ, ಕುಣಿಗಲ್ಲು ಚಿಕ್ಕನಾಯಕನಹಳ್ಳಿ ಮುಂತಾದ ಕಡೆಗಳಲ್ಲಿ ಪಾನ ನಿರೋಧದ ಚಳುವಳಿಗಳು ಬಹಳ ಬಿರುಸಿನಿಂದ ಸಾಗಿದವು. ೧೯೪೨ ಆಗಸ್ಟ್ ೧೩ ರಂದು ಮಧುಗಿರಿ ತಾಲ್ಲೂಕಿನ ಬ್ಯಾಲ್ಯದಲ್ಲಿ ಎಂ.ಜಿ.ನಾರಾಯಣರಾವ್‌ರವರು ಮದ್ಯದ ಅಂಗಡಿಗಳ ಮುಂದೆ ಭಜನೆ ಮಾಡುತ್ತಾ ಪಿಕೆಟಿಂಗ್‌ನ್ನು ಸಂಘಟಿಸುತ್ತಿರುವಾಗ ಅಲ್ಲಿನ ಕುಡುಕರು ಅವರ ಮೇಲೆ ಹೆಂಡವನ್ನು ಚೆಲ್ಲಿದರು. ಅಲ್ಲದೆ ಕುಡುಕರು ಅವಾಚ್ಯ ಶಬ್ದಗಳಿಂದ ಬೈಯುತ್ತಾ ಚಳುವಳಿಗಾರರ ಹಾರ್ಮೋನಿಯಂ, ತಬಲಗಳನ್ನು ಹೊಡೆದು ಹಾಕಿದರು. ಇದರಿಂದ ಕೋಪಗೊಂಡ ಬ್ಯಾಲ್ಯದ ಯುವ ಚಳುವಳಿಗಾರರು ಹೆಂಡದ ಅಂಗಡಿಯನ್ನು ಸುಟ್ಟು ಹಾಕಿ, ಅಲ್ಲಿನ ಕಟ್ಟಿಗೆಯ ಪೀಪಾಯಿಗಳನ್ನು ಹೊಡೆದು ಹಾಕಿದರು. ಅದೇ ರೀತಿಯಾಗಿ ನೆರೆಯ ಪುರವರ, ನಿಟ್ರಹಳ್ಳಿಯಲ್ಲಿ ಮದ್ಯದ ಅಂಗಡಿಗಳನ್ನು ನಾಶ ಮಾಡಲಾಯಿತು. ಈ ಘಟ್ಟನೆಗಳಿಂದ ಮಧುಗಿರಿಯ ಸುತ್ತ

ಮುತ್ತಲಿನ ಪ್ರದೇಶಗಳಲ್ಲಿ ಮದ್ಯದ ಮಾರಾಟವು ಕಡಿಮೆಯಾಯಿತು. ಇದರ ಪರಿಣಾಮವಾಗಿ ಎಂ.ಜಿ. ನಾರಾಯಣರಾವ್‌ರವರನ್ನು ಮತ್ತು ಅವರ ಸಹಚರರನ್ನು ಬಂಧಿಸಲಾಯಿತು.[೩೭]

ಕ್ವಿಟ್ ಇಂಡಿಯಾ ಚಳುವಳಿಯ ಸಮಯದಲ್ಲಿ ಜಿಲ್ಲೆಯ ತಿಪಟೂರಿನಲ್ಲಿ ಹೆಂಡದ ಅಂಗಡಿಗಳ ಮುಂದೆ ಪಿಕೆಟಿಂಗ್, ಈಚಲ ಮರ ಕಡಿಯುವ ಮುಂತಾದ ಚಟುವಟಿಕೆಗಳು ನಡೆದವು. ಇವು ಜಿಲ್ಲೆಯ ಪಾನ ನಿರೋಧ ಹೋರಾಟಕ್ಕೆ ಸ್ಫೂರ್ತಿ ನೀಡಿದವು. ಇದೇ ಸಮಯದಲ್ಲಿ ತುಮಕೂರಿನ ಬಳಿ ಕ್ಯಾತ್ಸಂದ್ರದಲ್ಲಿ ಸೇಂದಿ ಸಾಗಿಸುವ ಗಾಡಿಯ ಮೇಲೆ ಚಳುವಳಿಗಾರರು ಹಲ್ಲೆ ನಡೆಸಿದರು. ಇದರಿಂದಾಗಿ ಸೇಂದಿ ಗಾಡಿಯ ಕಾವಲುಗಾರರ ಮತ್ತು ಚಳುವಳಿಗಾರರ ನಡುವೆ ಘರ್ಷಣೆಯಯಿತು. ಈ ಘರ್ಷಣೆಯಲ್ಲಿ ಮದ್ಯದ ಪೀಪಾಯಿಗಳನ್ನು ಹೊಡೆದು ಹಾಕಿ ಮದ್ಯದ ಅಂಗಡಿಗೆ ಬೆಂಕಿಯನ್ನು ಹಚ್ಚಲಾಯಿತು.[೩೮] ಇದೇ ರೀತಿಯಾಗಿ ಚಿಕ್ಕನಾಯಕನಹಳ್ಳಿ ಮತ್ತು ಮಧುಗಿರಿ ತಾಲ್ಲೂಕಿನ ಕೊಡಿಗೇನಹಳ್ಳಿಗಳಲ್ಲಿಯೂ ಸಹಾ ಮದ್ಯದ ಅಂಗಡಿಗಳ ಮುಂದೆ ಪಿಕೆಟಿಂಗ್ ಕಾರ್ಯವು ಯಶಸ್ವಿಯಾಗಿ ನಡೆಯಿತು.[೩೯] ೧೯೪೨ ರ ಆಗಸ್ಟ್ ೧೫ ರಂದು ತುಮಕೂರಿನ ಪಾನ ನಿರೋಧ ಪಿಕೆಟಿಂಗ್ ಚಳುವಳಿಗಾರರು ಹೆಗ್ಗೆರೆ ಮತ್ತು ಗೂಳೂರುಗಳಲ್ಲಿ ಸೇಂದಿ ಅಂಗಡಿಗಳಿಗೆ ಬೆಂಕಿಯನ್ನಿಟ್ಟರಲ್ಲದೆ ಸೇಂದಿಯನ್ನು ಸಾಗಿಸುತ್ತಿದ್ದ ಒಂದು ಟ್ರಕ್ಕನ್ನು ತಡೆದು ಅದರ ಹೇರನ್ನು ಬರಿದು ಮಾಡಿದರು. ಆಗಸ್ಟ್ ೧೬ ರಂದು ಗುಬ್ಬಿ ಟೋಲ್ ಗೇಟ್ ಬಳಿಯ ಒಂದು ಸೇಂದಿ ಅಂಗಡಿಯನ್ನು ಚಳುವಳಿಗಾರರು ಜಖಂ ಮಾಡಿದರು. ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಹೊನ್ನುಡಿಕೆ ಗ್ರಾಮದಲ್ಲಿ ಸೇಂದಿ ಅಂಗಡಿಯನ್ನು ಚಳುವಳಿಗಾರರು ನಾಶಪಡಿಸಿದರು. ಆಗಸ್ಟ್ ೨೦ ರಂದು ಶಿರಾ ತಾಲ್ಲೂಕಿನ ಕಳ್ಳಂ ಬೆಳ್ಳ ಮತ್ತು ಬಿದರುಗುರ್ಕೆಗಳಲ್ಲಿ ಹೆಂಡದ ಅಂಗಡಿಗಳನ್ನು ಸುಡಲಾಯಿತು. ಆಗಸ್ಟ್ ೨೧ ರಂದು ಮಧುಗಿರಿ ತಾಲ್ಲೂಕಿನ ನಿಟ್ರಹಳ್ಳಿ ಹೆಂಡದ ಅಂಗಡಿಯನ್ನು ಉರುಳಿಸಲಾಯಿತು. ಆಗಸ್ಟ್ ೨೨ ರಂದು ಕೆಸ್ತೂರು, ದೇವಲಾಪುರ, ಆಗಳಕೋಟೆಯಲ್ಲಿ ಸೇಂದಿ ಅಂಗಡಿಗಳನ್ನು ಧ್ವಂಸ ಮಾಡಲಾಯಿತು. ಬಿದರಗುರ್ಕೆಯಲ್ಲಿ ಸೇಂದಿ ಮರಗಳಿಗೆ ಕಟ್ಟಿದ್ದ ಸೇಂದಿ ಮಡಿಕೆಗಳನ್ನು ಹೊಡೆದು ಹಾಕಲಾಯಿತು. ಆಗಸ್ಟ್ ೨೩ರಂದು ಚಳುವಳಿಗಾರರು ಬುಕ್ಕಾಪಟ್ಟಣ ಮತ್ತು ಪಟ್ಟನಾಯಕನಹಳ್ಳಿಗಳಲ್ಲಿ ಹೆಂಡದ ಅಂಗಡಿಗಳನ್ನು ಸುಟ್ಟು ಭಸ್ಮ ಮಾಡಿದರು. ಆಗಸ್ಟ್ ೨೪ರಂದು ತುಂಬಾಡಿ ಮತ್ತು ಆರ್ಯೇನಹಳ್ಳಿಯಲ್ಲಿ ಹೆಂಡದ ಅಂಗಡಿಗಳನ್ನು ಸುಡಲಾಯಿತು. ಆರ್ಯೇನಹಳ್ಳಿಯಲ್ಲಿ ಈಚಲ ಮರಗಳಿಗೆ ಕಟ್ಟಿದ್ದ ಸೇಂದಿ ಗಡಿಗೆಗಳನ್ನು ಹೊಡೆದು ಹಾಕಲಾಯಿತು. ಮಾದಿಗ ವೆಂಕಟಾಪುರ, ಬ್ಯಾಲ್ಯಗಳಲ್ಲಿ ಹೆಂಡ ಸಾಗಿಸುವ ಗಾಡಿಗಳ ಮೆಲೆ ಹಲ್ಲೆ ಮಾಡಿ ಹೆಂಡವನ್ನು ಹೊರಕ್ಕೆ ಚೆಲ್ಲಲಾಯಿತು.[೪೦]

ಕ್ವಿಟ್ ಇಂಡಿಯಾ ಚಳುವಳಿಯ ಸಮಯದಲ್ಲಿ ಕ್ಯಾತ್ಸಂದ್ರದ ಕೆ.ಎಸ್. ರಾಜಪ್ಪನವರು ತಮ್ಮ ಸ್ನೇಹಿತರಾದ ಕೆ.ಟಿ. ದಾಸಪ್ಪನವರಿಗೆ ಹಣಕೊಟ್ಟು ಒಂದು ಹಳೆಯ ಬಾಟಲನ್ನು ತರಿಸಿಕೊಂಡು ಅದರಲ್ಲಿ ಸಗಣಿಯನ್ನು ತುಂಬಿ ಅಲ್ಲಿಯೇ ಹತ್ತಿರದಲ್ಲಿದ್ದ ಹೆಂಡದ ಅಂಗಡಿಯಲ್ಲಿನ ದೊಡ್ಡ ಪೀಪಾಯಿಗೆ ಹಾಕಲು ಕಳುಹಿಸಿದರು. ಇದರಿಂದಾಗಿ ದೊಡ್ಡ ಬ್ಯಾರೆಲ್‌ನಲ್ಲಿದ್ದ ಹೆಂಡಕ್ಕೆ ಸಗಣಿ ಬಿದ್ದ ತಕ್ಷಣ ಕೆಟ್ಟು ದುರ್ವಾಸನೆ ಹಿಡಿದು ಅದರ ರುಚಿಯು ಹಾಳಾಯಿತು. ಇದರಿಂದ ಕುಡುಕರು ರಾಜಪ್ಪನವರನ್ನು ಅವಾಚ್ಯ ಶಬ್ದಗಳಿಂದ ಬೈಯಲಾರಂಭಿಸಿದರು.[೪೧] ಇದೇ ಸಮಯದಲ್ಲಿ ತಿಪಟೂರಿನ ಚಂದ್ರಶೇಖರರವರು ಕ್ವಿಟ್ ಇಂಡಿಯಾ ಚಳುವಳಿಯ ಸಮಯದಲ್ಲಿ ತಿಪಟೂರು, ಸಿದ್ದಾಪುರ, ಹಳೇಪಾಳ್ಯ, ಕರಡಿ, ಮುಂತಾದ ಹಳ್ಳಿಗಳಲ್ಲಿ ಜನತೆಯನ್ನು ಸಂಘಟಿಸಿ ಸೇಂದಿ ಅಂಗಡಿಗಳನ್ನು ಸುಟ್ಟು ಹಾಕಿದರು.[೪೨] ಅದೇ ರೀತಿಯಾಗಿ ಚಿಕ್ಕನಾಯಕನಹಳ್ಳಿಯ ಸಿ. ಶೇಷಪ್ಪನವರು ಸ್ಥಳೀಯವಾಗಿ ಪಾನ ನಿರೋಧದ ಕಾರ್ಯಕ್ರಮದ ಅಂಗವಾಗಿ ಈಚಲು ಮರಗಳನ್ನು ಕಡಿದು ಸೇಂದಿ ಅಂಗಡಿಗಳ ಮುಂದೆ ಪಿಕೆಟಿಂಗ್ ನಡೆಸಿ ಯಶಸ್ವಿಯಾದರು.[೪೩] ಇದೇ ರೀತಿಯಾಗಿ ಶಿರಾ ತಾಲ್ಲೂಕಿನ ಪಿ. ಸಣ್ಣಪ್ಪ, ಮುದ್ದವೀರಗೌಡ, ನಂಜುಂಡರಾವ್, ಬಸವ ರಾಜೇಂದ್ರಯ್ಯ ರಾತ್ರಿಯ ಸಮಯದಲ್ಲಿ ಗರಿಗಳಿಂದ ಕಟ್ಟಿದ ಸೇಂದಿ ಅಂಗಡಿಗಳಿಗೆ ಬೆಂಕಿಯನ್ನಿಟ್ಟು ಸುಟ್ಟುಹಾಕಿ ಯಾರ ಕಣ್ಣಿಗೆ ಕಾಣದೆ ಪರಾರಿಯಾಗುತ್ತಿದ್ದರು.[೪೪]

೧೯೪೨ರ ಕ್ವಿಟ್ ಇಂಡಿಯಾ ಚಳುವಳಿಯ ಸಮಯದಲ್ಲಿ ಎಂ.ಪಿ. ವಜ್ರನಾಭಯ್ಯ, ಎಂ.ಎಸ್. ರಾಮಣ್ಣ, ದೊರೆಬಲಯ್ಯ, ಜ್ವಾಲನಯ್ಯ, ಮಾ.ನಂ. ಶ್ರೀಕಂಠಯ್ಯನವರು ತುರುವೇಕೆರೆ, ದಂಡಿನಶಿವರ, ಶೀಗೆಹಳ್ಳಿ, ದಬೆಗಟ್ಟ, ಬಾಣಸಂದ್ರಗಳಲ್ಲಿ ಸಭೆ ಮೆರವಣಿಗೆಗಳನ್ನು ನಡೆಸಿ, ಈಚಲ ಮರಗಳ ನಾಶ, ಹೆಂಡದ ಅಂಗಡಿಗಳ ದಹನದಂಥ ಕಾರ್ಯಕ್ರಮಗಳನ್ನು ಕೈಗೊಂಡರು.[೪೫] ಈ ಚಳುವಳಿಯ ಸಮಯದಲ್ಲಿ ಕೊರಟಗೆರೆ ತಾಲ್ಲೂಕಿನ ತೀತಾ ಗ್ರಾಮದಲ್ಲಿ ಡಿ.ಆರ್. ಮುದ್ದಪ್ಪನವರು ಸೇಂದಿ ಅಂಗಡಿಯ ಮುಂದೆ ಪಿಕೆಟಿಂಗ್ ನಡೆಸಿದ್ದಕ್ಕಾಗಿ ಮೂರು ತಿಂಗಳ ಶಿಕ್ಷೆಯನ್ನು ಅನುಭವಿಸಿದರು.[೪೬] ಇದೇ ಚಳುವಳಿಯ ಸಮಯದಲ್ಲಿ ಶ್ರೀರಾಮ ಚೈತನ್ಯ ಸ್ವಾಮಿಯವರು ಟೀ. ತಾರೇಗೌಡ, ಕೆ. ಹೆಂಜೇರಪ್ಪ ಕುರುಬರ ಸಿದ್ದಪ್ಪ, ಜಿ. ಮೂಕ್ಕಣ್ಣಪ್ಪನವರು ಶಿರಾದ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಸೇಂದಿ ಅಂಗಡಿಗಳ ಮುಂದೆ ಪಿಕೆಟಿಂಗ್, ಈಚಲ ಮರ ಕಡಿಯುವುದು ಮುಂತಾದ ಚಟುವಟಿಕೆಗಳನ್ನು ಕೈಗೊಂಡಿದ್ದರು.[೪೭] ಈ ಚಳುವಳಿಯ ಸಂದರ್ಭದಲ್ಲಿ ತುಮಕೂರಿನ ಆಚಾರ್ರ ಬೀದಿಯಲ್ಲಿ ಟಿ.ಎಸ್. ಕುಮಾರಾಚಾರ್‌ರವರು ತುಮಕೂರಿನಲ್ಲಿ ನಡೆದ ಪಾನ ನಿರೋಧ ಚಳುವಳಿಯಲ್ಲಿ ಭಾಗವಹಿಸಿ, ಸೇಂದಿ ಅಂಗಡಿಗಳ ಮುಂದೆ ಪಿಕೆಟಿಂಗ್ ನಡೆಸಿದರು.[೪೮]

## ೪.೩. ಮೈಸೂರು ಚಲೋ ಚಳುವಳಿಯ ಸಮಯದಲ್ಲಿ ತುಮಕೂರು ಜಿಲ್ಲೆಯಲ್ಲಿ ಪಾನ ನಿರೋಧ ಚಳುವಳಿ

೧೯೪೭ ರ ಸೆಪ್ಟಂಬರ್‌ನಲ್ಲಿ ನಡೆದ ಮೈಸೂರು ಚಲೋ ಚಳುವಳಿಯ ಸಮಯದಲ್ಲಿ ತುಮಕೂರು ಜಿಲ್ಲೆಯಲ್ಲಿ ಅರಣ್ಯ ಸತ್ಯಾಗ್ರಹ, ಪಾನನಿರೋಧ ಚಟುವಟಿಕೆಗಳು, ಮದ್ಯದ ಅಂಗಡಿಗಳ ಮುಂದೆ ಪಿಕೆಟಿಂಗ್ ನಂತಹ ಚಟುವಟಿಕೆಗಳು ಮರುಕಳಿಸಿದವು. ಮೈಸೂರು ಚಲೋ ಚಳುವಳಿಯ ಪ್ರಚಾರ ಕೈಗೊಂಡು ಸಂಸ್ಥಾನದಾದ್ಯಂತ ಪ್ರವಾಸ ಮಾಡಿ ತುಮಕೂರು ಜಿಲ್ಲೆಗೆ ಕೆ.ಟಿ. ಭಾಷ್ಯಂ, ಹೆಚ್.ಕೆ. ವೀರಣ್ಣಗೌಡರು, ಹೆಚ್.ಸಿ. ದಾಸಪ್ಪನವರು ಭೇಟಿ ನೀಡಿದಾಗ ತುರುವೇಕೆರೆಯ ಎ.ಎಸ್. ಸೀತರಾಮಯ್ಯ, ಮಾನಂ ಶ್ರೀಕಂಠಯ್ಯನವರು ಮಾಯಸಂದ್ರ, ತುರುವೇಕೆರೆ, ಚಿಕ್ಕನಾಯಕನಹಳ್ಳಿ, ಮಧುಗಿರಿ, ಪಾವಗಡ ಮುಂತಾದ ಸ್ಥಳಗಳಲ್ಲಿ ನಡೆದ ಪ್ರಚಾರ ಸಭೆಗಳಲ್ಲಿ ಭಾಷಣ ಮಾಡಿ ಹೆಂಡದ ಅಂಗಡಿಗಳನ್ನು ಸುಡುವುದು, ಮದ್ಯದ ಅಂಗಡಿಗಳ ಮುಂದೆ ಪಿಕೆಟಿಂಗ್, ಮದ್ಯ ಪೀಪಾಯಿಗಳನ್ನು ಹೊಡೆದು ಹಾಕುವುದು, ಮದ್ಯವನ್ನು ಹೊರಚೆಲ್ಲುವಂತಹ ಘಟನೆಗಳನ್ನು ಯಶಸ್ವಿಯಾಗಿ ನಡೆಸುತ್ತಿದ್ದರು.[೯] ಮೈಸೂರು ಚಲೋ ಚಳುವಳಿಯ ಅಂಗವಾಗಿ ಚಿಕ್ಕನಾಯಕನಹಳ್ಳಿಯಲ್ಲಿ ೬-೯-೧೯೪೭ ರಂದು ಪೋಲಿಸ್ ಆಜ್ಞೆ ೪೫ ನ್ನು ಜಾರಿಗೆ ತರಲಾಗಿತ್ತು. ಆದರೆ ಇದಕ್ಕೆ ವಿರುದ್ಧವಾಗಿ ಚಳುವಳಿಕಾರರು ಕಾನೂನು ಭಂಗ ಮಾಡಲು ಚಿಕ್ಕನಾಯಕನಹಳ್ಳಿಯಲ್ಲಿನ ಸೇಂದಿ ಅಂಗಡಿಗಳ ಮುಂದೆ ಪಿಕೆಟಿಂಗ್, ಈಚಲು ಮರಗಳನ್ನು ಕಡಿಯುವಂತಹ ಕಾರ್ಯಗಳನ್ನು ನಡೆಸಿದ ಜಿ.ವಿ.ನಾರಾಯಣಮೂರ್ತಿ, ಎಸ್. ಮುರುಡಯ್ಯ, ಸಿ.ಎಸ್. ನಾಗಣ್ಣ, ಸಿ.ಹೆಚ್.ಲಿಂಗದೇವರು, ಎಂ.ಎಸ್. ಹನುಮಂತರಾವ್, ಲಲಿತಪಂಡಿತರು, ಗೌರಮ್ಮ ನಾಗಮ್ಮ, ಭಾಗಮ್ಮ, ಗಂಗಾದೇವಿಯವರನ್ನು ಬಂಧಿಸಲಾಯಿತು.[೨೦]

ಮೈಸೂರು ಚಲೋ ಚಳುವಳಿಯ ಅಂಗವಾಗಿ ೧೦-೦೯-೧೯೪೭ರಂದು ಚಿಕ್ಕನಾಯಕನ ಹಳ್ಳಿಯಲ್ಲಿ ಪಾನ ನಿರೋಧ ಕೈಗೊಂಡಿದ್ದ ಸಿ.ಎ. ಹುಚ್ಚಣ್ಣನವರು ಸೇರಿದಂತೆ ಇತರ ೬ ಜನ ಸತ್ಯಾಗ್ರಹಿಗಳನ್ನು ಬಂಧಿಸಲಾಯಿತು. ೧೨-೯-೧೯೪೭ ರಂದು ಮಧುಗಿರಿ ತಾಲ್ಲೂಕಿನ ನಿಟ್ರಹಳ್ಳಿ, ಮಿಡಿಗೇಶಿಗಳಲ್ಲಿ ಹೆಂಡದ ಅಂಗಡಿಗಳನ್ನು ಸುಟ್ಟು ಭಸ್ಮ ಮಾಡಲಾಯಿತು. ಇದೇ ದಿನ ಬಡವನಹಳ್ಳಿಯಲ್ಲಿ ಅರಣ್ಯ ಸತ್ಯಾಗ್ರಹವನ್ನು ಪ್ರಾರಂಭಿಸಲಾಯಿತು, ೧೪-೯-೧೯೪೭ ರಂದು ಮಧುಗಿರಿಯ ವಿಠಲಾಪುರದಲ್ಲಿ ಹೆಂಡದ ಅಂಗಡಿಯನ್ನು ಸುಡಲಾಯಿತು. ೧೮-೯-೧೯೪೭ ರಂದು ಅರಮನೆ ಸತ್ಯಾಗ್ರಹದ ಅಂಗವಾಗಿ ತುಮಕೂರು ಜಿಲ್ಲೆಯಲ್ಲಿ ಎಲ್ಲಾ ತಾಲ್ಲೂಕುಗಳಲ್ಲಿ ಹೆಂಡದ ಅಂಗಡಿಗಳನ್ನು ಸುಡುವುದು, ಈಚಲ ಮರಗಳನ್ನು ಕಡಿಯುವ ಚಟುವಟಿಕೆಗಳನ್ನು ನಡೆಸುತ್ತಿದ್ದ ೧೦೧ ಜನರನ್ನು ದಸ್ತಗಿರಿ ಮಾಡಲಾಯಿತು.[೨೧]

ಮೈಸೂರು ಚಲೋ ಚಳುವಳಿಯ ಪರಿಣಾಮವಾಗಿ ಸರ್ಕಾರವು ೧೯೪೭ ರಲ್ಲಿ ತುಮಕೂರು ಜಿಲ್ಲೆಯ ಪಾವಗಡ ತಾಲ್ಲೂಕಿನಲ್ಲಿ ಪಾನ ನಿರೋಧವನ್ನು ಜಾರಿಗೆ ತಂದಿತು. ಇದರ ಪ್ರಕಾರ ಪ್ರತಿ ವರ್ಷ ಶೇ. ೨೦ ರಷ್ಟು ಹೆಂಡದ ಅಂಗಡಿಗಳನ್ನು ಕಡಿತಗೊಳಿಸುವ ನಿಯಮ ರೂಪಿಸಲಾಯಿತು. ೧೯೪೮ರಲ್ಲಿ ರಾಜ್ಯದಲ್ಲಿ ಮೈಸೂರು ಸರ್ಕಾರ ಪಾನ ನಿರೋಧಿ ಅಧಿನಿಯಮವನ್ನು ಜಾರಿಗೆ ತರಲಾಯಿತು. ಇದರಂತೆಯೇ ಚಿತ್ರದುರ್ಗ, ತುಮಕೂರು, ಕೋಲಾರ, ಶಿವಮೊಗ್ಗ, ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಹಾಗೂ ಹಾಸನ ಜಿಲ್ಲೆಯ ನಾಲ್ಕು ತಾಲ್ಲೂಕುಗಳಲ್ಲಿ, ಬೆಂಗಳೂರಿನ ಎರಡು ತಾಲ್ಲೂಕುಗಳಲ್ಲಿ ಪಾನ ನಿರೋಧ ಅಧಿನಿಯಮವನ್ನು ಜಾರಿಗೆ ತರಲಾಯಿತು.[೨] ಮೈಸೂರು ಸರ್ಕಾರ ಪತ್ರಿಕಾ ಪ್ರಕಟಣೆಯೊಂದರಲ್ಲಿ ೧-೧-೧೯೫೨ ರಂದು ಸರ್ಕಾರಿ ವರಮಾನದಲ್ಲಿ ೧೦,೨೪೦,೪೪೪ ರೂಪಾಯಿಗಳು ತುಮಕೂರು, ಚಿತ್ರದುರ್ಗ, ಚಿಕ್ಕಮಗಳೂರು, ಶಿವಮೊಗ್ಗಗಳಲ್ಲಿ ಪಾನ ಪ್ರತಿಬಂಧ ಜಾರಿಗೆಯ ಕಾರಣದಿಂದ ಸೇಂದಿ ಕಂಟ್ರಾಕ್ಟರ್‌ರಿಗೆ ೧,೦೯,೪೪೭ ರೂಪಾಯಿಗಳ ನಷ್ಟ ಪರಿಹಾರವನ್ನು ಕೊಡಲು ಸರ್ಕಾರ ತಿರ್ಮಾನಿಸಿತು.[೩]

ತುಮಕೂರು ಜಿಲ್ಲೆಯ ಟಿ.ಎ. ದಾಸಪ್ಪನವರು ಮನುಷ್ಯತ್ವವನ್ನು ನಾಶ ಮಾಡಲು ಹೊರಟಿರುವ ಮದ್ಯಪಾನದ ವಿರುದ್ಧ ಸತತ ೨೦ ವರ್ಷಗಳವರೆಗೆ ಹೋರಾಟ ನಡೆಸಿದರು. ಪಾನ ನಿರೋಧದ ಸಮ್ಮೇಳನವನ್ನು ಮದ್ರಾಸಿನಲ್ಲಿ ಆಗಿನ ಮುಖ್ಯಮಂತ್ರಿಗಳಾಗಿದ್ದ ಅಣ್ಣಾದೊರೈರವರು ಏರ್ಪಡಿಸಿದ್ದಾಗ, ಕರ್ನಾಟಕ ರಾಜ್ಯದ ತುಮಕೂರು ಜಿಲ್ಲೆಯಿಂದ ಟಿ.ಎ. ದಾಸಪ್ಪನವರು ತಮ್ಮ ಪತ್ನಿಯವರೊಂದಿಗೆ ಭಾಗವಹಿಸಿ, ಅಂದಿನ ಸಭೆಯಲ್ಲಿ ಪಾನ ನಿರೋಧದ ಬಗ್ಗೆ ಬಹಳ ಪರಿಣಾಮಕಾರಿಯಾಗಿ ಭಾಷಣ ಮಾಡಿದರು.[೪]

ಬೆಂಗಳೂರಿನ ಗಾಂಧಿ ಸ್ಮಾರಕ ಭವನದಲ್ಲಿ ಸರ್ದಾರ್ ವೆಂಕಟರಾಮಯ್ಯ ಹೆಚ್.ಎಸ್. ದೊರೆಸ್ವಾಮಿ, ಕಡಿದಾಳ್ ಮಂಜಪ್ಪ, ನಿಟ್ಟೂರು ಶ್ರೀನಿವಾಸರಾವ್, ಮುಂತಾದವರು ಸಭೆ ಸೇರಿ ಕರ್ನಾಟಕ ರಾಜ್ಯದಾದ್ಯಂತ ಪಾನ ನಿರೋಧವನ್ನು ಜಾರಿಗೆ ತರಲು ಒಮ್ಮತದಿಂದ ತೀರ್ಮಾನ ಕೈಗೊಂಡಿದ್ದರು. ಈ ಸಭೆಯಲ್ಲಿ ತುಮಕೂರು ಜಿಲ್ಲೆಯಿಂದ ಟಿ.ಎ. ದಾಸಪ್ಪ ಮತ್ತು ಎಂ. ಪುಟ್ಟ ತಿಮ್ಮಯ್ಯನವರು ಭಾಗವಹಿಸಿದರು. ಇವರು ಕೆಂಗಲ್ ಹನುಮಂತಯ್ಯನವರಿಗೆ ಮನವಿ ಮಾಡಿಕೊಂಡು, ರಾಜ್ಯದಲ್ಲಿ ಪಾನ ನಿರೋಧವನ್ನು ಕಡ್ಡಾಯವಾಗಿ ಜಾರಿಗೆ ತರಬೇಕೆಂದು ಹೇಳುತ್ತಾ, ಇದರಿಂದ ಹಳ್ಳಿಗಳ ರೈತರ ಹೆಣ್ಣುಮಕ್ಕಳ ಕುಟುಂಬಗಳು ನೆಮ್ಮದಿಯಾಗಿ ಬಾಳಲು ಸಹಕರಿಸುತ್ತದೆ. ಎಂದು ಭಾಷಣ ಮಾಡಿದರು.[೫]

ಈ ರೀತಿಯಾಗಿ ಗಾಂಧೀಜಿಯವರ ಪಾನ ನಿರೋಧ ಕಾರ್ಯಕ್ರಮವನ್ನು ತುಮಕೂರು ಜಿಲ್ಲೆಯ ಕಾಂಗ್ರೆಸ್ ಕಾರ್ಯಕರ್ತರು ಕಾನೂನುಭಂಗ ಚಳುವಳಿ, ಕ್ವಿಟ್ ಇಂಡಿಯಾ ಚಳುವಳಿ, ಮೈಸೂರು ಚಲೋ ಚಳುವಳಿಗಳ ಸಮಯದಲ್ಲಿ ಯಶಸ್ವಿಯಾಗಿ ನಡೆಸಿದರು.

ಅಡಿಟಿಪ್ಪಣಿಗಳು

೧. ಸೂರ್ಯನಾಥ್ ಕಾಮತ್(ಸಂ), ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ-೩, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು, ೧೯೮೯, ಪು.೨೦೧

೨. ವಿಶ್ವ ಕರ್ನಾಟಕ ಪತ್ರಿಕೆ, ದಿನಾಂಕ ೨೭-೧೦-೧೯೨೭, [ಕ.ರಾ.ಪ.ಇ.] ಬೆಂಗಳೂರು

೩. ಭರತನ ಕುಮಾರಪ್ಪ ವೈ. ಪ್ರಾಹಿಭಿಷನ್, ನವಜೀವನ, ಅಹಮದಾಬಾದ್, ೧೯೫೨, ಪು.೧೧

೪. ನವಭಾರತ ಪತ್ರಿಕೆ, ದಿನಾಂಕ ೮-೧೦-೧೯೩೧, [ಕ.ರಾ.ಪ.ಇ.] ಬೆಂಗಳೂರು, ಪು.೫

೫. ಮಾಲಿಮುದ್ದಣ್ಣ, ಮಾಲಿಮರಿಯಪ್ಪ, ಸಾಹಿತ್ಯಾಲಯ, ಗಾಂಧೀನಗರ, ತುಮಕೂರು, ೧೯೯೬, ಪು.೧೦೩

೬. ಸೂರ್ಯನಾಥ್ ಕಾಮತ್(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂಪುಟ-೨, ಗೀತಾ ಬುಕ್ ಹೌಸ್, ಮೈಸೂರು, ೧೯೭೭, ಪು.-೪೨೭

೭. ವಿಶ್ವ ಕರ್ನಾಟಕ ಪತ್ರಿಕೆ, ದಿನಾಂಕ ೩೧-೫-೧೯೩೧, [ಕ.ರಾ.ಪ.ಇ.] ಬೆಂಗಳೂರು

೮. ಸೂರ್ಯನಾಥ್ ಕಾಮತ್(ಸಂ), ಪೂರ್ವೋಕ್ತ ೧೯೮೯, ಪು.೨೦೩

೯. ನಾಗರತ್ನಮ್ಮ ಎಸ್., ತುಮಕೂರು ಜಿಲ್ಲೆಯಲ್ಲಿ ಸ್ವಾತಂತ್ರ್ಯ ಹೋರಾಟ, ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್.ನಿಬಂಧ, ೧೯೯೬, ಪು.೧೦

೧೦. ತುಮಕೂರು ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರ ಸಂಘ(ರಿ), ತುಮಕೂರು ಜಿಲ್ಲೆಯ ಚಲೇಜಾವ್ ಚಳುವಳಿಯ ೫೦ನೇ ವಾರ್ಷಿಕೋತ್ಸವದ ಸ್ಮರಣ ಸಂಚಿಕೆ, ೧೯೯೨, ಪು.೧೩೫

೧೧. ಕಾಂಗ್ರೆಸ್ ಮೀಟಿಂಗ್ಸ್ ಇನ್ ತುಮಕೂರ್ ಡಿಸ್ಟ್ರಿಕ್ಟ್, ಕಡತದ ಸಂಖ್ಯೆ: ೬-೫-೧೯೩೮ ರಿಂದ ೨೬-೬-೧೯೩೮, ದಿನಾಂಕ ೨೮-೪-೧೯೩೮, [ಕ.ರಾ.ಪ.ಇ.] ಬೆಂಗಳೂರು

೧೨. ಕಾಂಗ್ರೆಸ್ ಮೀಟಿಂಗ್ಸ್ ಇನ್ ತುಮಕೂರ್ ಡಿಸ್ಟ್ರಿಕ್ಟ್, ಕಡತದ ಸಂಖ್ಯೆ: ೬-೧-೧೯೩೮ ರಿಂದ ೩-೩-೧೯೩೮ರವರೆಗೆ, ದಿನಾಂಕ ೩-೨-೧೯೩೮, [ಕ.ರಾ.ಪ.ಇ.] ಬೆಂಗಳೂರು

೧೩. ಮೈಸೂರು ಕಾಂಗ್ರೆಸ್ ಸಪ್ತಾಹದ ವರದಿ, ಮೈಸೂರು ಕಾಂಗ್ರೆಸ್ ದಿನಾಂಕ ೨-೧-೧೯೩೯ ರಿಂದ ೨೬-೬-೧೯೩೯, [ಕ.ರಾ.ಪ.ಇ.] ಬೆಂಗಳೂರು

೧೪. ಅದೇ,

೧೫. ಮಾಲಿಮುದ್ದಣ್ಣ, ಮಾಲಿಮರಿಯಪ್ಪ, ಸಾಹಿತ್ಯಾಲಯ, ಗಾಂಧೀನಗರ, ತುಮಕೂರು, ೧೯೯೬, ಪು.೩೮-೩೯

೧೬. ಗಾಂಧೀಜಿ ಎಂ.ಕೆ., ವಿಮೆನ್ ಅಂಡ್ ಸೋಷಿಯಲ್ ಇನ್‌ಜೇಸ್ಟೀಸ್, ನವಜೀವನ, ಅಹ್ಮದಾಬಾದ್, ೧೯೪೭, ಪು.೧೭೫

೧೭. ನಾಗರತ್ನಮ್ಮ ಎಸ್.(ಲೇ), ತುಮಕೂರು ಜಿಲ್ಲೆಯಲ್ಲಿ ಸ್ವಾತಂತ್ರ್ಯ ಚಳುವಳಿ, ಯೋಗೀಶ್ ಡಿ.ಎನ್.(ಸಂ), ಜಯಮಂಗಲಿ, ೬೯ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ತುಮಕೂರು ಸ್ಮರಣ ಸಂಚಿಕೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೨, ಪು.೩೦

೧೮. ಮಾಲಿಮುದ್ದಣ್ಣ, ಮಾಲಿಮರಿಯಪ್ಪ, ಸಾಹಿತ್ಯಾಲಯ, ಗಾಂಧೀನಗರ, ತುಮಕೂರು, ೧೯೬೯, ಪು.೫೬

೧೯. ಫಾರೆಸ್ಟ್ ಸತ್ಯಾಗ್ರಹ ಇನ್ ತುಮಕೂರ್ ಡಿಸ್ಟ್ರಿಕ್ಟ್: ಕಡತದ ಸಂಖ್ಯೆ ಎಸ್.ಬಿ. ನಂ.–೮೬೧, ೩೯–೪೦, ೨೦–೯–೧೯೩೯ ರಿಂದ ೯–೧೨–೧೯೩೯, ದಿನಾಂಕ ೨೯–೯–೧೯೩೯, [ಕ.ರಾ.ಪ.ಇ.] ಬೆಂಗಳೂರು

೨೦. ಮಾಲಿಮುದ್ದಣ್ಣ, ಪೂರ್ವೋಕ್ತ, ೧೯೬೯, ಪು.೫೬

೨೧. ನಂಜುಂಡ ಸ್ವಾಮಿ ಬಿ.(ಸಂ), ಕಲ್ಪಸಿರಿ, ಅಖಿಲ ಭಾರತ ೬೯ನೇ ಕನ್ನಡ ಸಾಹಿತ್ಯ ಸಮ್ಮೇಳನ ತುಮಕೂರು ೨೦೦೨ರ, ಸ್ಮರಣ ಸಂಚಿಕೆ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೨೦೦೨, ಪು.೨೬೦

೨೨. ಫಾರೆಸ್ಟ್ ಸತ್ಯಾಗ್ರಹ ಇನ್ ತುಮಕೂರ್ ಡಿಸ್ಟ್ರಿಕ್ಟ್: ಕಡತದ ಸಂಖ್ಯೆ ೧೪೨–೨೯–೪೦, ಎಸ್.ಬಿ. ಫೈಲ್.ನಂ.–೮೬–೩೯–೪೦, ದಿನಾಂಕ ೨೮–೯–೧೯೩೯ ರಿಂದ ೭–೧೨–೧೯೩೯, ರವರೆಗೆ [ಕ.ರಾ.ಪ.ಇ.] ಬೆಂಗಳೂರು

೨೩. ಮಾಲಿಮುದ್ದಣ್ಣ, ಪೂರ್ವೋಕ್ತ, ೧೯೬೯, ಪು.೫೭

೨೪. ಕವಿತಾಕೃಷ್ಣ, ಸ್ವಾತಂತ್ರ್ಯ ಶ್ರೀ, ಕವಿತಾ ಪ್ರಕಾಶನ, ಕ್ಯಾತ್ಸಂದ್ರ, ತುಮಕೂರು, ೧೯೯೦, ಪು.೧೯–೨೦

೨೫. ಸೂರ್ಯನಾಥ ಕಾಮತ್(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂಪುಟ–೩, ಗೀತಾ ಬುಕ್ ಹೌಸ್, ಮೈಸೂರು, ೧೯೮೦, ಪು.೮೪೦

೨೬. ಪರಶುರಾಮನ್ ಸಂಗ್ರಹ, ಖಾಸಗಿ ದಾಖಲೆ, ಕಡತದ ಸಂಖ್ಯೆ ೨೩೭, ದಿನಾಂಕ ೫–೧೦–೧೯೩೯, [ಕ.ರಾ.ಪ.ಇ.] ಬೆಂಗಳೂರು

೨೭. ಫಾರೆಸ್ಟ್ ಸತ್ಯಾಗ್ರಹ ಇನ್ ತುಮಕೂರ್ ಡಿಸ್ಟ್ರಿಕ್ಟ್: ಕಡತದ ಸಂಖ್ಯೆ ೧೪೨–೩೯–೪೦, ಎಸ್.ಬಿ. ಫೈಲ್.ನಂ.–೮೬–೩೯–೪೦, ದಿನಾಂಕ ೨೦–೧೦–೧೯೩೯, [ಕ.ರಾ.ಪ.ಇ.] ಬೆಂಗಳೂರು

೨೮. ಪ್ರಜಾಧ್ವನಿ ಪತ್ರಿಕೆ, ದಿನಾಂಕ ೨೦–೧೦–೧೯೩೯, [ಕ.ರಾ.ಪ.ಇ.] ಬೆಂಗಳೂರು

೨೯. ಫಾರೆಸ್ಟ್ ಸತ್ಯಾಗ್ರಹ ಇನ್ ತುಮಕೂರ್ ಡಿಸ್ಟ್ರಿಕ್ಟ್, ಕಡತದ ಸಂಖ್ಯೆ ಎಸ್.ಬಿ. ೧೫೮/೩೯–೪೦, ದಿನಾಂಕ ೬–೧೧–೧೯೩೯ [ಕ.ರಾ.ಪ.ಇ.] ಬೆಂಗಳೂರು

೩೦. ಫಾರೆಸ್ಟ್ ಸತ್ಯಾಗ್ರಹ ಇನ್ ತುಮಕೂರ್ ಡಿಸ್ಟ್ರಿಕ್ಟ್, ಕಡತದ ಸಂಖ್ಯೆ ೧೪೨-೩೯-೪೦, ಎಸ್.ಬಿ. ಫೈಲ್.ನಂ.-೮೬-೩೯-೪೦, ದಿನಾಂಕ ೧-೧೨-೧೯೩೯ [ಕ.ರಾ.ಪ.ಇ.] ಬೆಂಗಳೂರು

೩೧. ಮಾಲಿಮುದ್ದಣ್ಣ, ಪೂರ್ವೋಕ್ತ, ೧೯೬೯, ಪು.೫೭-೫೮

೩೨. ಫಾರೆಸ್ಟ್ ಸತ್ಯಾಗ್ರಹ ಇನ್ ತುಮಕೂರ್ ಡಿಸ್ಟ್ರಿಕ್ಟ್, ಕಡತದ ಸಂಖ್ಯೆ ೧೪೨-೩೯-೪೦, ಎಸ್.ಬಿ. ಫೈಲ್.ನಂ.-೮೬-೩೯-೪೦, ದಿನಾಂಕ ೯-೧೨-೧೯೩೯ [ಕ.ರಾ.ಪ.ಇ.] ಬೆಂಗಳೂರು

೩೩. ಜವರೇಗೌಡ ದೇ.(ಸಂ), ಸರ್ವೋದಯ ಪಥ, ಜಿ.ವಿ.ನಾ. ಅಭಿನಂದನಾ ಗ್ರಂಥ ಸಮಿತಿ, ಚಿಕ್ಕನಾಯಕನಹಳ್ಳಿ, ೧೯೮೨, ಪು.೩೩೦

೩೪. ಕವಿತಾಕೃಷ್ಣ, ಪೂರ್ವೋಕ್ತ, ೧೯೯೦, ಪು.೨೮

೩೫. ಮಜುಂದಾರ್ ಆರ್.ಸಿ.(ಸಂ), ಸ್ವಾತಂತ್ರ್ಯ ಸಂಗ್ರಾಮ, (ಅನು) ನರಸಿಂಹಮೂರ್ತಿ ಎ.ವಿ., ಭಾಗ ೨, ಸಂಪುಟ ೨೪, ಭಾರತೀಯ ವಿದ್ಯಾಭವನ, ಬೆಂಗಳೂರು, ೧೯೯೮, ಪು.೩೮೧-೮೨

೩೬. ಮಾಲಿಮುದ್ದಣ್ಣ, ಪೂರ್ವೋಕ್ತ, ೧೯೬೯, ಪು.೬೭

೩೭. ಸೂರ್ಯನಾಥ ಕಾಮತ್, ಕರ್ನಾಟಕದಲ್ಲಿ ಕ್ವಿಟ್ ಇಂಡಿಯಾ ಚಳುವಳಿ, ಲೋಕ ಶಿಕ್ಷಣ ಟ್ರಸ್ಟ್ ಗ್ರಂಥಮಾಲೆ, ಹುಬ್ಬಳ್ಳಿ, ಬೆಂಗಳೂರು, ೧೯೯೨, ಪು.೬೬

೩೮. ತುಮಕೂರು ಜಿಲ್ಲಾ ಸ್ವಾಂತಂತ್ರ್ಯ ಹೋರಾಟಗಾರರ ಸಂಘ (ರಿ), ಪೂರ್ವೋಕ್ತ, ೧೯೯೨, ಪು.೨೮

೩೯. ಆಲ್ ಇಂಡಿಯಾ ಕಾಂಗ್ರೆಸ್ ಕಮಿಟ ಬುಲೆಟಿನ್, ನಂ.೧೭, ದಿನಾಂಕ ೪-೧೨-೧೯೪೨, ಖಾದಿ ಶಂಕರಪ್ಪ ಸಂಗ್ರಹ, ಫೈಲ್.ನಂ.-೨, [ಕ.ರಾ.ಪ.ಇ.] ಬೆಂಗಳೂರು

೪೦. ಸೂರ್ಯನಾಥ ಕಾಮತ್, ಪೂರ್ವೋಕ್ತ, ೧೯೯೨, ಪು.೬೬

೪೧. ಪುಟ್ಟಗಂಗಮ್ಮ ಬಿ.ಆರ್, ಕೆಸ್.ಎಸ್. ರಾಜಪ್ಪನವರ ಜೀವನ ಚರಿತ್ರೆ ಸಾಧನೆ ಮತ್ತು ಸಿದ್ಧಿ ಬೆಂಗಳೂರು, ೨೦೦೧, ಪು.೧೧೪-೧೧೫

೪೨. ಸೂರ್ಯನಾಥ ಕಾಮತ್, ಕ್ವಿಟ್ ಇಂಡಿಯಾ ಮೂಮೆಂಟ್ ಇನ್ ಕರ್ನಾಟಕ, ಲಿಪಿ ಪ್ರಕಾಶನ, ಬೆಂಗಳೂರು, ೧೯೬೮, ಪು.೧೨೦

೪೩. ಸ್ವಾತಂತ್ರ್ಯ ಯೋಧರ ಮತ್ತು ಉತ್ತರಾಧಿಕಾರಿಗಳ ಕ್ವಿಟ್ ಇಂಡಿಯಾ ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆ, ಬೆಂಗಳೂರು, ೧೯೯೩, ಪು.೩೯೮

೪೪. ತುಮಕೂರು ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರ ಸಂಘ (ರಿ), ಪೂರ್ವೋಕ್ತ, ೧೯೯೨, ಪು.೩೨

೪೫. ಸೂರ್ಯನಾಥ ಕಾಮತ್(ಸಂ), ಪೂರ್ವೋಕ್ತ, ೧೯೮೦, ಪು.೮೫೬

೪೬. ಅದೇ, ಪು.೮೪೧

೪೭. ಅದೇ ಪು.೮೪೫

೪೮. ಭಾಸ್ಕರಪ್ಪ ಸಿ.ಎನ್. (ಸಂ), ತುಮಕೂರು ಜಿಲ್ಲಾದರ್ಶನ, ಟೈಮ್ಸ್ ಪಬ್ಲಿಕೇಷನ್ಸ್, ತುಮಕೂರು-೧೯೮೧, ಪು.೩೩೦

೪೯. ಸ್ವಾತಂತ್ರ್ಯ ಯೋಧರ ಮತ್ತು ಉತ್ತರಾಧಿಕಾರಿಗಳ ಕ್ವಿಟ್ ಇಂಡಿಯಾ ಸುವರ್ಣ ಮಹೋತ್ಸವ ಸ್ಮರಣ ಸಂಚಿಕೆ, ೧೯೯೩, ಬೆಂಗಳೂರು, ಪು.೩೯

೫೦. ಜವರೇಗೌಡ ದೇ(ಸಂ), ಪೂರ್ವೋಕ್ತ, ೧೯೮೨, ಪು.೩೩೩

೫೧. ಪೌರವಾಣಿ ಪತ್ರಿಕೆ, ದಿನಾಂಕ: ೨೩-೯-೧೯೪೭, [ಕ.ರಾ.ಪ.ಇ.] ಬೆಂಗಳೂರು

೫೨. ಸೂರ್ಯನಾಥ ಕಾಮತ್(ಸಂ), ಪೂರ್ವೋಕ್ತ, ಭಾಗ-೨, ೧೯೮೫ ಪು.೨೦೨

೫೩. ಕಂಠೀರವ ಪತ್ರಿಕೆ, ದಿನಾಂಕ: ೧೭-೧-೧೯೫೨ [ಕ.ರಾ.ಪ.ಇ.] ಬೆಂಗಳೂರು

೫೪. ಕವಿತಾ ಕೃಷ್ಣ, ಸರ್ವೋದಯ ಕಿರಣ ಟಿ.ಎ. ದಾಸಪ್ಪ, ರಾಕ್ ಲೈನ್ ಪ್ರಕಾಶನ, ತುಮಕೂರು, ೨೦೦೧, ಪು.೬೨-೬೩

೫೫. ಮೂಡ್ಲ ಗಿರೀಶ್ ಎಂ.ವಿ., ಮಧುಗಿರಿ ಗಾಂಧಿ-ಎಂ. ಪುಟ್ಟತಿಮ್ಮಯ್ಯ, ಮಧುಗಿರಿ, ೨೦೦೨, ಪು.೪೬

೫

# ಹಿಂದಿ ಪ್ರಚಾರ ಆಂದೋಲನ

ಗಾಂಧೀಜಿಯವರು ರೂಪಿಸಿದ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಹಿಂದಿ ಪ್ರಚಾರವು ಒಂದಾಗಿತ್ತು. ಭಾರತೀಯ ಜನ ಸಮುದಾಯದ ಅನೈಕ್ಯತೆಯನ್ನು ಹೋಗಲಾಡಿಸಿ, ಭಾವೈಕ್ಯತೆಯನ್ನುಂಟು ಮಾಡುವುದು ಗಾಂಧೀಜಿಯವರ ಜೀವನದ ಗುರಿಗಳಲ್ಲಿ ಒಂದಾಗಿತ್ತು. ಹಲವಾರು ಪ್ರಾಂತೀಯ ಭಾಷೆಗಳಿಂದ ಕೂಡಿದ ಭಾರತದಂಥ ವಿಶಾಲ ರಾಷ್ಟ್ರಕ್ಕೆ ಅವುಗಳ ಜೊತೆಗೆ ಸಾರ್ವತ್ರಿಕ ಭಾಷೆಯೊಂದು ಇಲ್ಲವಾದರೆ, ರಾಷ್ಟ್ರದ ಐಕ್ಯತೆ, ಸಮಗ್ರತೆ, ದೂರದ ಕನಸೆಂದು ಗಾಂಧೀಜಿ ಭಾವಿಸಿದ್ದರು. ೧೯೧೭ ರಲ್ಲಿ ಗುಜರಾತಿನ ಬ್ರೋಚ್‌ನಲ್ಲಿ ನಡೆದ ಶಿಕ್ಷಣ ಸಮ್ಮೇಳನದ ಅಧ್ಯಕ್ಷತೆಯನ್ನು ಗಾಂಧೀಜಿಯವರು ವಹಿಸಿಕೊಂಡಿದ್ದರು. ಆ ಸಂದರ್ಭದಲ್ಲಿ ಅವರು ರಾಷ್ಟ್ರಕ್ಕೆ ಸಾರ್ವತ್ರಿಕ ಭಾಷೆಯೊಂದರ ಅಗತ್ಯತೆಯನ್ನು “ಭಾರತದ ಹಿಂದೂಗಳಿಂದಲೂ, ಮುಸ್ಲಿಮರಿಂದಲೂ ಮಾತಿನ ಬಳಕೆಯಲ್ಲಿರುವ ಭಾಷೆ, ಅದು ದೇವನಾಗರಿ ಲಿಪಿಯಲ್ಲಿ ಹಿಂದೂಗಳು, ಮುಸ್ಲಿಮರು ಉರ್ದು ಲಿಪಿಯಲ್ಲಿಯೇ ಬರೆಯುವಂಥದು“. ಅನಂತರ ೧೯೨೦ ರಿಂದ ರಾಷ್ಟ್ರೀಯ ಶಿಕ್ಷಣದ ಅಂಗವಾಗಿ ಭಾರತದಾದ್ಯಂತ ಹಲವಾರು ದೇಶೀಯ ಶಿಕ್ಷಣ ಸಂಸ್ಥೆಗಳು ಸ್ಥಾಪನೆಯಾದವು. ಸ್ವರಾಜ್, ಸ್ವದೇಶಿ, ಸ್ವಾವಲಂಬನೆ ಈ ಭಾವನೆಗಳು ಹಿಂದಿ ಭಾಷಾ ಪ್ರಸಾರಕ್ಕೆ ಗಾಂಧೀಜಿಯವರಿಗೆ ಸ್ಫೂರ್ತಿ ನೀಡಿದವು. ದಕ್ಷಿಣದ ಜನ ಉತ್ತರದ ಜನ ಎಂಬ ಭೇದಭಾವನೆ ಕಣ್ಮರೆಯಾಗಿ ಒಂದು ರಾಷ್ಟ್ರ, ಒಂದು ಹೃದಯ, ಒಂದು ಭಾಷೆ ಎಂಬ ಮನೋಭಾವನೆ ಬೆಳೆಯಲು ಅವಕಾಶವಾಯಿತು.[೧]

ದ್ರಾವಿಡ ಪಂಚ ಭಾಷೆಗಳಾದ ತಮಿಳು, ತೆಲುಗು, ಕನ್ನಡ, ಮಲೆಯಾಳಂ ಮತ್ತು ತುಳು ಭಾಷೆಗಳು ಹಿಂದಿಯಿಂದ ತೀರ ಭಿನ್ನವಾಗಿದ್ದವು. ಆದುದ್ದರಿಂದ ದಕ್ಷಿಣ ಭಾರತದಲ್ಲಿ ಹಿಂದಿ ಪ್ರಚಾರವನ್ನು ಅತ್ಯಂತ ಅಗತ್ಯವಾಗಿ ಕೈಗೊಳ್ಳಬೇಕಾಗಿತ್ತು. ಅದಕ್ಕಾಗಿ ಹಿಂದಿ ಪ್ರಚಾರಕ್ಕಾಗಿ “ದಕ್ಷಿಣ ಭಾರತ ಹಿಂದಿ ಪ್ರಚಾರ ಸಮಿತಿ” ಎಂಬ ಸಂಸ್ಥೆಯನ್ನು ಗಾಂಧೀಜಿ ಸ್ಥಾಪಿಸಿದರು. ಮದರಾಸಿನಲ್ಲಿ ಅದರ ಕೇಂದ್ರ ಕಛೇರಿಯನ್ನು ವ್ಯವಸ್ಥೆ ಮಾಡಿದರು. ಅವರ ಕೊನೆಯ ಮಗ ದೇವದಾಸ್ ಗಾಂಧೀಯನ್ನೇ ಪ್ರಥಮ ಪ್ರಧಾನ ಪ್ರಚಾರಕನನ್ನಾಗಿ ಮಾಡಿದರು. ಈ ಸಂಸ್ಥೆ

ಆಂಧ್ರ ಪ್ರದೇಶ, ತಮಿಳುನಾಡು, ಕೇರಳ, ಕರ್ನಾಟಕ ಎಲ್ಲಾ ರಾಜ್ಯಗಳಲ್ಲಿಯೂ ಉಪಕೇಂದ್ರಗಳನ್ನು ಹೊಂದಿತ್ತು. ಇದರಿಂದಾಗಿ ಸಹಸ್ರಾರು ಮಂದಿ ಸ್ತ್ರೀ-ಪುರುಷರು ಹಿಂದಿ ಕಲಿತುದುದಲ್ಲದೆ ಅದರ ಪ್ರಚಾರ ಕಾರ್ಯದಲ್ಲಿಯೂ ತೊಡಗಿದರು. ಇದರ ಫಲವಾಗಿ ಉತ್ತರ ಮತ್ತು ದಕ್ಷಿಣ ಭಾರತಗಳ ನಡುವಿನ ಅಂತರ ಕಡಿಮೆಯಾಗಿ ಪರಸ್ಪರ ಅರಿವಿಗೆ ಕಾರಣವಾಯಿತು. ಇದರಿಂದಾಗಿ ರಾಷ್ಟ್ರೀಯ ಚಳುವಳಿಗೆ ಒಳ್ಳೆಯ ಉತ್ತೇಜನ ದೊರೆಯಿತು.[೨]

೧೯೨೫ ರಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಒಂದು ನಿರ್ಣಯವನ್ನು ಅಂಗೀಕರಿಸಿ ಅದರ ಕಾರ್ಯ ಕಲಾಪಗಳನ್ನು ಆದಷ್ಟು ಹಿಂದೂಸ್ಥಾನಿ ಭಾಷೆಯಲ್ಲೇ ನಡೆಯಬೇಕೆಂದು ನಿರ್ಧಾರ ಕೈಗೊಂಡಿತು. ೧೯೩೫ ರಲ್ಲಿ ಇಂದೂರಿನಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯನ್ನು ಗಾಂಧೀಜಿಯವರು ವಹಿಸಿದ್ದರು. ಹಿಂದಿ ಮಾತನಾಡದ ಉತ್ತರ ಮತ್ತು ಪಶ್ಚಿಮ ಭಾರತದಲ್ಲಿ ಹಿಂದಿ ಆಂದೋಲನವನ್ನು ಆರಂಭಿಸಲು ನಿರ್ಧಾರ ಕೈಗೊಳ್ಳಲಾಯಿತು. ೧೯೩೬ ರಲ್ಲಿ ನಡೆದ ಸಾಹಿತ್ಯ ಸಮ್ಮೇಳನವು ಡಾ॥ ಬಾಬುರಾಜೇಂದ್ರಪ್ರಸಾದ ರ ಅಧ್ಯಕ್ಷತೆಯಲ್ಲಿ ನಡೆದಾಗ ಹಿಂದಿ ಪ್ರಚಾರವು ಸ್ವತಂತ್ರ ಸಮಿತಿಯಡಿಯಲ್ಲಿ ನಡೆಯಬೇಕು ಎಂದು ತೀರ್ಮಾನವಾಯಿತು. ವಾರ್ಧಾ ಅದರ ಕೇಂದ್ರವಾಯಿತು. ಕಾಕಾಕಾಲ್ಕೇಲರವರು ಅದರ ಜವಾಬ್ದಾರಿ ವಹಿಸಿಕೊಂಡರು. ಈ ಸಂಸ್ಥೆ "ರಾಷ್ಟ್ರಾ ಭಾಷಾ ಪ್ರಚಾರ ಸಮಿತಿ" ಎಂಬ ಹೆಸರನ್ನು ಪಡೆಯಿತು. ಅದೇ ರೀತಿಯಾಗಿ ೧೯೪೨ ರ ಮೇ ತಿಂಗಳಿನಲ್ಲಿ "ಹಿಂದೂಸ್ಥಾನಿ ಪ್ರಚಾರ ಸಭಾ" ಎಂಬ ಸಂಸ್ಥೆಯನ್ನು ವಾರ್ಧಾದಲ್ಲಿ ಡಾ॥ ರಾಜೇಂದ್ರ ಪ್ರಸಾದ್‌ರವರ ಅಧ್ಯಕ್ಷತೆಯಲ್ಲಿ ಸ್ಥಾಪನೆಯಾಯಿತು.[೩] ಭಾರತದ ಸಂವಿಧಾನ ಸಮಿತಿಯು ಸಂವಿಧಾನದಲ್ಲಿ ೩೪೩ ನೆಯ ವಿಧಿಯನ್ವಯ ಒಂದನೆಯ ಉಪವಿಧಿಯ "ಭಾರತದ ಒಕ್ಕೂಟದ ಅಧಿಕಾರಿ ಭಾಷೆಯು ದೇವನಾಗರಿ ಲಿಪಿಯುಳ್ಳ ಹಿಂದಿಯಾಗಿರತಕ್ಕದ್ದು" ಎಂದು ನಿರ್ಧರಿಸಿತು. ಹೀಗೆ ಭಾರತದಲ್ಲಿ ಹಿಂದಿ ಭಾಷೆಯ ಪ್ರಚಾರದ ಬೆಳವಣಿಗೆಯಾದಂತೆ ಕರ್ನಾಟಕದಲ್ಲಿಯೂ ಹಿಂದಿ ಪ್ರಚಾರದ ಬೆಳವಣಿಗೆಯನ್ನು ಕಾಣಬಹುದು.

ಗಾಂಧೀಜಿಯವರ ೧೯೨೭ ರ ಕರ್ನಾಟಕ ಪ್ರವಾಸದ ನಂತರ ಹಿಂದಿ ಪ್ರಚಾರಕ್ಕೆ ಹೊಸ ಹುರುಪು ಬಂದಿತ್ತು. ಕಾಂಗ್ರೆಸ್ಸಿನ ನಾಯಕರಾದ ಜಮ್ನಲಾಲ್‌ದಾಸ್, ಜಡ್.ಆರ್. ಅನ್ಸಾರಿರವರು ಕರ್ನಾಟಕದಾದ್ಯಂತ ಪ್ರವಾಸ ಕೈಗೊಂಡು ಹಿಂದಿ ಪ್ರಚಾರ ಕಾರ್ಯವನ್ನು ಹಮ್ಮಿಕೊಂಡಿದ್ದರು.[೪] ಇದು ಅಲ್ಲದೇ ಮಾಧ್ಯಮಿಕ ಮತ್ತು ಪ್ರೌಢಶಾಲೆಗಳಲ್ಲಿ ಹಿಂದಿ ಪ್ರಚಾರ ಕಾರ್ಯವನ್ನು ಹಮ್ಮಿಕೊಳ್ಳಲಾಯಿತು.[೫] ಇದರಿಂದಾಗಿ ದಕ್ಷಿಣ ಭಾರತ ಹಿಂದಿ ಪ್ರಚಾರ ಸಮಿತಿಯ ಶಾಲೆಗಳು ಕರ್ನಾಟಕದ ೯ ಸ್ಥಳಗಳಲ್ಲಿ ಹುಟ್ಟಿಕೊಂಡವು. ಬೆಂಗಳೂರಿನಲ್ಲಿಯೂ ಇದರ ಶಾಖೆ ಹುಟ್ಟಿಕೊಂಡಿತು. ಈ ಶಾಖೆ ೧೯೩೧ ರಲ್ಲಿ ಹಿಂದಿ ಪ್ರಚಾರ ಪರೀಕ್ಷೆಯನ್ನು ನಡೆಸಿತು. ಅದರಲ್ಲಿ ೩೭೯ ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತಿದ್ದು ಇದರ ಬಹುಪಾಲು ಬೆಂಗಳೂರು ೧೨೮ ಮತ್ತು

ಮೈಸೂರು ಶಾಖೆ ೬೭ ವಿದ್ಯಾರ್ಥಿಗಳು ಆಗಿದ್ದರು.[೬] ೧೯೩೭ರಲ್ಲಿ ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ಅಖಿಲ ಕರ್ನಾಟಕ ಹಿಂದಿ ಪರಿಷತ್ತು ಬೆಂಗಳೂರಿನಲ್ಲಿ ನಡೆಯಿತು. ಸಿದ್ಧನಾಥ ಪಂಡಿತರು ಹಿಂದೂಸ್ಥಾನಿಯ ಪ್ರಚಾರಕ್ಕಾಗಿ ತಮ್ಮ ವಿದ್ಯಾರ್ಥಿಗಳ ಏಳಿಗೆಗಾಗಿ ಜ್ಞಾನಿಯಾತ್ರೆ ಮಂಡಲ ಎಂಬುದರ ಮೂಲಕ ಹಿಂದಿ ಪ್ರಚಾರ ಕಾರ್ಯವನ್ನು ನಡೆಸಿದರು. ಹಿಂದಿ ವಿದ್ಯಾಲಯಗಳು ಹಾಗೂ ಪ್ರಚಾರ ಮಂಡಳಿಗಳನ್ನು ಸಂಸ್ಥಾನದಲ್ಲಿ ತೆರೆದು ಹಿಂದಿ ಪ್ರಚಾರದಲ್ಲಿ ಆಸಕ್ತಿ ವಹಿಸಿದರು. ಹಿಂದೀ ಭಾಷೆ ಹಾಗೂ ಹಿಂದಿ ಶಾಲೆಗಳಿಗೆ ಸಂಬಂಧಿಸಿದಂತೆ ಸಂಸ್ಥಾನದ ಸರ್ಕಾರವು ಹೆಚ್ಚಿನ ಪ್ರೋತ್ಸಾಹ ನೀಡಲಾರಂಭಿಸಿತು. ಈ ಕಾರ್ಯಕ್ಕಾಗಿ ಕರ್ನಾಟಕ ಪ್ರಾಂತೀಯ ಹಿಂದಿ ಪ್ರಚಾರ ಸಭಾ ಹಾಗೂ ಹಿಂದಿ ಪ್ರೇಮಿ ಮಂಡಲ ಎಂಬ ಸಂಸ್ಥೆಗಳನ್ನು ಸ್ಥಾಪಿಸಿ, ಹೆಚ್ಚಿನ ರೀತಿಯಿಂದ ಸ್ಪಂದಿಸಿತು.[೭]

ಹಿಂದಿ ಭಾಷೆಯ ಪ್ರಚಾರವು ರಾಷ್ಟ್ರೀಯ ಶಿಕ್ಷಣಕ್ಕೆ ಸಂಬಂಧ ಹೊಂದಿದ್ದು, ಇದು ಹಿಂದೂಸ್ಥಾನದ ಏಕತೆ ಹಾಗೂ ಐಕ್ಯತೆಗೆ ತಳಹದಿಯಾಗಿ ಕೆಲಸ ಮಾಡಿದೆ. ಈ ನಿಟ್ಟಿನಲ್ಲಿ ಬೆಂಗಳೂರಿನಲ್ಲಿ ೧೯೩೮ ರಲ್ಲಿ ನಡೆದ ಕರ್ನಾಟಕ ಪ್ರಾಂತೀಯ ಹಿಂದಿ ಪ್ರಚಾರ ಸಭೆ, ಹಿಂದೀ ಭಾಷೆಯನ್ನು ಪ್ರಚಾರ ಕಾರ್ಯದ ಮೂಲಕ ಪ್ರಾಂತ್ಯದಲ್ಲಿ ಸಹ ಮುಂದುವರೆಸುವುದು ಮತ್ತು ಸದ್ಯಕ್ಕೆ ಹಿಂದಿ ಪ್ರಚಾರ ಕೈಗೊಂಡಿರುವ ಹಿಂದಿ ಸಂಘಗಳಿಗೆ ಪ್ರೋತ್ಸಾಹ ಮತ್ತು ಸಹಾಯಕವಾಗಿ ಕೆಲಸ ಮಾಡಬೇಕೆಂದು ಸಭೆ ತೀರ್ಮಾನಿಸಿತು.[೮] ಅನಂತರ ಕರ್ನಾಟಕ ಹಿಂದಿ ಪ್ರಚಾರ ಸಮಿತಿಯು ೧೯೩೯ ರಲ್ಲಿ ಬೆಂಗಳೂರಿನಲ್ಲಿ ಹಿಂದಿಯ ಅಭಿವೃದ್ಧಿಗಾಗಿ ಸ್ಥಾಪಿತವಾಯಿತು.[೯] ಈ ಸಂಸ್ಥೆಯ ಸ್ಥಾಪನೆಯ ನಂತರ ಸಂಸ್ಥಾನದಾದ್ಯಂತ ಹಿಂದಿ ಪ್ರಚಾರ ಕಾರ್ಯ ಭರದಿಂದ ಸಾಗಿತ್ತು. ಈ ಸಂದರ್ಭದಲ್ಲಿ ತುಮಕೂರು ಜಿಲ್ಲೆಯು ಹೊರತಾಗಿರಲಿಲ್ಲ. ಇಲ್ಲಿಯೂ ಸಹ ಗಾಂಧೀಜಿಯವರ ಹಿಂದಿ ಪ್ರಚಾರ ಚಟುವಟಿಕೆಗಳು ವ್ಯಾಪಿಸಿ ಭರದಿಂದ ಸಾಗಿದವು.

ಗಾಂಧೀಜಿಯವರ ಹಿಂದಿ ಪ್ರಚಾರ ಕಾರ್ಯಕ್ರಮಕ್ಕೆ ತುಮಕೂರು ಜಿಲ್ಲೆಯ ಜನತೆ ಹೇಗೆ ಸ್ಪಂದಿಸಿತು ಎಂಬುದನ್ನು ಕೆಲವು ಅಂಶಗಳ ಮೂಲಕ ವ್ಯಕ್ತಪಡಿಸಬಹುದು. ಕರ್ನಾಟಕದಲ್ಲಿ ಹಿಂದಿ ಪ್ರಚಾರ ಕಾರ್ಯ ಸಂಘಟನೆಗೆಂದೇ ಸ್ಥಾಪಿತವಾಗಿದ್ದ ಸಂಸ್ಥೆಗಳ ದೃಷ್ಟಿ ಈ ಜಿಲ್ಲೆಯ ಕಡೆಗೆ ಮೊದಲು ಹರಿಯಲಿಲ್ಲ. ಆದರೂ ಜಿಲ್ಲೆಯಲ್ಲಿ ಹಿಂದಿ ಪ್ರಚಾರಕ್ಕೆ ಪ್ರೇರಕವಾದ ಮುಖ್ಯ ಘಟನೆಯೆಂದರೆ ಗಾಂಧೀಜಿಯವರು ಖಾದಿ ಪ್ರಚಾರ ನಿಮಿತ್ತವಾಗಿ ಸಂಸ್ಥಾನದಾದ್ಯಂತ ಪ್ರವಾಸ ಕೈಗೊಂಡು ೧೯೨೭ ಜುಲೈ ೧೪ ರಂದು ತುಮಕೂರಿಗೆ ಭೇಟಿ ನೀಡಿದರು. ಈ ಸಂದರ್ಭದಲ್ಲಿ ತುಮಕೂರಿನ ಹೈಸ್ಕೂಲಿನ ಮೈದಾನದಲ್ಲಿ ನೆರೆದಿದ್ದ ದೊಡ್ಡ ಸಾರ್ವಜನಿಕ ಸಭೆಯನ್ನು ಉದ್ದೇಶಿಸಿ ಹಿಂದಿ ಭಾಷೆಯಲ್ಲಿ ಭಾಷಣ ಮಾಡಿದರು. ಅವರ ಒಂದೊಂದು ಮಾತು ಆಗ ಹಿಂದೀ ಭಾಷೆ ಅರ್ಥವಾಗದಿದ್ದರು ನಮ್ಮ ಮನಸ್ಸಿನಲ್ಲಿ ನೆಲೆ ನಿಂತವು[೧೦] ಎಂದು

ತುಮಕೂರು ಜಿಲ್ಲೆಯ ಗಾಂಧೀ ಅನುಯಾಯಿಯಾದ ಜಿ.ವಿ. ನಾರಾಯಣ ಮೂರ್ತಿಯವರು ಗಾಂಧೀಜಿಯವರ ಹಿಂದಿ ಭಾಷಣದ ಬಗ್ಗೆ ಮೆಚ್ಚಿಗೆ ವ್ಯಕ್ತಪಡಿಸಿದ್ದಾರೆ.

ಗಾಂಧೀಜಿಯವರು ತುಮಕೂರಿಗೆ ಭೇಟಿ ನೀಡಿದ ನಂತರ ಜಿಲ್ಲೆಯಲ್ಲಿ ಹಿಂದಿ ಪ್ರಚಾರ ಕಾರ್ಯದ ಬಗ್ಗೆ ಕಾಂಗ್ರೆಸ್ಸಿಗರು, ಅಲ್ಲದೇ ಕೆಲವರು ಶ್ರದ್ಧಾಳುಗಳ ಪರಿಶ್ರಮದ ಫಲವಾಗಿ ಕ್ಷೇತ್ರ ಸಿದ್ಧವಾಯಿತು. ಈ ದಿಸೆಯಲ್ಲಿ ಇಬ್ಬರು ವಿದ್ವಾಂಸರುಗಳ ಸೇವೆ ವಿಶೇಷವಾಗಿ ಸ್ಮರಣೀಯವಾದದ್ದು ೧೯೩೦ ರ ವೇಳೆಯಲ್ಲಿ ತುಮಕೂರಿನಲ್ಲಿ ಆ.ತಿ. ಶ್ರೀನಿವಾಸ ರಾಘವಾಚಾರ್ಯರು, ೧೯೩೭ ರಲ್ಲಿ ಮಧುಗಿರಿಯಲ್ಲಿ ಪಿ.ಕೆ. ನಾರಾಯಣಾಚಾರ್ಯರು ತಮ್ಮ ತಮ್ಮ ಕ್ಷೇತ್ರಗಳಲ್ಲಿ ಹಿಂದಿ ಪ್ರಚಾರ ಕಾರ್ಯವನ್ನು ಶ್ರದ್ಧಾಪೂರ್ವಕವಾಗಿ ನಡೆಸುತ್ತಿದ್ದರು. ಪ್ರಸಿದ್ಧ ಹಿಂದಿ ವಿದ್ವಾಂಸರುಗಳ ಸಾನಿಧ್ಯ ಸಂಪರ್ಕದಲ್ಲಿದ್ದು ವಿಶೇಷ ಅರ್ಹತೆಯಿಂದ ಅವರು ಈ ಕ್ಷೇತ್ರದಲ್ಲಿ ಜಿಲ್ಲೆಗೆ ಅಮೋಘವಾದ ಸೇವೆಯನ್ನು ಸಲ್ಲಿಸಿರುವುದು ಅತ್ಯಂತ ಶ್ಲಾಘನೀಯವಾದದ್ದು.[೧೧] ಇದೇ ರೀತಿ ತುಮಕೂರಿನ ಬಿ.ಸಿ. ನಂಜುಂಡಯ್ಯನವರು ೧೯೩೦ ರಿಂದ ೧೯೩೪ ರವರೆಗೂ ಮಧುಗಿರಿ, ತಿಪಟೂರುಗಳಲ್ಲಿ ಹಿಂದಿ ಪ್ರಚಾರ ಕಾರ್ಯವನ್ನು ಕೈಗೊಂಡಿದ್ದರು. ಧಾರವಾಡದಲ್ಲಿರುವ ಕರ್ನಾಟಕ ರಾಜ್ಯದ ಹಿಂದಿ ಪ್ರಚಾರ ಸಮಿತಿಗೆ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದರು.[೧೨]

೧೯೩೦ ರ ದಶಕದಲ್ಲಿ ಗಾಂಧೀಜಿಯವರ ಪ್ರೇರಿತವಾದ ರಚನಾತ್ಮಕ ಕಾರ್ಯಕ್ರಮಗಳು ದೇಶದಲ್ಲೆಲ್ಲ ಭರದಿಂದ ನಡೆಯುತ್ತಿದ್ದವು. ಇದರ ಅಂಗವಾಗಿ ರಾಷ್ಟ್ರ ಭಾಷಾ ಹಿಂದಿ ಪ್ರಚಾರ ಕಾರ್ಯ ತುಮಕೂರಿನಲ್ಲಿ ಪ್ರಾರಂಭವಾಯಿತು. ಇದರಿಂದ ಪ್ರಭಾವಿತರಾದ ಜಿ.ವಿ. ನಾರಾಯಣ ಮೂರ್ತಿಯವರು ಹಿಂದಿ ಭಾಷೆಯ ಮಧ್ಯಮ ಪರೀಕ್ಷೆಗೆ ಕುಳಿತು ತೇರ್ಗಡೆಯಾದರು. ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದೊಂದೇ ಅವರ ಗುರಿಯಾಗಿರಲಿಲ್ಲ. ಹಿಂದಿ ಭಾಷೆಯನ್ನು ಚೆನ್ನಾಗಿ ಕಲಿತು ಹಿಂದಿ ನಾಟಕಗಳನ್ನು ಪ್ರದರ್ಶಿಸುವುದರ ಮೂಲಕ ಹಿಂದಿ ಪ್ರಚಾರವನ್ನು ಕೈಗೊಂಡು ಯಶಸ್ವಿಗೊಳಿಸುವುದಾಗಿತ್ತು. ಜಿಲ್ಲೆಯ ಹಿರಿಯ ನಾಯಕರಾದ ಟಿ. ಸುಬ್ರಹ್ಮಣ್ಯಂ ಎ. ನೀಲಕಂಠರಾಯರೊಡನೆ ಸೇರಿಕೊಂಡು 'ವೀರ ಅಭಿಮನ್ಯು' ಮತ್ತು 'ಮೇವಾಡದ ಪತನ' ಎಂಬ ನಾಟಕಗಳನ್ನು ಹಿಂದಿ ಭಾಷೆಯಲ್ಲಿ ಕಲಿತು ಪ್ರದರ್ಶನ ನೀಡಿದರು.[೧೩] ಈ ಸಮಯದಲ್ಲಿ ೧೯೩೪ ರಲ್ಲಿ ಅಸ್ಪೃಶ್ಯತಾ ನಿವಾರಣೆಯ ಚಳುವಳಿಯ ಅಂಗವಾಗಿ ತುಮಕೂರಿಗೆ ಗಾಂಧೀಜಿಯವರು ಭೇಟಿ ನೀಡಿದ್ದರು. ಆಗ ತುಮಕೂರಿನ ಜನತೆಯನ್ನು ಕುರಿತು ಹಿಂದಿ ಪ್ರಚಾರ ಕಾರ್ಯದಲ್ಲಿ ಹೆಚ್ಚು ಹೆಚ್ಚು ಜನರು ಭಾಗವಹಿಸಬೇಕು. ಇದರಿಂದಾಗಿ ಜನತೆಯಲ್ಲಿ ಹೆಚ್ಚು ಹೆಚ್ಚು ರಾಷ್ಟ್ರೀಯ ಜಾಗೃತಿಯುಂಟಾಗಿ ರಾಷ್ಟ್ರೀಯ ಚಳುವಳಿಯೂ, ಜನ ಜಾಗೃತಿಯ ಚಳುವಳಿಯಾಗುತ್ತದೆ ಎಂದು ಅದರ ಜೊತೆಗೆ ನಿಮ್ಮ ಪ್ರಾದೇಶಿಕ ಭಾಷೆಯಾದ ಕನ್ನಡ ಭಾಷೆಯನ್ನು ಅಭ್ಯಾಸ ಮಾಡುವುದು ಮರೆಯಬೇಡಿ[೧೪] ಎಂದು ಸಾರ್ವಜನಿಕರಿಗೆ ತಿಳಿಸಿದರು.

ತುಮಕೂರು ಜಿಲ್ಲೆಯಲ್ಲಿ ವ್ಯವಸ್ಥಿತವಾಗಿ ವ್ಯಾಪಕವಾದ ರೀತಿಯಲ್ಲಿ ಹಿಂದಿ ಪ್ರಚಾರ ಕಾರ್ಯ ನಡೆಯಬೇಕಾದ ಅವಶ್ಯಕತೆಯಿತ್ತು. ಜಿಲ್ಲೆಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ ತಮ್ಮ ಸೇವೆಯನ್ನು ಸಲ್ಲಿಸುತ್ತಿದ್ದ ಮೂರ್ತಿ ವಾಸುದೇವರಾಯರ ಮನಸ್ಸಿಗೆ ಹಿಂದಿ ಪ್ರಚಾರ ಕಾರ್ಯದಲ್ಲಿ ತೊಡಗುವ ಪ್ರೇರಣೆಯಾಯಿತು. ಆದರೆ ಈ ಕೆಲಸ ಸುಲಭ ಸಾಧ್ಯವಾಗಿರಲಿಲ್ಲ, ಏನೊಂದು ಇಲ್ಲದ ಕಡೆ ಏನೆಲ್ಲವನ್ನು ಸಾಧಿಸಬೇಕಾಗಿತ್ತು. ಆ ಸಂದರ್ಭದಲ್ಲಿ ಟಿ. ಸುಬ್ರಮಣ್ಯಂ, ಕೆ. ರಂಗೈಯ್ಯಾಂಗಾರ್, ಎಂ.ವಿ. ರಾಮರಾವ್, ಮಾಲಿಮರಿಯಪ್ಪ ಬಿ.ಸಿ. ನಂಜುಂಡಯ್ಯ, ಸಿದ್ಧವ್ವನಹಳ್ಳಿ ಕೃಷ್ಣಶರ್ಮರವರ ಪ್ರೋತ್ಸಾಹದಿಂದಾಗಿ, ಹೆಚ್.ಎಲ್.ಎನ್. ಶಾಸ್ತ್ರಿ, ರಾ. ನರಸಿಂಹಮೂರ್ತಿ, ಹರ್ತಿ ಆದಿರಾಜಯ್ಯ, ಎಸ್. ರುದ್ರಣ್ಣ, ಟಿ.ಜಿ. ಗುಬ್ಬಿ ಹುಚ್ಚಪ್ಪ, ಡಿ.ಆರ್. ಕೆಂಗಸೂರು, ಶ್ರೀಮತಿ ಗೌರಮ್ಮ ಮೊದಲಾದ ಹಿತೈಷಿಗಳ, ಸಕ್ರಿಯ ಸಹಕಾರದಿಂದ, ಹಿರಿಯರಾದ ಸಿದ್ಧವ್ವನಹಳ್ಳಿ ನಿಜಲಿಂಗಪ್ಪ, ಆರ್.ಆರ್. ದಿವಾಕರ್‌ರವರ ಸಹಕಾರಗಳ ಫಲವಾಗಿ ೧೯೪೫ ಅಕ್ಟೋಬರ್‌ನಲ್ಲಿ ತುಮಕೂರಿನಲ್ಲಿ ಹಿಂದಿ ಪ್ರಚಾರ ಸಮಿತಿಯೂ ಸ್ಥಾಪನೆಯಾಯಿತು. ತಾಳಿಕೆರೆಸುಬ್ರಮಣ್ಯಂರವರಿಗೆ ಹಿಂದಿ ಪ್ರಚಾರ ಕಾರ್ಯದಲ್ಲಿ ಬಹಳ ಆಸಕ್ತಿಯಿದ್ದುದರಿಂದ ಆರಂಭದ ಕೆಲವು ದಿನಗಳಲ್ಲಿ ಸಮಿತಿಯ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದರು. ಆನಂತರ ಬಿ.ಸಿ. ನಂಜುಂಡಯ್ಯನವರು ಹಿಂದೀ ಪ್ರಚಾರ ಸಮಿತಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿ ಬಹುಮುಖ ಯಶಸ್ವಿಗೆ ಕಾರಣರಾಗಿದ್ದರು. ಈ ಹಿಂದಿ ಪ್ರಚಾರ ಸಮಿತಿಯ ಪದಾಧಿಕಾರಿಗಳು

| | |
|---|---|
| ಬಿ.ಸಿ. ನಂಜುಂಡಯ್ಯ | ಅಧ್ಯಕ್ಷರು |
| ಟಿ.ಪಿ. ಕೃಷ್ಣಪ್ಪ | ಉಪಾಧ್ಯಕ್ಷರು |
| ಮೂ. ಶ್ರೀ ವಾಸುದೇವ | ಕಾರ್ಯದರ್ಶಿ |
| ಟಿ.ಎಸ್.ಎಲ್.ಎನ್. ಮೂರ್ತಿ | ಸದಸ್ಯರು |
| ಎ.ಎಸ್. ನಂದೀಶ್ | |
| ರಾ. ನರಸಿಂಹಮೂರ್ತಿ | |
| ಕೆ. ಲಲಿತಾಂಬ | |
| ಡಾ|| ಟಿ.ಎಸ್. ಮಲ್ಲಿಕಾರ್ಜುನಯ್ಯ | |
| ವಿ. ಚಿಕ್ಕವೀರಯ್ಯ | |
| ಹೆಚ್.ಆರ್. ಗುಂಡೂರಾವ್ | |

ಡಿ.ಎನ್. ಅನಂತನಾರಾಯಣಶೆಟ್ಟಿ

ಟಿ.ಎಸ್. ವಸಂತಕುಮಾರ್

ಟಿ.ಬಿ. ನರಸಿಂಹಮೂರ್ತಿ

ಟಿ.ಎನ್. ರಾಮಾನುಜಂ

ಹಿಂದಿ ಪ್ರಚಾರ ಸಮಿತಿಯ ಯಶಸ್ವಿಗಾಗಿ ಮೂ.ಶ್ರೀ ವಾಸುದೇವ ರಾಯರವರು ಅಪಾರವಾಗಿ ಸೇವೆ ಸಲ್ಲಿಸಿದ್ದರು.[೧೫] ಕೊರಟಗೆರೆ ತಾಲ್ಲೂಕಿನ ತೀತಾ ಗ್ರಾಮದ ಡಿ.ಆರ್. ಮುದ್ದಪ್ಪನವರು ಈ ಹಿಂದಿ ಪ್ರಚಾರ ಸಮಿತಿಯ ಸಕಲ ಚಟುವಟಿಕೆಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು[೧೬] ಯಶಸ್ವಿಗೊಳಿಸಲು ಸೇವೆ ಸಲ್ಲಿಸಿದ್ದರು.

ತುಮಕೂರು ಜಿಲ್ಲಾ ಹಿಂದಿ ಪ್ರಚಾರ ಸಮಿತಿಯ ತರಗತಿಗಳು ಪ್ರಾರಂಭದಲ್ಲಿ ಆರ್ಯನ್ ಪ್ರೌಢಶಾಲೆಯಲ್ಲಿ ಸಂಸ್ಕೃತ ಅಧ್ಯಾಪಕರಾಗಿದ್ದ ವಿದ್ವಾನ್ ಕು.ರಾ. ಸುಬ್ರಮಣ್ಯಂ ಮತ್ತು ಶ್ರೀಮತಿ ಕೆ. ಲಲಿತಾಂಬ ರವರ ನೇತೃತ್ವದಲ್ಲಿ ಪ್ರಾರಂಭವಾಗಿ ಕ್ರಮೇಣ ಇನ್ನು ಅನೇಕ ಅಧ್ಯಾಪಕ ಮಿತ್ರರಾದ ಹೆಚ್.ಎಲ್.ಸೂರ್ಯನಾರಾಯಣರಾವ್, ಸಿ.ಎಸ್. ಅಮೃತ್, ಹೆಚ್.ವಿ. ನಾರಾಯಣರಾವ್, ರುಕ್ಕಮ್ಮ ಬಿ.ಜಿ. ಶ್ರೀನಿವಾಸಮೂರ್ತಿ, ಹೆಚ್.ಎಲ್. ಸುಶೀಲಮ್ಮ ರಾ. ನರಸಿಂಹಮೂರ್ತಿ, ಲಕ್ಷ್ಮೀದೇವಮ್ಮ ಸಿ.ಎಸ್. ಶಾಂತ, ನರಸಿಂಹಚಾರ್, ಸೀತಾಲಕ್ಷ್ಮಿ ಜಯಮ್ಮ ಕಮಲ, ವಿಜಯಲಕ್ಷ್ಮಿ ಪುಟ್ಟಸ್ವಾಮಯ್ಯ, ಆಚಾರ್ಯಗಣಪತಿ, ಹೆಚ್.ಆರ್.ಪ್ರಕಾಶ್, ಹೆಚ್. ಶೇಷಾದ್ರಿ, ಗೋಪಾಲಕೃಷ್ಣ, ಮುನೀರ್ ಅಹಮದ್, ಎನ್. ಕೃಷ್ಣ ಮೂರ್ತಿ, ಕೆ.ಎಸ್. ವಾಸುದೇವಮೂರ್ತಿ, ನಾಗಭೂಷಣರಾವ್, ಎ.ವಿ. ಶ್ರೀಕಂಠಯ್ಯ, ಸಮಿತಿಯ ಹಿಂದಿ ತರಗತಿಗಳನ್ನು ನಡೆಸುವುದರ[೧೭] ಮೂಲಕ ಹಿಂದಿ ಪ್ರಚಾರಕ್ಕೆ ಅಮೋಘ ಸೇವೆ ಸಲ್ಲಿಸಿದ್ದರು. ಈ ಸಮಿತಿಯೂ ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮದ ಅಂಗವಾಗಿ ಪ್ರಾರಂಭವಾದರೂ, ಅನಂತರ ಈ ಸಂಸ್ಥೆಯೂ ಬೃಹದಾಕಾರವಾಗಿ ಬೆಳೆದು ಜನತೆಯಲ್ಲಿ ರಾಷ್ಟ್ರೀಯ ಮನೋಭಾವನೆಯನ್ನು ಬೆಳೆಸಲು ಬಹಳ ಶ್ರಮಿಸಿತು. ಈ ಸಂಸ್ಥೆಯ ಕಾರ್ಯದರ್ಶಿಗಳಾದ ಮೂ. ಶ್ರೀ ವಾಸುದೇವರಾಯರು, ಹರ್ತಿ ಆದಿರಾಜಯ್ಯನವರು ಜಿಲ್ಲೆಯಲ್ಲಿ ಹಿಂದುಸ್ಥಾನಿ ಪ್ರಚಾರಕ್ಕಾಗಿ ಅಪಾರವಾಗಿ ದುಡಿದರು. ಈ ಸಮಿತಿಯ ಆಶ್ರಯದಲ್ಲಿ ನಡೆದ ತರಗತಿಗಳಲ್ಲಿ ಹಿಂದೀ ಭಾಷೆಯಲ್ಲಿ ವ್ಯಾಸಂಗ ಮಾಡಿ ೧೯೪೬ ನವೆಂಬರ್ ಪರೀಕ್ಷೆಗೆ ಕುಳಿತುಕೊಂಡಿದ್ದ ೧೧೫ ಜನ ವಿದ್ಯಾರ್ಥಿಗಳಲ್ಲಿ ೮೧ ವಿದ್ಯಾರ್ಥಿಗಳು, ೧೯೪೭ ರ ಫೆಬ್ರುವರಿ ಪರೀಕ್ಷೆಗೆ ಕುಳಿತಿದ್ದ ೧೩೩ ವಿದ್ಯಾರ್ಥಿಗಳಲ್ಲಿ, ೯೬ ವಿದ್ಯಾರ್ಥಿಗಳು ಉತ್ತೀರ್ಣರಾಗಿದ್ದರು.[೧೮] ಈ ಸಮಿತಿಯ ಹಿಂದಿ ಬೋಧನಾ ತರಗತಿಗಳು ಇಂದು ತುಮಕೂರಿನ ಚಿಕ್ಕಪೇಟೆಯಲ್ಲಿರುವ ಹಳೇ ಪೂರ್ಣಯ್ಯ ಛತ್ರದಲ್ಲಿ ಸಂಜೆ ೬.೩೦ ರಿಂದ ೮.೩೦ ರವರೆಗೆ ನಡೆಯುತ್ತವೆ. ಈ ತರಗತಿಗಳಿಗೆ ಸುಮಾರು

೨೦೦-೩೦೦ ವಿದ್ಯಾರ್ಥಿಗಳು ಹಾಜರಾಗಿ ಹಿಂದಿ ಭಾಷೆ ಕಲಿಯುವಲ್ಲಿ ತೊಡಗಿರುತ್ತಾರೆ. ಈ ವಿದ್ಯಾರ್ಥಿಗಳಿಗೆ ಹಿಂದಿ ಭಾಷೆಯನ್ನು ಬೋಧನೆ ಮಾಡಲು ಸ್ವತಃ ಶ್ರದ್ಧೆ ಆಸಕ್ತಿ ವಹಿಸಿದ ೧೦-೧೨ ಜನ ಬೋಧಕರಿಗೆ ೧ ತಿಂಗಳಿಗೆ ೧೫೦೦ ರೂಪಾಯಿಗಳ ಸಂಬಳವನ್ನು ಹಿಂದಿ ಪ್ರಚಾರ ಸಮಿತಿಯ ವತಿಯಿಂದ ನೀಡಲಾಗುತ್ತದೆ. ಹಿಂದಿ ಪ್ರಚಾರ ಸಮಿತಿಯ ಅಡಿಯಲ್ಲಿ ಈಗ ಬಿ.ಎಡ್. ಹಿಂದಿ ಶಿಕ್ಷಕರ ತರಬೇತಿ ತರಗತಿಗಳು ನಡೆಯುತ್ತಿವೆ. ಅಲ್ಲದೆ ಬಾಪೂಜಿ ವಿದ್ಯಾಸಂಸ್ಥೆಯಲ್ಲಿ ಉಚಿತವಾಗಿ ಹಿಂದಿ ತರಗತಿಗಳು ನಡೆಯುತ್ತಿವೆ. ಇದರ ಅಡಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ತುಮಕೂರಿನ ಶ್ರೀ ರಾಮನಗರದ ಬಾಪೂಜಿ ಪ್ರೌಢಶಾಲೆಯಲ್ಲಿಯೂ ವಿದ್ಯಾರ್ಥಿಗಳಿಗೆ ಉಚಿತವಾಗಿ ಹಿಂದಿ ಪಾಠ ಪ್ರವಚನಗಳು ಈಗಲೂ ನಡೆಯುತ್ತಿವೆ.[೧೯]

ತುಮಕೂರು ಹಿಂದಿ ಪ್ರಚಾರ ಸಮಿತಿಯವರು ಜಿ.ವಿ. ನಾರಾಯಣಮೂರ್ತಿಯವರನ್ನು ಪ್ರತಿವರ್ಷವೂ ಗಾಂಧಿ ಜಯಂತಿಯಂದು ಆಹ್ವಾನಿಸಿ ಹಿಂದಿಯಲ್ಲಿ ಉಪನ್ಯಾಸಗಳನ್ನು ಏರ್ಪಡಿಸುತ್ತಿದ್ದರು. ಈ ಸಮಿತಿಯಲ್ಲಿ ಅಧ್ಯಯನ ಮಾಡುತ್ತಿದ್ದ ಜಿ.ಎಂ. ರಾಜಚಾರ್‌ರವರು ಜಿ.ವಿ.ನಾರಾಯಣಮೂರ್ತಿಯವರ ಭಾಷಣಗಳಿಂದ ತುಂಬಾ ಪ್ರಭಾವಿತರಾಗಿ ಅವರ ಹಿಂದೀ ಭಾಷಣಗಳು ನನಗೆ ಚೈತನ್ಯದಾಯಿಯಾಗಿದ್ದವು[೨೦] ಎಂದು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದರು. ಜಿಲ್ಲೆಯಾದ್ಯಂತ ಹಿಂದಿ ಪ್ರಚಾರ ಕಾರ್ಯಕೈಗೊಳ್ಳುವ ನಿಮಿತ್ತವಾಗಿ ಜಿಲ್ಲಾ ಹಿಂದಿ ಪ್ರಚಾರ ಸಮಿತಿಯನ್ನು ೧೯೪೬ ರಲ್ಲಿ ಮಾಲಿಮರಿಯಪ್ಪನವರ ಅಧ್ಯಕ್ಷತೆಯಲ್ಲಿ ಶ್ರೀ ಸಿದ್ಧಗಂಗಾಮಠಾಧ್ಯಕ್ಷರಾದ ಶ್ರೀ ಶಿವಕುಮಾರ ಸ್ವಾಮಿಗಳ ಹಸ್ತದಿಂದ ಸ್ಥಾಪಿತವಾಯಿತು. ಮಧುಗಿರಿ, ಕೊರಟಗೆರೆ, ಚಿಕ್ಕನಾಯಕನಹಳ್ಳಿ, ತಿಪಟೂರು, ನೊಣವಿನ ಕೆರೆ, ಕುಣಿಗಲ್, ಗುಬ್ಬಿ, ಕಡಬ, ಮಿಡಿಗೇಶಿ, ಪಾವಗಡ, ವೈ.ಎನ್.ಹೊಸಕೋಟೆ ಹುಳಿಯಾರು, ಯಳನೂರುಗಳಲ್ಲಿ ಜಿಲ್ಲಾ ಹಿಂದಿ ಪ್ರಚಾರ ಸಮಿತಿಯ ಕೇಂದ್ರಗಳು ವ್ಯವಸ್ಥಿತವಾಗಿ ಕೆಲಸ ನಿರ್ವಹಿಸುತ್ತಿದ್ದವು.

ಜಿಲ್ಲಾ ಹಿಂದಿ ಪ್ರಚಾರ ಸಮಿತಿಯ ಪದಾಧಿಕಾರಿಗಳು

| | |
|---|---|
| ಬಿ.ಸಿ. ನಂಜುಂಡಯ್ಯ | ಅಧ್ಯಕ್ಷರು |
| ಟಿ.ಎಸ್.ಎಲ್.ಎನ್. ಮೂರ್ತಿ | ಉಪಾಧ್ಯಕ್ಷರು |
| ಮೂ. ಶ್ರೀ ವಾಸುದೇವ | ಕಾರ್ಯದರ್ಶಿ |
| ಟಿ.ಪಿ. ಕೃಷ್ಣಪ್ಪ | ಸಹಕಾರ್ಯದರ್ಶಿ |
| ಬಿ.ಸಿ. ಸಿದ್ಧನಂಜಪ್ಪ | ಕೊರಟಗೆರೆ |
| ಬಲರಾಮಯ್ಯ | ಮಧುಗಿರಿ |
| ಬಿ. ಉಗ್ರಪ್ಪ | ಮಿಡಿಗೇಶಿ |
| ಪಿ. ಕೃಷ್ಣಾಚಾರ್ | ಪಾವಗಡ |

| | |
|---|---|
| ಕೆ. ಷೇಕ್‌ಅಹಮದ್ | ಕುಣಿಗಲ್ |
| ಎಂ.ವಿ. ನಾಗರಾಜರಾವ್ | ಚಿಕ್ಕನಾಯಕನಹಳ್ಳಿ |
| ಸಿ. ಗಂಗೂಬಾಯಿ | ಗುಬ್ಬಿ |
| ಎಸ್. ರಾಮಚಂದ್ರರಾವ್ | ನೊಣವಿನಕೆರೆ |
| ಹೆಚ್. ಅನಂತರಾಮಶೆಟ್ಟಿ | ಕಡಬ |
| ಟಿ.ಎಲ್. ರಂಗನಾಥಶೆಟ್ಟಿ | ಹುಳಿಯಾರು |

ಮಧುಗಿರಿಯಲ್ಲಿ : ಕೆ. ನಾರಾಯಣಾಚಾರ್‌ರವರಿಂದ ಪ್ರಾರಂಭವಾದ ಹಿಂದಿ ಪ್ರಚಾರ ಕಾರ್ಯಗಳನ್ನು ಸಿದ್ಧನಂಜಪ್ಪ, ಬಲರಾಮಯ್ಯ, ಹೆಚ್. ಅನಂತರಾಮಶೆಟ್ಟಿ ಮೊದಲಾದ ಹಿಂದಿ ಪ್ರಚಾರ ಕಾರ್ಯಕರ್ತರು ಬಹು ಶ್ರದ್ಧೆಯಿಂದ ತಾಲ್ಲೂಕಿನಲ್ಲಿ ಹಿಂದಿ ಪ್ರಚಾರ ಕಾರ್ಯವನ್ನು ನಡೆಸಿದ್ದರು.

ಕೊರಟಗೆರೆ : ಗೌಸ್ ಮಹಮ್ಮದ್, ಸಿದ್ಧನಂಜಪ್ಪನವರು ಹಿಂದಿ ಪ್ರಚಾರ ಕಾರ್ಯದಲ್ಲಿ ತೊಡಗಿದ್ದರು.

ಮಿಡಿಗೇಶಿ : ಉಗ್ರಪ್ಪನವರು ೧೯೫೦ ರಲ್ಲಿ ಹಿಂದಿ ಪ್ರಚಾರ ಕಾರ್ಯವನ್ನು ಪ್ರಾರಂಭಿಸಿದರು. ಅನಂತರ ಆದಿ ನಾರಾಯಣಗುಪ್ತ, ದಾಸಪ್ಪನವರು ಮುಂದುವರೆಸಿದರು.

ಪಾವಗಡ : ಇಲ್ಲಿ ಪಿ. ಕೃಷ್ಣಚಾರ್‌ರವರು ಹಿಂದಿ ಪ್ರಚಾರವನ್ನು ನಡೆಸಿದ್ದರು. ಅದೇ ರೀತಿಯಾಗಿ ವೈ.ಎನ್. ಹೊಸಕೋಟೆಯಲ್ಲಿ ಕೆ.ಎನ್. ವಾಸುದೇವಯ್ಯನವರು ಈ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದ್ದರು.

ಕುಣಿಗಲ್ : ಷೇಕ್ ಅಹಮದ್‌ರವರು ಇಲ್ಲಿ ಹಿಂದಿ ಪ್ರಚಾರ ಕೈಗೊಂಡಿದ್ದರು.

ಚಿಕ್ಕನಾಯಕನಹಳ್ಳಿ : ಪಿ.ಎನ್. ಕೃಷ್ಣರಾವ್ ರವರಿಂದ ಇಲ್ಲಿ ಹಿಂದಿ ಪ್ರಚಾರ ಕಾರ್ಯ ಪ್ರಾರಂಭವಾಗಿ ನಾಗರಾಜರಾವ್, ಜಿ. ತಿಮ್ಮಯ್ಯನವರ ನಾಯಕತ್ವದಲ್ಲಿ ಮುಂದುವರೆಯಿತು.

ಹುಳಿಯಾರು : ಇಲ್ಲಿ ಅಶ್ವತ್ಥನಾರಾಯಣರವರಿಂದ ಪ್ರಾರಂಭವಾದ ಹಿಂದಿ ಪ್ರಚಾರ ಕಾರ್ಯ ಟಿ.ಎಲ್. ರಂಗನಾಥಶೆಟ್ಟಿ, ಡಿ.ಕೆ. ಶಕುಂತಲಾರವರು ಮುಂದುವರೆಸಿದ್ದರು.

ಯಳನಾಡು : ಇಲ್ಲಿ ಅಶ್ವತ್ಥನಾರಾಯಣ್ ರವರು ಹಿಂದಿ ಪ್ರಚಾರ ಕಾರ್ಯವನ್ನು ಕೈಗೊಂಡಿದ್ದರು.

ಗುಬ್ಬಿ : ಉಮಾದೇವಿ ಗಂಗೂಬಾಯಿ

ಕಡಬ : ಎನ್. ರಾಮಚಂದ್ರರಾವ್

ಗೂಳೂರು : ನಾಗರತ್ನಮ್ಮ

ಹೆಬ್ಬೂರು : ಹೆಚ್.ಪಿ. ಗಂಗಮ್ಮ[೨೧] ಈ ರೀತಿಯಾಗಿ ಜಿಲ್ಲೆಯಲ್ಲಿ ಹಿಂದಿ ಪ್ರಚಾರ ಕಾರ್ಯವನ್ನು ಕಾರ್ಯಕರ್ತರು ತಮ್ಮ ನಾಯಕತ್ವದಲ್ಲಿ ವ್ಯವಸ್ಥಿತವಾಗಿ ಕೈಗೊಂಡಿದ್ದರು. ಇದೇ ರೀತಿಯಾಗಿ ತುಮಕೂರು ಜಿಲ್ಲೆಯ ಕುಣಿಗಲ್‌ನಲ್ಲಿ ಕೆ.ವಿ. ಗೋವಿಂದ ಶೆಟ್ಟರು ಅವರ ಅಣ್ಣಂದಿರಾದ ಕೆ.ವಿ. ರಂಗಶೆಟ್ಟರವರ ಜ್ಞಾಪಕಾರ್ಥವಾಗಿ ೧೯೪೭ ರ ನವೆಂಬರ್ ೧ ರಂದು ಉಚಿತವಾಗಿ ಸಾರ್ವಜನಿಕರಿಗೆ ಹಿಂದಿಯನ್ನು ಕಲಿಸಲು ಒಂದು ಹಿಂದಿ ಪಾಠಶಾಲೆಯನ್ನು ತೆರೆದು ಅದರ ಖರ್ಚು ವೆಚ್ಚಗಳನ್ನು ಅವರೇ ವಹಿಸಿಕೊಂಡು[೨೨] ನಡೆಸಿದ್ದರು. ಹೀಗೆ ಜಿಲ್ಲೆಯಲ್ಲಿ ಹಿಂದಿ ಪ್ರಚಾರವನ್ನು ಮುಂದುವರೆಸಿದರು.

ತುಮಕೂರಿನ ಹಿಂದಿ ಪ್ರಚಾರ ಸಮಿತಿಯು ೨೦-೧೧-೧೯೫೪ ರಂದು ಹಿಂದಿ ವಿದ್ಯಾರ್ಥಿ ಸಂಘವನ್ನು ಸ್ಥಾಪಿಸಿತು. ಈ ಸಂಘದ ಆಶ್ರಯದಲ್ಲಿ ಪ್ರತಿ ವರ್ಷ ಅಖಿಲ ಕರ್ನಾಟಕ ಹಿಂದಿ ಚರ್ಚಾ ಸ್ಪರ್ಧೆಗಳನ್ನು ನಡೆಸಲಾಗುತ್ತಿತ್ತು. ಇಲ್ಲಿ ಪ್ರತಿ ವರ್ಷವು ಜಿಲ್ಲೆಯ ಎಲ್ಲಾ ಮಟ್ಟದ ವಿದ್ಯಾರ್ಥಿಗಳಿಗಾಗಿ ಒಂದು ಚರ್ಚಾ ಸ್ಪರ್ಧೆಯನ್ನು ನಡೆಸುತ್ತಿದ್ದರು. ಈ ಮೂಲಕ ಜಿಲ್ಲೆಯಲ್ಲಿ ಹಿಂದಿ ಪ್ರಚಾರಕ್ಕೆ ಹಿಂದಿ ಭಾಷೆಯ ಬೆಳವಣಿಗೆಗೆ ಪ್ರೋತ್ಸಾಹ ನೀಡಲಾಗುತ್ತಿತ್ತು.[೨೩] ಅನಂತರ ತುಮಕೂರು ಜಿಲ್ಲೆಯಲ್ಲಿ ೧೯೫೭ರಲ್ಲಿ ಆಚಾರ್ಯ ವಿನೋಭಾ ಬಾವೆಯವರು ಭೂದಾನ ಯಾತ್ರೆಯ ಸಂದರ್ಭದಲ್ಲಿ ಏರ್ಪಡಿಸುತ್ತಿದ್ದ ಸಾರ್ವಜನಿಕ ಸಭೆಗಳಲ್ಲಿ ಹಿಂದಿ ಭಾಷೆಯಲ್ಲಿ ಭಾಷಣ ಮಾಡುತ್ತಿದ್ದರು. ೨೯-೧೦-೧೯೫೭ರಂದು ತುಮಕೂರಿನಲ್ಲಿ ನಡೆದ ಸಾರ್ವಜನಿಕ ಸಭೆಯನ್ನು ಉದ್ದೇಶಿಸಿ ಹಿಂದಿ ಭಾಷೆಯಿಂದ, ಯಾವ ಪ್ರಾಂತೀಯ ಭಾಷೆಗೂ ಅಹಿತವಿಲ್ಲ, ನಾವು ಹಿಂದಿಯನ್ನು ಪ್ರೇಮದಿಂದ ಕಲಿಯಬೇಕು, ಹಿಂದಿ ಪ್ರಚಾರ ಕಾರ್ಯದಿಂದ ಎಲ್ಲರನ್ನು ಒಂದು ಗೂಡಿಸಬೇಕು[೨೪] ಎಂದು ಹೇಳಿ ಹಿಂದಿ ಭಾಷೆಯ ಮಹತ್ವವನ್ನು ಸಾರಿದರು. ಇದೇ ದಿನ ತುಮಕೂರಿನಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ ತಮ್ಮ ಭಾಷಣದಲ್ಲಿ "ನಮ್ಮ ದೇಶವನ್ನು ಒಟ್ಟುಗೂಡಿಸುವುದಕ್ಕೆ ಪ್ರೇಮದಿಂದ ಹಿಂದಿ ಕಲಿಯುವುದು ಸರಿ ಎಂದು ಗಾಂಧೀಜಿ ೪೦ ವರ್ಷಗಳ ಹಿಂದೆಯೇ ಈ ಕಾರ್ಯವನ್ನು ಪ್ರಾರಂಭಿಸಿದರು. ಅಂದು ಹಿಂದಿ ಪ್ರಮಾಣ ಪತ್ರದ ವಿತರಣೋತ್ಸವವನ್ನು ನಡೆಸಿಕೊಟ್ಟಿದ್ದ ವಿನೋಭಾ ಭಾವೆಯವರು ತುಮಕೂರಿನಂತಹ ದೊಡ್ಡಪಟ್ಟಣದಲ್ಲಿ ಹಿಂದಿ ಭಾಷೆಯಲ್ಲಿ ಭಾಷಣ ಮಾಡಿದರೆ ತಿಳಿದುಕೊಳ್ಳುವಷ್ಟು ಹಿಂದಿ ಭಾಷೆ ಎಲ್ಲರಿಗೂ ಬರಬೇಕು, ಎಂದು ಈ ಕೆಲಸದಲ್ಲಿ ತೊಡಗಿರುವ ತುಮಕೂರು ಹಿಂದಿ ಪ್ರಚಾರ ಸಮಿತಿಯು ಈ ಕಾರ್ಯದಲ್ಲಿ ಯಶಸ್ವಿಯಾಗಲಿ[೨೫] ಎಂದು ಹಾರೈಸಿದರು. ಅನಂತರ ೧೯೫೭ ರ ನವೆಂಬರ್ ೭ ರಂದು ತುಮಕೂರು ಜಿಲ್ಲೆಯ ಕೊನೇನಹಳ್ಳಿಯಲ್ಲಿ ನಡೆದ ಭೂದಾನ ಯಾತ್ರೆಯ ಕೊನೆಯ ಸಭೆಯಲ್ಲಿ ಆಚಾರ್ಯ ವಿನೋಭಾ ಬಾವೆಯವರು ಸಾರ್ವಜನಿಕ ಸಭೆಯನ್ನು ಉದ್ದೇಶಿಸಿ ಈ ರೀತಿ ಭಾಷಣ ಮಾಡಿದರು. ಸರ್ವೋದಯ ವಿಚಾರವನ್ನು

ಮನೆಮನೆಗೂ ಪ್ರಚಾರ ಮಾಡಬೇಕು. ಭೂದಾನ ಯಾತ್ರೆಯ ಸ್ವಾಗತ ಸಮಿತಿಯಲ್ಲಿ ಹಿಂದಿ ಪ್ರಚಾರ ಕಾರ್ಯಕರ್ತರು ಇರುವುದು ಸಂತೋಷದ ವಿಷಯ. ಅವರು ಸರ್ವೋದಯ ಸಮಾಜಕ್ಕಾಗಿ ಹೆಚ್ಚು ಆಸಕ್ತಿ ವಹಿಸಿ ದುಡಿಯಬೇಕು. ಹಿಂದಿ ಪ್ರಚಾರದ ಕೆಲಸದೊಡನೆ ಸರ್ವೋದಯ ಕೆಲಸವನ್ನು ಕೈಗೊಳ್ಳಬೇಕು. ಆಗ ಮಾತ್ರ ಜಿಲ್ಲೆಯಲ್ಲಿ ಹಿಂದಿ ಪ್ರಚಾರ ಕಾರ್ಯಕ್ರಮವು ಯಶಸ್ವಿಯಾಗುತ್ತದೆ. ಕಾರಣ ಹಿಂದಿ ಪ್ರಚಾರ ಕಾರ್ಯವು ಸರ್ವೋದಯದ ಒಂದು ಅಂಗ, ಹಿಂದಿ ಪ್ರಚಾರ ಕಾರ್ಯದ ಪರಮ ಲಕ್ಷ್ಯ ಸರ್ವೋದಯ, ಎಂದು ಸರ್ವೋದಯ ಯಶಸ್ವಿ ಹಿಂದಿ ಪ್ರಚಾರ ಕಾರ್ಯಕ್ರಮದಲ್ಲಿ ಅಡಗಿದೆ[೨೬] ಎಂದು ಮೆಚ್ಚುಗೆ ವ್ಯಕ್ತಪಡಿಸಿದ್ದರು.

ಪೂಜ್ಯ ವಿನೋಬ ಭಾವೆಯವರು ತುಮಕೂರು ಹಿಂದಿ ಪ್ರಚಾರ ಸಮಿತಿಯವರ ಸಂದರ್ಶಕರ ಪುಸ್ತಕದಲ್ಲಿ ಬರೆದಿರುವ ಹಿಂದಿ ಭಾಷೆಯ ಸಾರಾಂಶ ಈ ರೀತಿಯಾಗಿದೆ. ಶಂಕರ, ರಾಮಾನುಜ, ಮಧ್ವ, ವಿದ್ಯಾರಣ್ಯ ಮೊದಲಾದವರ ಸುವಿಚಾರ ಇಡೀ ಭಾರತದಲ್ಲಿ ಹರಡುವಂತಾಯಿತು. ಏಕೆಂದರೆ ಅವರು ತಮ್ಮ ವಿಚಾರಗಳನ್ನು ಸಂಸ್ಕೃತ ಭಾಷೆಯಲ್ಲಿ ಬರೆದಿದ್ದರು. ಸಂಸ್ಕೃತ ಭಾಷೆಯು ಆ ಕಾಲದ ಬೋಧಕ ಭಾಷೆಯಾಗಿತ್ತು. ಇಂದು ಇಡೀ ಭಾರತದ ಬೋಧಕ ಭಾಷೆ ಹಿಂದಿಯಾಗಿದೆ. ಆದುದ್ದರಿಂದ ದಕ್ಷಿಣ ಭಾರತದವರು ಎಷ್ಟು ಶೀಘ್ರವಾಗಿ ಹಿಂದಿಯನ್ನು ಕಲಿಯುತ್ತಾರೋ ಅಷ್ಟೇ ಶೀಘ್ರವಾಗಿ ಅವರ ವಿಚಾರ ಇಡೀ ಭಾರತದಲ್ಲಿ ಹರಡುವುದಕ್ಕೆ ಅನುಕೂಲವಾಗುತ್ತದೆ,[೨೭] ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಈ ರೀತಿಯಾಗಿ ವಿನೋಭಾಭಾವೆಯವರು ಭೂದಾನಯಾತ್ರೆಯ ಸಮಯದಲ್ಲಿ ಜಿಲ್ಲೆಯಲ್ಲಿ ಹಿಂದಿ ಭಾಷೆಯ ಬಗ್ಗೆ ಜನತೆಗೆ, ಕಾಂಗ್ರೆಸ್ಸಿಗರಿಗೆ, ಸರ್ವೋದಯ ಕಾರ್ಯಕರ್ತರಿಗೆ, ಅರಿವು ಮೂಡಿಸುವುದರ ಮೂಲಕ ಪ್ರಚಾರ ಕಾರ್ಯವನ್ನು ಕೈಗೊಂಡಿದ್ದರು.

ತುಮಕೂರು ಹಿಂದಿ ಪ್ರಚಾರ ಸಮಿತಿಯು ೧೯೬೯ ರಲ್ಲಿ ಗಾಂಧೀ ಶತಮಾನೋತ್ಸವ ಮತ್ತು ರಜತ ಮಹೋತ್ಸವವನ್ನು ಆಚರಿಸಿತ್ತು. ಈ ರಜತ ಮಹೋತ್ಸವದ ಉದ್ಘಾಟನಾ ಸಮಾರಂಭದ ಅಧ್ಯಕ್ಷರಾದ ಅಖಿಲ ಭಾರತ ಕಾಂಗ್ರೆಸ್‌ನ ಅಧ್ಯಕ್ಷರಾದ ಎಸ್. ನಿಜಲಿಂಗಪ್ಪ, ಅಖಿಲ ಭಾರತ ಭಾಷಾ ಸಮ್ಮೆಳನದ ಉದ್ಘಾಟಕರಾದ ಭಾರತದ ಅಂದಿನ ಉಪರಾಷ್ಟ್ರಪತಿ ಜಿ.ಎಸ್. ಪಾಠಕ್ ಹಾಗೂ ಅಖಿಲ ಮೈಸೂರು ಹಿಂದಿ ಪ್ರಚಾರಕರ ಸಮ್ಮೇಳನದ ಉದ್ಘಾಟಕರಾದ ಮೈಸೂರಿನ ಮುಖ್ಯಮಂತ್ರಿ ವೀರೇಂದ್ರ ಪಾಟೀಲರವರು ಈ ಸಮಾರಂಭದಲ್ಲಿ ಭಾಗವಹಿಸಿದರು.[೨೮] ಈ ಸಮಿತಿಯ ಆಶ್ರಯದಲ್ಲಿ ೧೯೬೯ ರ ವೇಳೆಗೆ ಏಳು ಬಾರಿ ಹಿಂದಿ ಪ್ರಮಾಣ ಪತ್ರ ವಿತರಣೆ ಸಮಾರಂಭಗಳು ನಡೆದಿವೆ. ಈ ಸಂದರ್ಭದಲ್ಲಿ ಭಾರತದ ಗಣ್ಯವ್ಯಕ್ತಿಗಳನ್ನು ಆಹ್ವಾನಿಸಿ ಅವರಿಂದ ಪ್ರಮಾಣ ಪತ್ರಗಳ ವಿತರಣೆ ಮಾಡಲಾಯಿತು.

೧. ಶ್ರೀಮತಿ ಉಮಾಬಾಯಿ ಕುಂದಾಪುರ – ೧೯೪೭ರಲ್ಲಿ

೨. ಶ್ರೀ ಬಾಬು ರಾಜೇಂದ್ರ ಪ್ರಸಾದ್ – ೧೯೪೭ರಲ್ಲಿ

೩. ಶ್ರೀ ಬಾಲಗಂಗಾಧರ ಖೇರ – ೧೯೫೧ರಲ್ಲಿ

೪. ಶ್ರೀ ಮುರಾರ್ಜಿ ದೇಸಾಯಿ – ೧೯೫೩ರಲ್ಲಿ

೫. ಶ್ರೀ ಜಿ.ವಿ. ಮಾವಲಂಕರ್ – ೧೯೫೫ರಲ್ಲಿ

೬. ಸಂತ ವಿನೋಬಾಭಾವೆ – ೧೯೫೭ರಲ್ಲಿ

೭. ಪಂಡಿತ ಜವಹರಲಾಲ್ ನೆಹರು – ೧೯೬೨ರಲ್ಲಿ

ಇವರುಗಳಲ್ಲದೆ ಸಾಹಿತಿಗಳು ಹಾಗೂ ಹಿಂದಿ ಭಾಷೆಯ ಅಭಿಮಾನಿಗಳು ಈ ಸಮಿತಿಗೆ ಭೇಟಿ ನೀಡಿ ಅದರ ಚಟುವಟಿಕೆಗಳನ್ನು ವೀಕ್ಷಿಸಿ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದರು.[೨೯] ಈ ರೀತಿಯಾಗಿ ಗಾಂಧೀಜಿಯವರು ಹಾಕಿಕೊಟ್ಟ ಮಾರ್ಗದಲ್ಲಿ, ಅನೇಕರ ಮರ್ಗದರ್ಶನದಲ್ಲಿ ಅಂದಿನಿಂದ ಇಂದಿನವರೆವಿಗೂ ಸಹಾ ಹಿಂದಿ ಪ್ರಚಾರ ಸಮಿತಿಯು ತಮ್ಮ ಕಾರ್ಯವನ್ನು ನಿರ್ವಹಿಸುತ್ತಿದೆ.

ತುಮಕೂರು ಜಿಲ್ಲೆಯಲ್ಲಿ ಕೆಲವು ಹಿಂದಿ ಪ್ರೇಮಿಗಳು ಹಿಂದಿ ಭಾಷೆಯ ಪ್ರಚಾರದಲ್ಲಿ ಕಾರ್ಯನಿರತರಾಗಿದ್ದರು. ಅವರಲ್ಲಿ ಮಧುಗಿರಿ ತಾಲ್ಲೂಕಿನ ಹೂವಿನಹಳ್ಳಿಯ ಎಂ.ವಿ. ನಾರಾಯಣರಾವ್‌ರವರು ಹಿಂದಿ ಭಾಷೆಯಲ್ಲಿ ಪರಿಣಿತರಾಗಿದ್ದು, ಹಿಂದಿ ಕಾವ್ಯ ರತ್ನಗಳಾದ ಆಶ್ರು ಪ್ರೇಮ ಕಾವ್ಯವನ್ನು, ಕಾಮಯಾನೀ ಮಹಾಕಾವ್ಯವನ್ನು ಪಂಚಲಟಿ ಖಂಡ ಕಾವ್ಯವನ್ನು, ಸ್ವಪ್ನ ಭಂಗ ನಾಟಕವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ.[೩೦] ಇದೇ ತಾಲ್ಲೂಕಿನ ಕಂಸಾನಹಳ್ಳಿಯವರಾದ ಕೆ. ವೆಂಕಟಾದ್ರಿ ಶರ್ಮರವರು ಹಿಂದಿ ಗೀತೆಗಳನ್ನು ಅನುವಾದಿಸಿದ್ದಲ್ಲದೇ ಇವರು ಬರೆದಿರುವ ಅನೇಕ ಹಿಂದಿ ಗೀತೆಗಳು ಆಕಾಶವಾಣಿಯಲ್ಲಿ ಪ್ರಸಾರವಾಗಿವೆ.[೩೧] ಇದೇ ರೀತಿಯಾಗಿ ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿಯ ಜೂನಿಯರ್ ಕಾಲೇಜಿನ ಕನ್ನಡ ಉಪನ್ಯಾಸಕರಾಗಿದ್ದ ಎಂ.ವಿ. ನಾಗರಾಜರಾವ್ ಹಿಂದಿ ಪ್ರೇಮ ಮಂಡಳಿ ಸ್ಥಾಪಿಸಿ[೩೨] ಹಿಂದೀ ಪ್ರಚಾರ ಕಾರ್ಯದಲ್ಲಿ ತೊಡಗಿಸಿಕೊಂಡಿದ್ದರು. ಇವರಂತೆಯೇ ಜಿ.ಎಂ. ರಾಜಚಾರ್ ಎಂಬುವರು ತುಮಕೂರಿನ ಗಾಂಧಿ ಮೈದಾನದಲ್ಲಿ ಅರವಿಂದ ವಿದ್ಯಾಸಂಸ್ಥೆಯ ಉಪಾಧ್ಯಕ್ಷರಾಗಿ ಹಿಂದೂಸ್ಥಾನ ಸಮಾಚಾರ ಪ್ರತಿನಿಧಿಯಾಗಿ ಹಿಂದಿ ಪ್ರಚಾರ ಕಾರ್ಯ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದರು.[೩೩]

ಈ ರೀತಿಯಾಗಿ ತುಮಕೂರು ಜಿಲ್ಲೆಯ ಕಾಂಗ್ರೆಸ್ ಕಾರ್ಯಕರ್ತರು, ತುಮಕೂರು ಹಿಂದಿ ಪ್ರಚಾರ ಸಮಿತಿ, ವಿನೋಭಾಭಾವೆಯವರು, ಸ್ವಯಂ ಕಾರ್ಯಕರ್ತರು, ಗಾಂಧೀಜಿಯರ ಹಿಂದಿ ಪ್ರಚಾರ ಕಾರ್ಯದಲ್ಲಿ ತೊಡಗಿಸಿಕೊಂಡು ಯಶಸ್ವಿಗೊಳಿಸಲು ಪ್ರಯತ್ನಿಸಿದರು.

## ಅಡಿಟಿಪ್ಪಣಿಗಳು

೧. ರಜತ ಮಹೋತ್ಸವ ಸಂಚಿಕೆ, ಜಿಲ್ಲಾ ಹಿಂದಿ ಪ್ರಚಾರ ಸಮಿತಿ, ತುಮಕೂರು, ೧೯೬೯, ಪು.೨೬-೨೭

೨. ಅದೇ, ಪು.೨೮

೩. ಅದೇ, ಪು.೨೯

೪. ವಿಶ್ವಕರ್ನಾಟಕ, ದಿನಾಂಕ ೯-೧೦-೧೯೨೯ [ಕ.ರಾ.ಪ.ಇ.], ಬೆಂಗಳೂರು

೫. ಸೂರ್ಯನಾಥ ಕಾಮತ್(ಸಂ), ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಸಂಪುಟ ೩, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು, ೧೯೮೯, ಪು.೭೫

೬. ವಿಶ್ವಕರ್ನಾಟಕ, ದಿನಾಂಕ ೧೫-೩-೧೯೩೧ [ಕ.ರಾ.ಪ.ಇ.], ಬೆಂಗಳೂರು

೭. ಕರ್ನಾಟಕ ಪ್ರಾಂತೀಯ ಹಿಂದಿ ಪ್ರಚಾರ ಸಭೆ, ಬಿಷೆ ಕಲೆಕ್ಷನ್ಸ್ [ಕ.ರಾ.ಪ.ಇ.], ಬೆಂಗಳೂರು

೮. ನಾರಾಯಣ ಸಿಂಗ್ ಬಿಷೆ ಕಲೆಕ್ಷನ್ಸ್ [ಕ.ರಾ.ಪ.ಇ.], ಬೆಂಗಳೂರು

೯. ಸೂರ್ಯನಾಥ ಕಾಮತ್(ಸಂ), ಪೂರ್ವೋಕ್ತ, ೧೯೮೯, ಪು. ೩೬

೧೦. ಸೂರ್ಯನಾಥ ಕಾಮತ್(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂಪುಟ ೨, ಗೀತಾ ಬುಕ್ ಹೌಸ್, ಮೈಸೂರು, ೧೯೭೭, ಪು.೪೩೧

೧೧. ರಜತ ಮಹೋತ್ಸವ ಸಂಚಿಕೆ, ಪೂರ್ವೋಕ್ತ, ೧೯೬೯, ಪು.೮೨,

೧೨. ಸೂರ್ಯನಾಥ ಕಾಮತ್(ಸಂ), ಪೂರ್ವೋಕ್ತ, ೧೯೭೭, ಪು.೪೨೮-೪೨೯

೧೩. ಜವರೇಗೌಡ ದೇ(ಸಂ), ಸರ್ವೋದಯ ಪಥ, ಜಿ.ವಿ.ನಾ. ಅಭಿನಂದನಾ ಗ್ರಂಥ ಸಮಿತಿ, ಚಿಕ್ಕನಾಯಕನಹಳ್ಳಿ, ೧೯೮೨, ಪು. ೧೩

೧೪. ತುಮಕೂರು ಜಿಲ್ಲಾ ಹಿಂದಿ ಪ್ರಚಾರ ಸಮಿತಿಯ ಪ್ರಾಂಶುಪಾಲರಾದ ಕೃಷ್ಣಮೂರ್ತಿಯವ ರೊಂದಿಗೆ [ಸ್ವಾತಂತ್ರ್ಯ ಹೋರಾಟಗಾರರು] ನಡೆಸಿದ ಸಂದರ್ಶನ, ದಿನಾಂಕ ೨೦-೨-೨೦೦೭, ತುಮಕೂರು

೧೫. ರಜತ ಮಹೋತ್ಸವ ಸಂಚಿಕೆ, ಪೂರ್ವೋಕ್ತ, ೧೯೬೯, ಪು. ೮೨

೧೬. ಸೂರ್ಯನಾಥ ಕಾಮತ್(ಸಂ), ಪೂರ್ವೋಕ್ತ,೧೯೮೦, ಪು.೮೪೦

೧೭. ರಜತ ಮಹೋತ್ಸವ ಸಂಚಿಕೆ, ಪೂರ್ವೋಕ್ತ, ೧೯೬೯, ಪು.೮೩

೧೮. ನಟರಾಜನ್ ಸಂಗ್ರಹ, ತುಮಕೂರು ಕೈಪಿಡಿ, ಖಾಸಗೀ ದಾಖಲೆ [ಕ.ರಾ.ಪ.ಇ.], ಬೆಂಗಳೂರು

೧೯. ತುಮಕೂರು ಜಿಲ್ಲಾ ಹಿಂದೀ ಪ್ರಚಾರ ಸಮಿತಿಯ ಪ್ರಾಂಶುಪಾಲರಾದ ಕೃಷ್ಣಮೂರ್ತಿ ಯವರೊಂದಿಗೆ [ಸ್ವಾತಂತ್ರ್ಯ ಹೋರಾಟಗಾರರು] ನಡೆಸಿದ ಸಂದರ್ಶನ, ದಿನಾಂಕ: ೨೦-೨-೨೦೦೭, ತುಮಕೂರು

೨೦. ಜವರೇಗೌಡ ದೇ.(ಸಂ), ಪೂರ್ವೋಕ್ತ, ೧೯೮೨, ಪು.-೧೦೭

೨೧. ರಜತ ಮಹೋತ್ಸವ ಸಂಚಿಕೆ, ಪೂರ್ವೋಕ್ತ, ೧೯೬೯, ಪು.-೮೩, ೮೪, ೮೫

೨೨. ಪೌರವಾಣಿ ಪತ್ರಿಕೆ ದಿನಾಂಕ: ೫-೧೧-೧೯೪೭ [ಕ.ರಾ.ಪ.ಇ.], ಬೆಂಗಳೂರು

೨೩. ರಜತ ಮಹೋತ್ಸವ ಸಂಚಿಕೆ, ಪೂರ್ವೋಕ್ತ, ೧೯೬೯, ಪು.೮೪

೨೪. ತಿರುಮಲೆ ಅನಂತರಂಗಾಚಾರ್(ಅನು), ತುಮಕೂರು ಜಿಲ್ಲೆಯಲ್ಲಿ ಪೂಜ್ಯ ವಿನೋಬಾ, ಗಾಂಧೀ ವಿಚಾರ ಪರಿಷತ್ತು, ತುಮಕೂರು, ೧೯೫೭, ಪು.೩೦

೨೫. ಅದೇ, ಪು. ೩೯

೨೬. ಅದೇ, ಪು. ೧೨೪

೨೭. ಅದೇ, ಪು. ೧೨೬

೨೮. ರಜತ ಮಹೋತ್ಸವ ಸಂಚಿಕೆ, ಪೂರ್ವೋಕ್ತ, ೧೯೬೯, ಪು. ೮೫

೨೯. ರಜತ ಮಹೋತ್ಸವ ಸಂಚಿಕೆ, ಪೂರ್ವೋಕ್ತ, ೧೯೬೯, ಪು. ೮೩

೩೦. ಭಾಸ್ಕರಪ್ಪ ಸಿ.ಎನ್(ಸಂ), ತುಮಕೂರು ಜಿಲ್ಲಾ ದರ್ಶನ, ಟೈಮ್ಸ್ ಪಬ್ಲಿಕೇಷನ್ಸ್, ತುಮಕೂರು, ೧೯೮೧, ಪು. ೩೧೪

೩೧. ಅದೇ, ಪು. ೪೦೪

೩೨. ಅದೇ, ಪು. ೫೩೧

೩೩. ಅದೇ, ಪು. ೫೬೫

೬

# ಗ್ರಾಮೀಣಾಭಿವೃದ್ಧಿ ಮತ್ತು ಸರ್ವೋದಯ

ಗಾಂಧೀಜಿಯವರು ರೂಪಿಸಿದ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಸರ್ವೋದಯವು ಒಂದಾಗಿದೆ. ನಿಜವಾದ ಭಾರತ ಇರುವುದು ತನ್ನ ಏಳು ಲಕ್ಷ ಹಳ್ಳಿಗಳಲ್ಲಿ. ಈ ಹಳ್ಳಿಗಳು ದೇಶದ ಬದುಕಿನಲ್ಲಿ ತಮ್ಮ ಸೂಕ್ತ ಪಾತ್ರವನ್ನು ನಿರ್ವಹಿಸದಿದ್ದರೆ ಭಾರತಕ್ಕೆ ಭವಿಷ್ಯ ಎಂಬುದು ಇರುವುದಿಲ್ಲ. ಪ್ರತಿಯೊಂದು ಹಳ್ಳಿಯೂ ತನ್ನನ್ನು ತಾನು ಆಳಿಕೊಳ್ಳಬೇಕು. ತನ್ನ ಜನರ ಮುಖ್ಯ ಅಗತ್ಯಗಳಲ್ಲಿ ಸ್ವಾವಲಂಬಿಯಾಗಿರಬೇಕು ಹಾಗೆ ಮಾಡುವಂತಹ ಗ್ರಾಮೀಣ ಚಟುವಟಿಕೆ ಪ್ರತಿಯೊಂದು ವಿಭಾಗವನ್ನು ಒಳಗೊಂಡಿರಬೇಕು.[೧] ಇದು ಗಾಂಧೀಜಿಯವರ ಗ್ರಾಮ ಸ್ವರಾಜ್ಯದ ಯೋಜನೆ.

ಗಾಂಧೀಜಿಯವರ ದೃಷ್ಟಿಯ ಗ್ರಾಮ ಸ್ವರಾಜ್ಯವೆಂದರೆ ಪ್ರತಿಯೊಂದು ಗ್ರಾಮವು ಸರ್ವ ಸ್ವತಂತ್ರ ಗಣರಾಜ್ಯವಾಗಬೇಕು. ತನ್ನ ಅಗತ್ಯಗಳನ್ನು ತಾನು ಪೂರೈಸಿಕೊಳ್ಳುವ ಸಾಮರ್ಥ್ಯ ಹೊಂದಿರಬೇಕು. ಯಾವ ವಸ್ತುಗಳನ್ನು ಉತ್ಪಾದಿಸಲು ಸಾಧ್ಯವಿಲ್ಲವೋ ಅವುಗಳನ್ನು ಅತ್ಯಂತ ಸಮೀಪದ ಹಳ್ಳಿಗಳಿಂದ ತರಿಸಿಕೊಳ್ಳಬೇಕು. ಗ್ರಾಮದ ಹೆಚ್ಚುವರಿ ಉತ್ಪನ್ನವನ್ನು ಸಮೀಪದ ಅವಶ್ಯಕ ಗ್ರಾಮಗಳಿಗೆ ಪೂರೈಸಬೇಕು. ಅಕ್ಕಪಕ್ಕದ ಗ್ರಾಮಗಳು ಪರಸ್ಪರ ಸಹಕಾರ ಮನೋಭಾವದಿಂದ ಬಾಳಬೇಕು. ಪ್ರತಿಯೊಬ್ಬರೂ ಸಹ ತಾವು ಅಖಂಡ ಭಾರತದ ಅವಿಭಾಜ್ಯ ಅಂಗವೆಂದು ಭಾವಿಸಿ ಬಾಳಬೇಕು. ಪ್ರೀತಿ, ವಿಶ್ವಾಸ, ಸಹನೆ, ಸೌಹಾರ್ದ, ಸತ್ಯ, ಅಹಿಂಸೆ, ಪರೋಪಕಾರ ಮುಂತಾದ ಸದ್ಗುಣಗಳು ಗ್ರಾಮಗಳಲ್ಲಿ ಎದ್ದು ಕಾಣುವಂತಿರಬೇಕು. ಗ್ರಾಮದ ಜನರು ಅಖಂಡ ಭಾರತದ ನಿಜವಾದ ಅರ್ಥದ ಸತ್ಪ್ರಜೆಗಳಾಗಬೇಕು.[೨]

ಗಾಂಧೀಜಿಯವರು ಹೇಳಿರುವಂತೆ ಗ್ರಾಮಗಳು ಸ್ಥಳೀಯ ಸ್ವಯಂ ಸರ್ಕಾರಗಳಾಗಿ ಕೆಲಸ ಮಾಡಿದಾಗ ಮಾತ್ರ ಗ್ರಾಮಗಳ ಅಭಿವೃದ್ಧಿ ಸಾಧ್ಯ ಹಾಗೂ ಅಧಿಕಾರಗಳು ಮೇಲಿನ ಸ್ತರದಿಂದ ಕೆಳಸ್ತರಕ್ಕೆ ಹರಿಯುವ ಬದಲಾಗಿ ಕೆಳಸ್ತರದಿಂದ ಮೇಲಿನ ಸ್ತರಕ್ಕೆ ಹರಿಯಬೇಕು. ಆಡಳಿತಾತ್ಮಕವಾಗಿ ಮಾತ್ರವಲ್ಲ ಶೈಕ್ಷಣಿಕವಾಗಿ, ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ಅಧಿಕಾರಗಳು ವಿಕೇಂದ್ರೀಕರಿಸಲ್ಪಡಬೇಕು. ಅಂದರೆ ಆರ್ಥಿಕ ಕ್ಷೇತ್ರದಲ್ಲಿ ತಮ್ಮದೆ ಆದ ಯೋಜನೆಗಳನ್ನು ರೂಪಿಸಿ ಅನುಷ್ಠಾನಕ್ಕೆ ತರುವಲ್ಲಿ ಹಾಗೂ ಆರ್ಥಿಕ ಸಂಪನ್ಮೂಲಗಳನ್ನು ಕ್ರೋಢೀಕರಿಸುವಲ್ಲಿ

ಮತ್ತು ಅದನ್ನು ವಿನಿಯೋಗಿಸುವಲ್ಲಿ ಹಾಗೂ ಸಾಮಾಜಿಕ ಕ್ಷೇತ್ರದಲ್ಲಿ ಸಮಸ್ಯೆಗಳನ್ನು ಗುರುತಿಸುವಲ್ಲಿ ಹಾಗೂ ಅವುಗಳನ್ನು ಅನುಷ್ಠಾನಕ್ಕೆ ತರುವಲ್ಲಿ ಹಾಗೂ ಶೈಕ್ಷಣಿಕ ಕ್ಷೇತ್ರದಲ್ಲಿ ಶೈಕ್ಷಣಿಕ ಅಭಿವೃದ್ಧಿಗೆ ಅಗತ್ಯ ಕ್ರಮಗಳನ್ನು ಕೈಗೊಳ್ಳುವಲ್ಲಿ ಗ್ರಾಮಗಳಿಗೆ ಹೆಚ್ಚು ಅಧಿಕಾರ ಮತ್ತು ಜವಾಬ್ದಾರಿಗಳನ್ನು ನೀಡಿದಾಗ ಸದೃಢವಾದ ಸಂಪದ್ಭರಿತ ಗ್ರಾಮಗಳಾಗಿ ಅಭಿವೃದ್ಧಿ ಹೊಂದುತ್ತವೆ. ಇದರಿಂದ ರಾಷ್ಟ್ರವು ಕೂಡ ಸದೃಢವಾದ ಅಭಿವೃದ್ಧಿ ಹೊಂದಿದ ರಾಷ್ಟ್ರವಾಗುತ್ತದೆ ಎಂಬುದು ಗಾಂಧೀಜಿಯವರ ಅಭಿಪ್ರಾಯ. ಆದರ್ಶ ಗ್ರಾಮಗಳ ನಿರ್ಮಾಣಕ್ಕಾಗಿ ಈ ಕೆಳಕಂಡ ಅತ್ಯಾವಶ್ಯಕ ಸ್ಥಿತಿಗಳಿರಬೇಕು ಎಂದು ಗಾಂಧೀಜಿಯವರು ತಿಳಿಸಿರುವರು.

೧. ಗ್ರಾಮಗಳ ರಚನೆಗಳು ವ್ಯವಸ್ಥಿತವಾಗಿರಬೇಕು. ನೇರವಾದ ರಸ್ತೆಗಳು ಹಾಗೂ ಕಿರು ದಾರಿಗಳು ಸ್ವಚ್ಛತೆಯಿಂದ ಕೂಡಿದ್ದು ವ್ಯವಸ್ಥಿತವಾಗಿರಬೇಕು.

೨. ಮಳೆಯ ಅಥವಾ ಮಲಿನವಾದ ನೀರು ಸುಲಭವಾಗಿ ಹರಿದು ಹೋಗುವಂತಾಗಲು ವ್ಯವಸ್ಥಿತವಾದ ಒಳಚರಂಡಿ ವ್ಯವಸ್ಥೆ ಇರಬೇಕು.

೩. ದೇವಾಲಯಗಳು, ಮಸೀದಿಗಳು ಸ್ವಚ್ಛವಾಗಿ ಹಾಗೂ ಸುಂದರವಾಗಿ ಇಟ್ಟಿರಬೇಕು. ಇದರಿಂದಾಗಿ ಈ ಸ್ಥಳಗಳಿಗೆ ಭೇಟಿ ನೀಡುವ ವ್ಯಕ್ತಿಗಳು ಸ್ವಚ್ಛವಾದ ಗಾಳಿಯನ್ನು ಪರಿಶುದ್ಧವಾದ ವಾತಾವರಣವನ್ನು ಪಡೆಯುತ್ತಾರೆ.

೪. ಗ್ರಾಮಗಳು ಗಿಡಮರಗಳ ನೆರಳಿನಿಂದ ತುಂಬಿರಬೇಕು.

೫. ಗ್ರಾಮಗಳು ಧರ್ಮಶಾಲೆಯನ್ನು ಹಾಗೂ ಆಸ್ಪತ್ರೆಯನ್ನು ಹೊಂದಿರಬೇಕು.

೬. ಆಹಾರ ಮತ್ತು ಉಡುಪುಗಳಿಗೆ ಸಂಬಂಧಿಸಿದಂತೆ ಪ್ರತಿಯೊಂದು ಗ್ರಾಮವು ಸ್ವಯಂ ಪರಿಪೂರ್ಣತೆಯನ್ನು ಹೊಂದಿರಬೇಕು.

೭. ಪ್ರತಿಯೊಂದು ಗ್ರಾಮವೂ ಕ್ರೂರ ಪ್ರಾಣಿಗಳಿಂದ ಅಥವಾ ದರೋಡೆಗಾರರಿಂದ ರಕ್ಷಿಸಿಕೊಳ್ಳಲು ಸಾಮರ್ಥ್ಯ ಹೊಂದಿರುವ ಕಾವಲು ಪಡೆ ಹೊಂದಿರಬೇಕು.

೮. ವಯಸ್ಕರು ಹಾಗೂ ಮಕ್ಕಳ ಕ್ರೀಡಾ ಚಟುವಟಿಕೆಗಳಿಗಾಗಿ ಸೀಮಿತವಾದ ಕ್ರೀಡಾ ಮೈದಾನ ಹಾಗೂ ಮನರಂಜನಾ ಅವಕಾಶಗಳನ್ನು ಗ್ರಾಮ ಹೊಂದಿರಬೇಕು.

೯. ಹೊಗೆಸೊಪ್ಪು, ಅಫೀಮುನಂತಹ ಬೆಳೆಗಳನ್ನು ಬೆಳೆಯಬಾರದು. ಆದರೆ ಇನ್ನಿತರ ವಾಣಿಜ್ಯ ಬೆಳೆಗಳನ್ನು ಬೆಳೆಯಬಹುದು.

೧೦. ಗ್ರಾಮವು ತನ್ನದೇ ಆದ ರಂಗಮಂದಿರ, ಶಾಲೆ ಮತ್ತು ಸಾರ್ವಜನಿಕ ಸಭಾಂಗಣವನ್ನು ಹೊಂದಿರಬೆಕು ಹಾಗೂ ಅದನ್ನು ವ್ಯವಸ್ಥಿತ ಸ್ಥಿತಿಯಲ್ಲಿ ಕಾಪಾಡಿಕೊಂಡು ಬರಬೇಕು.

೧೧. ಶುದ್ಧವಾದ ಕುಡಿಯುವ ನೀರನ್ನು ಸರಬರಾಜು ಮಾಡಲು ಗ್ರಾಮವು ತನ್ನದೇ ಆದ ವ್ಯವಸ್ಥೆಯನ್ನು ಮಾಡಿಕೊಂಡಿರಬೇಕು.

೧೨. ಪ್ರಾಥಮಿಕ ಶಿಕ್ಷಣವನ್ನು ಎಲ್ಲಾ ಮಕ್ಕಳಿಗೂ ಉಚಿತವಾಗಿ ಕಲ್ಪಿಸಬೇಕು.

೧೩. ಗ್ರಾಮದಲ್ಲಿ ನಡೆಯುವ ಎಲ್ಲಾ ಚಟುವಟಿಕೆಗಳು ಸಹಕಾರ ತತ್ವದ ಆಧಾರದ ಮೇಲೆ ನಡೆಯಬೇಕು.

೧೪. ಅಸಹಕಾರ ಮತ್ತು ಸತ್ಯಾಗ್ರಹದ ತಂತ್ರದ ಜೊತೆಗೆ ಅಹಿಂಸೆಯನ್ನು ಗ್ರಾಮ ಸಮುದಾಯವು ಅನುಮೋದಿಸಬೇಕು.

೧೫. ಗ್ರಾಮದ ರಕ್ಷಣೆಗಾಗಿ ರೊಟೇಷನ್ ಆಧಾರದ ಮೇಲೆ ಗ್ರಾಮ ರಕ್ಷಕರನ್ನು ಆಯ್ಕೆ ಮಾಡಬೇಕು. ಗ್ರಾಮವು ಹೊಂದಿರುವ ತನ್ನದೇ ಆದ ಸಬ್‌ರಿಜಿಸ್ಟರ್‌ಗೆ ಅನುಗುಣವಾಗಿ ಈ ಸೇವೆಯು ಕಡ್ಡಾಯವಾಗಿರಬೇಕು.

೧೬. ಶಿಕ್ಷೆಯನ್ನು ವಿಧಿಸಲು ಒಪ್ಪಿಕೊಳ್ಳಬಹುದಾದಂತಹ ವ್ಯವಸ್ಥೆ ಇಲ್ಲವಾದ್ದರಿಂದ ಗ್ರಾಮ ಪಂಚಾಯಿತಿ ಶಾಸಾಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗಗಳನ್ನು ಹೊಂದಿರಬೇಕು.

೧೭. ಜಾತಿ ಆಧಾರದ ಮೇಲೆ ಮಾಡುವ ತಾರತಮ್ಯವನ್ನು ಹಾಗೂ ಅಸ್ಪೃಶ್ಯತೆಯ ಆಚರಣೆಯನ್ನು ತಡೆಗಟ್ಟುವುದು.[೩]

ಈ ಮೇಲಿನ ಎಲ್ಲಾ ಲಕ್ಷಣಗಳನ್ನು ಆದರ್ಶ ಗ್ರಾಮಗಳು ಹೊಂದಿರಬೇಕು ಎನ್ನುವುದು ಗಾಂಧೀಜಿಯವರ ಆಶಯವಾಗಿತ್ತು.

ಭಾರತದ ಆತ್ಮ ಅದರ ಗ್ರಾಮಗಳಲ್ಲಿದೆ. ಇಡೀ ರಾಷ್ಟ್ರದ ಅಭಿವೃದ್ಧಿ ಗ್ರಾಮೀಣಾಭಿವೃದ್ಧಿ ಯಿಂದ ಪ್ರಾರಂಭವಾಗಬೇಕು. ಪ್ರತಿಯೊಂದು ಗ್ರಾಮವು ಸ್ವಾವಲಂಬನೆ ಸಾಧಿಸಬೇಕು. ಪ್ರಗತಿ ಹೊಂದಿದ ವ್ಯವಸಾಯ, ವಿಕೇಂದ್ರೀಕೃತ ಕೈಗಾರಿಕೆ, ಸಣ್ಣ ಪ್ರಮಾಣದ ಸಹಕಾರಿ ಸಂಸ್ಥೆಗಳು ಗ್ರಾಮಗಳಲ್ಲಿ ಬೆಳೆಯಬೇಕು. ಗ್ರಾಮೀಣ ಅರ್ಥ ವ್ಯವಸ್ಥೆಯ ಎಲ್ಲಾ ಹಂತಗಳಲ್ಲಿಯೂ ಜನರ ಪಾಲ್ಗೊಳ್ಳುವಿಕೆ ಇರಬೇಕು. ಇದರಿಂದ ಗ್ರಾಮಗಳ ಸರ್ವತೋಮುಖ ಅಭಿವೃದ್ಧಿಯಾಗಲು ಸಾಧ್ಯವಾಗುತ್ತದೆ. ಸಮಗ್ರವಾಗಿ ಅಭಿವೃದ್ಧಿ ಹೊಂದಿದ ಗ್ರಾಮ ವ್ಯವಸ್ಥೆಯನ್ನು ಗ್ರಾಮೀಣ ಸರ್ವೋದಯವೆಂದು ಗಾಂಧೀಜಿ ಕರೆದರು. ಹಿಂದುಳಿದ ಕೃಷಿ, ನೀರಾವರಿ ಸೌಲಭ್ಯಗಳ ಕೊರತೆ, ವೈದ್ಯಕೀಯ ಸೌಲಭ್ಯಗಳ ಕೊರತೆ, ಶೋಷಣೆ, ಹಸಿವು, ತೀವ್ರ ಬಡತನ, ಅನೈರ್ಮಲ್ಯ, ಅಪೌಷ್ಠಿಕತೆ, ಪೂರಕ ಉದ್ಯೋಗಗಳ ಕೊರತೆಯಂತಹ ಸಮಸ್ಯೆಗಳನ್ನು ದೇಶದುದ್ದಕ್ಕೂ ಸಂಚರಿಸಿದ ಗಾಂಧೀಜಿ ಕಣ್ಣಾರೆ ಕಂಡು ನೊಂದಿದ್ದರು. ಗ್ರಾಮಗಳ ಉದ್ಧಾರಕ್ಕಾಗಿ ಸ್ವಾತಂತ್ರ್ಯ ಹೋರಾಟದ

ಜೊತೆ ಜೊತೆಗೆ ಗಮನ ಹರಿಸಿ ರಚನಾತ್ಮಕ ಕಾರ್ಯಕ್ರಮಗಳನ್ನು ರೂಪಿಸುತ್ತಾ ಬಂದರು. ಪ್ರತಿಯೊಂದು ಗ್ರಾಮವು ಸ್ವಾವಲಂಬನೆಯಾದ ಚಿಕ್ಕ ಗಣರಾಜ್ಯವಾಗಬೇಕು ಎಂದು ಗಾಂಧೀಜಿಯವರು ಆಶಿಸಿದರು. ಇಂತಹ ಗ್ರಾಮವು ತನ್ನ ಪ್ರಮುಖ ಬೇಡಿಕೆಗಳಿಗೆ ತನ್ನ ನೆರೆಯ ಗ್ರಾಮಗಳನ್ನು ಅವಲಂಬಿಸಿರುವುದಿಲ್ಲ, ಇಂತಹ ಗ್ರಾಮ ವ್ಯವಸ್ಥೆಯನ್ನು ಗ್ರಾಮ ಸ್ವರಾಜ್ಯ ಎಂದು ಗಾಂಧೀಜಿಯವರು ಕರೆದರು.[೪]

ಗಾಂಧೀಜಿಯವರ ಗ್ರಾಮ ಸ್ವರಾಜ್ಯದ ಅಭಿಪ್ರಾಯವನ್ನು ವಿನೋಬಾ ಭಾವೆಯವರು ಪುಷ್ಠಿಗೊಳಿಸಿದ್ದಾರೆ. ಗ್ರಾಮ ಸ್ವರಾಜ್ಯವೆಂದರೆ ಗ್ರಾಮದ ಜನ ಸಮುದಾಯದಿಂದ ಗ್ರಾಮಕ್ಕಾಗಿ ಗ್ರಾಮಸ್ಥರಿಂದಲೇ ಎಲ್ಲಾ ಆಡಳಿತ ನಡೆಯಬೇಕು. ಹೇಗೆ ದೆಹಲಿಯಲ್ಲಿ ಭಾರತಕ್ಕೆ ಸಾರ್ವಭೌಮಾಧಿಕಾರ ಕೇಂದ್ರೀಕೃತವಾಗಿದೆಯೋ ಅದೇ ರೀತಿ ಗ್ರಾಮದಲ್ಲಿಯೇ ಸಾರ್ವಭೌಮಾಧಿಕಾರವಿರಬೇಕು. ಗ್ರಾಮದ ಜನ ಅವರ ಸಮಸ್ತ ಆಗು – ಹೋಗುಗಳನ್ನು ನಡೆಸಿಕೊಳ್ಳುವ ಸಾಮರ್ಥ್ಯ ಹೊಂದಿರಬೇಕು. ತಾಲ್ಲೂಕು, ಜಿಲ್ಲೆ, ಪ್ರಾಂತ್ಯ, ರಾಷ್ಟ್ರ ಮುಂತಾದ ಘಟಕಗಳು ಗ್ರಾಮಕ್ಕೆ ಅವಶ್ಯಕವಾದ ಸಲಹೆ ಮೇಲ್ವಿಚಾರಣೆಯನ್ನು ನೀಡಬೇಕು. ಒಟ್ಟಿನಲ್ಲಿ ವಿಕೇಂದ್ರಿತ ಸ್ವಾವಲಂಬನೆಗೆ ಗ್ರಾಮದ ವ್ಯವಸ್ಥೆಯಾಗಬೇಕು. ಸಮಗ್ರ ಸ್ವಯಂ ಆಡಳಿತದ ಮೇಲೆ ಗ್ರಾಮವು ಆಧಾರಿತವಾಗಬೇಕು[೫] ಎಂದು ವಿನೋಬಾ ಭಾವೆಯವರು ಗ್ರಾಮ ಸ್ವರಾಜ್ಯದ ಬಗ್ಗೆ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದರು.

ಗಾಂಧೀಜಿಯವರ ಪ್ರಕಾರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮವು ಸರ್ವೋದಯ ಸಿದ್ಧಾಂತದ ತಳಹದಿಯ ಆಧಾರದ ಮೇಲೆ ಅಭಿವೃದ್ಧಿಯಾದುದಾಗಿದೆ. ಸರ್ವೋದಯ ಸಿದ್ಧಾಂತವು ಎಲ್ಲರ ಒಳಿತನ್ನೂ ಬಯಸುವ ಆದರ್ಶ ಸಿದ್ಧಾಂತವಾಗಿದ್ದು ಇದು ಇಂದಿನ ಸಂಘಟಿತ ಅಭಿವೃದ್ಧಿ ಕಾರ್ಯಕ್ರಮವನ್ನು ಹೋಲುತ್ತದೆ. ಸಂಘಟಿತ ಅಭಿವೃದ್ಧಿ ಕಾರ್ಯಕ್ರಮ ಬರೀ ಆರ್ಥಿಕ ಅಭಿವೃದ್ಧಿಯನ್ನು ಮಾತ್ರ ಒಳಗೊಂಡಿರುವುದಿಲ್ಲ, ಜೀವನದ ಎಲ್ಲಾ ಚಟುವಟಿಕೆಗಳು ಅಭಿವೃದ್ಧಿಯಡಿಯಲ್ಲಿ ಬರುತ್ತವೆ. ಕೃಷಿ ಮತ್ತು ಇತರ ಪ್ರಾಥಮಿಕ ಕ್ಷೇತ್ರದ ಚಟುವಟಿಕೆಗಳು ದ್ವಿತೀಯ ಮತ್ತು ತೃತೀಯ ಕ್ಷೇತ್ರದ ಚಟುವಟಿಕೆಗಳೂ ಇದರಡಿಯಲ್ಲಿ ಬರುತ್ತವೆ. ಗಾಂಧೀಜಿಯವರು ರೂಪಿಸಿದ ಗ್ರಾಮಗಳ ಪುನರ್ ನಿರ್ಮಾಣ ಯೋಜನೆಯನ್ನು ಸಮಗ್ರ ಗ್ರಾಮ ಸೇವೆಯ ಯೋಜನೆ ಎಂದು ಕರೆಯಬಹುದು. ಈ ಯೋಜನೆಯು ವ್ಯವಸಾಯ, ಪಶುಸಂಗೋಪನೆ, ಅರಣ್ಯಾಭಿವೃದ್ಧಿ, ಮೀನುಗಾರಿಕೆ, ಖಾದೀ ಉತ್ಪಾದನೆ ಮತ್ತು ಬಳಕೆ, ಗ್ರಾಮೀಣ ಕೈಗಾರಿಕೆಗಳಿಗೆ ಪ್ರೋತ್ಸಾಹ, ಪ್ರಾಥಮಿಕ ಮತ್ತು ವಯಸ್ಕರ ಶಿಕ್ಷಣ, ಗ್ರಾಮ ನೈರ್ಮಲ್ಯ, ಹಿಂದುಳಿದ ಜನಾಂಗಗಳ ಏಳಿಗೆ, ಕೋಮು ಸೌಹಾರ್ದ, ಪಾನ ನಿರೋಧ, ಪ್ರಕೃತಿ ಚಿಕಿತ್ಸೆ ಮತ್ತು ಮೂಲ ಸೌಲಭ್ಯಗಳ ಅಭಿವೃದ್ಧಿ ಮುಂತಾದವುಗಳನ್ನು ಒಳಗೊಂಡಿರಬೇಕು.[೬]

ಗಾಂಧೀಜಿಯವರು ಆದರ್ಶ ಗ್ರಾಮ ಸ್ವರಾಜ್ಯದ ಪರಿಕಲ್ಪನೆಯ ಅಂಗವಾಗಿ ಭಾರತದ ಹಳ್ಳಿಗಳ ಅಭಿವೃದ್ಧಿಗಾಗಿ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಪ್ರಚಾರ ಕೈಗೊಂಡಿದ್ದರು. ಇದರಿಂದ ಪ್ರಭಾವಿತರಾದ ತುಮಕೂರು ಜಿಲ್ಲೆಯ ಕಾಂಗ್ರೆಸ್ಸಿನ ನಾಯಕರು ಗ್ರಾಮೀಣಾಭಿವೃದ್ಧಿ ಮತ್ತು ಸರ್ವೋದಯ ಕಾರ್ಯಕ್ರಮದಡಿಯಲ್ಲಿ ಜಿಲ್ಲೆಯಲ್ಲಿ ಭೂದಾನ ಚಟುವಟಿಕೆಗಳು, ಪಶುಸಂಗೋಪನೆ ಮತ್ತು ಗೋಹತ್ಯೆ ನಿಷೇಧ, ವಯಸ್ಕರ ಶಿಕ್ಷಣ, ರಾಷ್ಟ್ರೀಯ ಶಿಕ್ಷಣ, ಹಿಂದೂ–ಮುಸ್ಲಿಮ್ ಐಕತ್ಯೆ, ಗ್ರಾಮನೈರ್ಮಲ್ಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಪ್ರಚಾರ ನಡೆಸಿದರು.

ಗಾಂಧೀಜಿ ಹಾಗೂ ಕಾಂಗ್ರೆಸ್ ಮುಖಂಡರು ಗ್ರಾಮಸ್ಥರನ್ನು ಪಟ್ಟಣಗಳಲ್ಲಿ ನಡೆಯುವ ಕಾಂಗ್ರೆಸ್ ಅಧಿವೇಶನಕ್ಕೆ ಆಕರ್ಷಿಸುವುದಕ್ಕಿಂತ, ಕಾಂಗ್ರೆಸ್‌ನ ಅಧಿವೇಶನಗಳನ್ನು ಹಳ್ಳಿಗಳಲ್ಲಿ ನಡೆಸಿದರೆ, ಗ್ರಾಮಸ್ಥರ ಒಲವನ್ನು ಹೆಚ್ಚಿಸಿಕೊಳ್ಳಬಹುದು ಮತ್ತು ಭಾರತದ ಹಳ್ಳಿಗಾಡಿನ ಗ್ರಾಮಸ್ಥರ ನೈಜ ಚಿತ್ರಣವನ್ನು ಸರಿಯಾಗಿ ತಿಳಿದುಕೊಳ್ಳಬಹುದು ಎಂದು ಕಾಂಗ್ರೆಸ್ ಅಧಿವೇಶನಗಳನ್ನು ಚಿಕ್ಕ ಚಿಕ್ಕ ಹಳ್ಳಿಗಳಲ್ಲಿ ಹಮ್ಮಿಕೊಳ್ಳಲಾಯಿತು. ಇದಕ್ಕಾಗಿ ೧೯೩೬ರಲ್ಲಿ ಫೈಜಪುರ, ೧೯೩೭ರಲ್ಲಿ ಹರಿಪುರ, ೧೯೩೮ರಲ್ಲಿ ತ್ರಿಪುರ, ೧೯೩೯ರಲ್ಲಿ ರಾಯಘರ್ ನಂತಹ ಚಿಕ್ಕ ಹಳ್ಳಿಗಳನ್ನು ಆರಿಸಿಕೊಂಡು ಅಧಿವೇಶನಗಳನ್ನು ನಡೆಸಲಾಯಿತು.[೭] ೧೯೩೬ರ ಫೈಜಪುರ ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷರಾಗಿದ್ದ ನೆಹರು ತಮ್ಮ ಭಾಷಣದಲ್ಲಿ ಗ್ರಾಮೀಣಾಭಿವೃದ್ಧಿಗೆ ಹೆಚ್ಚಿನ ಆಧ್ಯತೆ ನೀಡಬೇಕು ಎಂದು ತಿಳಿಸಿದರು. ಈ ಅಧಿವೇಶನದಲ್ಲಿ ತುಮಕೂರು ಜಿಲ್ಲೆಯಿಂದ ಮಧುಗಿರಿಯ ಮಾಲಿಮರಿಯಪ್ಪನವರು ಭಾಗವಹಿಸಿದರು. ಇವರು ನೆಹರುರವರ ಭಾಷಣದಿಂದ ಪ್ರಭಾವಿತರಾಗಿ ತುಮಕೂರು ಜಿಲ್ಲೆಯಲ್ಲಿ ಗ್ರಾಮೀಣಾಭಿವೃದ್ಧಿಗೆ ಸೇವೆ ಸಲ್ಲಿಸಲು ಮುಂದಾದರು. ಮಾಲಿಮರಿಯಪ್ಪನವರು ಸ್ವಂತಃ ತಾನೇ ಹಳ್ಳಿಗಳಿಗೆ ಕಾಲ್ನಡಿಗೆಯಲ್ಲಿ ಹೋಗಿ ರೈತರ ಹೊಲ, ಗದ್ದೆ, ಹಣಕಾಸಿನ ವ್ಯಾಜ್ಯಗಳನ್ನು ಪಂಚಾಯ್ತಿಯ ಮೂಲಕ ಬಗೆಹರಿಸುತ್ತಿದ್ದರು. ಈ ರೀತಿಯ ವ್ಯಾಜ್ಯದಿಂದ ಹಳ್ಳಿಯ ಸಂಸಾರಗಳು ಭಗ್ನವಾಗುವುದನ್ನು, ಹಳ್ಳಿಗಳು ಹಾಳಾಗುವುದನ್ನು ತಡೆಗಟ್ಟಲು ಪ್ರಯತ್ನಿಸಿದರು. ಆದುದರಿಂದ ಇವರನ್ನು ಪಂಚಾಯ್ತಿಯ ಮರಿಯಪ್ಪ ಎಂದು ಕರೆಯುತ್ತಿದ್ದರು. ಇವರು ಜಿಲ್ಲೆಯ ಮಧುಗಿರಿಯ ಉಪವಿಭಾಗದಲ್ಲಿ ಕೆರೆ, ಕಟ್ಟೆಗಳನ್ನು ಕಟ್ಟಿಸಲು, ಭಾವಿಗಳನ್ನು ತೋಡಿಸಲು ಕ್ರಮ ಕೈಗೊಂಡಿದ್ದರು. ಇವರು ಶಿರಾ ತಾಲ್ಲೂಕಿನ ಗಾಯಿತ್ರಿ ಜಲಾಶಯದ ಕಾಲುವೆಯ ನೀರು ಹರಿಯಲು ಮತ್ತು ಕಾಲುವೆಯ ನಿರ್ಮಾಣವು ತ್ವರಿತವಾಗಿ ನಡೆಯಲು ಕ್ರಮಕೈಗೊಂಡಿದ್ದರು. ಈ ರೀತಿಯಾಗಿ ರೈತರ ವ್ಯವಸಾಯಕ್ಕೆ ಅನುಕೂಲ ಕಲ್ಪಿಸಿದ್ದರು. ಹಳ್ಳಿಗಳು ಅಭಿವೃದ್ಧಿಯಾಗಬೇಕಾದರೆ ವಿದ್ಯೆಯೇ ಮುಖ್ಯ ಸಾಧನ ಎಂದು ನಂಬಿ, ವಿದ್ಯಾಭಿವೃದ್ಧಿಗಾಗಿ ಶಿರಾ, ಮಧುಗಿರಿಗಳಲ್ಲಿ ಕಾಲೇಜುಗಳ ಸ್ಥಾಪನೆಗೆ ಕಾರಣರಾಗಿದ್ದರು.[೮] ಈ

ರೀತಿ ಹಳ್ಳಿಗಳ ಅಭಿವೃದ್ಧಿಗಾಗಿ, ಹಳ್ಳಿಗಳಿಂದ ಬರುವ ವಿದ್ಯಾಕಾಂಕ್ಷಿಗಳ ಪ್ರಗತಿಗಾಗಿ ಮಾಲಿಮರಿಯಪ್ಪ ಕ್ರಮ ಕೈಗೊಂಡಿದ್ದರು.

ಗಾಂಧೀಜಿಯವರ ಗ್ರಾಮೀಣಾಭಿವೃದ್ಧಿಯ ಕಾರ್ಯಕ್ರಮದ ಅಂಗವಾಗಿ ಮೈಸೂರು ಸಂಸ್ಥಾನದಲ್ಲಿ ಗ್ರಾಮೀಣಾಭಿವೃದ್ಧಿಯ ಕಾರ್ಯಕ್ರಮಗಳ ಯೋಜನೆಯನ್ನು ೧೯೪೩ರಲ್ಲಿ ಜಾರಿಗೆ ತರಲಾಯಿತು. ಆದರೆ ಈಗಾಗಲೇ ಗ್ರಾಮೀಣಾಭಿವೃದ್ಧಿಯ ರಸ್ತೆಗಳ ನಿರ್ಮಾಣದ ಯೋಜನೆಯು ೧೯೪೦–೪೧ರಲ್ಲಿ ತನ್ನ ಕೆಲಸವನ್ನು ತುಮಕೂರು ಜಿಲ್ಲೆಯಲ್ಲಿ ಪ್ರಾರಂಭಿಸಲಾಯಿತು. ಈ ಕೆಲಸಕ್ಕಾಗಿ ೨,೭೫,೦೦೦ ರೂಪಾಯಿಗಳ ನೆರವನ್ನು ಸರ್ಕಾರ ಮಂಜೂರು ಮಾಡಿತು. ೧೯೪೫–೪೬ರಲ್ಲಿ ೧೦೦ ಮೈಲಿ ರಸ್ತೆಗಳನ್ನು ೧೯೪೬–೪೭ರಲ್ಲಿ ೫೪ ಮೈಲಿ ರಸ್ತೆಗಳನ್ನು ಜಿಲ್ಲೆಯಲ್ಲಿ ನಿರ್ಮಿಸಲಾಯಿತು. ಜಿಲ್ಲೆಯ ಮಧುಗಿರಿ ಮತ್ತು ಪಾವಗಡ ತಾಲ್ಲೂಕುಗಳಲ್ಲಿ ಈ ಯೋಜನೆಯ ಪ್ರಕಾರ ಕೆಲಸಗಳು ತೃಪ್ತಿಕರವಾಗಿ ನಡೆಸಲಾಯಿತು. ಇದು ಅಲ್ಲದೇ ಗ್ರಾಮಾಂತರ ನೀರು ಸರಬರಾಜು ಯೋಜನೆಯ ಪ್ರಕಾರ ೧೯೩೯ ರಿಂದ ೧೯೪೭ರವರೆಗೆ ತುಮಕೂರು ಜಿಲ್ಲೆಯಲ್ಲಿ ೭೫೦ ಬಾವಿಗಳನ್ನು ಹೊಸದಾಗಿ ತೋಡಿಸಲಾಗಿತ್ತು. ಇದಕ್ಕಾಗಿ ೧೫ ಲಕ್ಷ ರೂಪಾಯಿಗಳು ಖರ್ಚು ಮಾಡಲಾಗಿತ್ತು. ಒಂದು ಬಾವಿಗೆ ಸರಾಸರಿ ಎರಡು ಸಾವಿರ ರೂಪಾಯಿಗಳನ್ನು ಖರ್ಚು ಮಾಡಲಾಗಿತ್ತು. ಇವುಗಳಲ್ಲಿ ೨೦೨ ಬಾವಿಗಳು ಕೇವಲ ಹಿಂದುಳಿದ ಪಂಗಡಗಳ ಜನರ ಅಭಿವೃದ್ಧಿಗಾಗಿಯೇ ತೋಡಿಸಲಾಗಿತ್ತು. ಈ ಬಾವಿಗಳನ್ನು ತುಮಕೂರು ಜಿಲ್ಲೆಯ ವಿಸ್ತೀರ್ಣಕ್ಕೆ ಹಂಚಿದರೆ ೭ ಚದರು ಮೈಲಿಗೆ ಒಂದು ಹೊಸ ಬಾವಿಯು ದೊರೆಯುತ್ತದೆ.

ತುಮಕೂರು ಜಿಲ್ಲೆಯಾದಾದ್ಯಂತ ಗ್ರಾಮೀಣಾಭಿವೃದ್ಧಿಯ ಕಾರ್ಯಗಳನ್ನು ನಡೆಸುವುದಕ್ಕಾಗಿ ೧೯೪೩–೪೪ರಲ್ಲಿ ೪೦,೦೦೦ ರೂಪಾಯಿಗಳ ನೆರವನ್ನು ಸರ್ಕಾರವು ಮಂಜೂರು ಮಾಡಿತು. ಜಿಲ್ಲೆಯ ೧೦ ಹೋಬಳಿಗಳನ್ನು ಆಯ್ಕೆ ಮಾಡಿಕೊಂಡು ಗ್ರಾಮ ಸುಧಾರಕರನ್ನು ನೇಮಿಸಿಕೊಂಡು ಗ್ರಾಮೀಣಾಭಿವೃದ್ಧಿಯ ಕೆಲಸಗಳನ್ನು ಪ್ರಾರಂಭಿಸಿದರು. ತುಮಕೂರು, ಕುಣಿಗಲ್ಲು, ಗುಬ್ಬಿ, ಚಿಕ್ಕನಾಯಕನಹಳ್ಳಿ, ತಿಪಟೂರು, ತುರುವೇಕೆರೆ, ಮಿಡಿಗೇಶಿ, ಹುಲಿಕುಂಟೆ, ಪಾವಗಡ, ಕೊರಟಗೆರೆ ಹೋಬಳಿಗಳಲ್ಲಿ ೨೩,೨೭೫ ರೂಪಾಯಿಗಳ ಗ್ರಾಮೀಣಾಭಿವೃದ್ಧಿಯ ಕೆಲಸ ಕಾರ್ಯಗಳನ್ನು ನಡೆಸಲಾಗಿತ್ತು. ಈ ಗುಂಪಿನಲ್ಲಿ ೫೩೦ ಹಳ್ಳಿಗಳಲ್ಲಿ ೩೬೪ ಗ್ರಾಮ ಪಂಚಾಯ್ತಿಗಳು ಸೇರಿದವು. ೧೯೪೪–೪೫ ರಲ್ಲಿ ಜಿಲ್ಲೆಯ ಗ್ರಾಮೀಣಾಭಿವೃದ್ಧಿಯ ಕಾರ್ಯಗಳಿಗಾಗಿ ೪೫,೦೦೦ ರೂಪಾಯಿಗಳನ್ನು ಮಂಜೂರು ಮಾಡಲಾಯಿತು. ಅದರಲ್ಲಿ ೨.೩೧. ೧೭ ರೂಪಾಯಿಗಳನ್ನು ಚುನಾಯಿತ ಹೋಬಳಿಗಳಲ್ಲಿಯೂ, ೨,೧೩೭ ರೂಪಾಯಿಗಳನ್ನು ಚುನಾಯಿಸಲ್ಪಡದಿದ್ದ ಹೋಬಳಿ ಗಳಲ್ಲಿಯೂ ಖರ್ಚು ಮಾಡಲಾಯಿತು. ೧೯೪೫ರಲ್ಲಿ ಚುನಾಯಿತ ಹೋಬಳಿಗಳಲ್ಲಿ ಎರಡನೆಯ ಗುಂಪು ಅಂಗೀಕರಿಸಲ್ಪಟ್ಟ ೧೦ ಹೋಬಳಿಗಳಲ್ಲಿ ಗ್ರಾಮೀಣಾಭಿವೃದ್ಧಿಯ ಕಾರ್ಯಗಳನ್ನು ಪ್ರಾರಂಭಿಸಲಾಯಿತು.

| ಹೋಬಳಿ | ತಾಲ್ಲೂಕು |
|---|---|
| ಗೂಳೂರು | ತುಮಕೂರು |
| ಕೋತಗೆರೆ | ಕುಣಿಗಲ್ಲು |
| ಕಡಬ | ಗುಬ್ಬಿ |
| ಶೆಟ್ಟಿಕೆರೆ | ಚಿಕ್ಕನಾಯಕನಹಳ್ಳಿ |
| ಕಿಬ್ಬನಹಳ್ಳಿ | ತಿಪಟೂರು |
| ಮಾಯಸಂದ್ರ | ತುರುವೇಕೆರೆ |
| ದೊಡ್ಡೇರಿ | ಮಧುಗಿರಿ |
| ಕಳ್ಳಂಬೆಳ್ಳ | ಶಿರಾ |
| ವೈ.ಎನ್. ಹೊಸಕೋಟೆ | ಪಾವಗಡ |
| ಚೆನ್ನರಾಯದುರ್ಗ | ಕೊರಟಗೆರೆ |

ಈ ಎರಡನೆಯ ಗುಂಪಿನ ಹೋಬಳಿಗಳಲ್ಲಿ ಗ್ರಾಮೀಣಾಭಿವೃದ್ಧಿ ಕಾರ್ಯಗಳನ್ನು ನಡೆಸುವುದಕ್ಕಾಗಿ ೧೯೪೫-೪೬ರಲ್ಲಿ ೫೦,೦೦೦ ರೂಪಾಯಿಗಳನ್ನು ಸರ್ಕಾರವು ಜಿಲ್ಲೆಗೆ ಮಂಜೂರು ಮಾಡಿತು. ಈ ಗುಂಪಿನಲ್ಲಿ ೪೭೮ ಹಳ್ಳಿಗಳು ३೭೪ ಗ್ರಾಮ ಪಂಚಾಯ್ತಿಗಳು ಸೇರಿದವು. ಇದೇ ಸಾಲಿನಲ್ಲಿ ಮೊದಲನೆಯ ಗುಂಪಿನ ಹೋಬಳಿಗಳಲ್ಲಿ ಗ್ರಾಮೀಣಾಭಿವೃದ್ಧಿಯ ಕಾರ್ಯಗಳನ್ನು ಮುಂದುವರಿಸುವುದಕ್ಕಾಗಿ ೫೦,೦೦೦ ರೂಪಾಯಿಗಳನ್ನು ಮಂಜೂರು ಮಾಡಿತು. ಅಲ್ಲದೇ ಇತರ ಕಡೆಗಳಲ್ಲಿಯೂ ಅವಶ್ಯವಿದ್ದರೆ ಹಣ ಖರ್ಚು ಮಾಡುವುದಕ್ಕಾಗಿ ೧೦,೦೦೦ ರೂಪಾಯಿಗಳನ್ನು ಮಂಜೂರು ಮಾಡಿತು. ಜಿಲ್ಲೆಯ ಗ್ರಾಮೀಣಾಭಿವೃದ್ಧಿಯ ಕಾರ್ಯಗಳಿಗಾಗಿ ಸರ್ಕಾರವು ೧೯೪೬-೪೭ ಸಾಲಿಗೆ ಒಟ್ಟು ಮೊತ್ತವು ೧,೧೫,೩೦೦ ರೂಪಾಯಿಗಳಿಗೆ ಹೆಚ್ಚಿಸಲಾಯಿತು.[೧೦] ಈ ರೀತಿಯಾಗಿ ಮೈಸೂರು ಸರ್ಕಾರವು ತುಮಕೂರು ಜಿಲ್ಲೆಯಲ್ಲಿ ಗ್ರಾಮೀಣಾಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವುದರ ಮೂಲಕ ಗಾಂಧೀಜಿಯವರ ಆದರ್ಶ ಗ್ರಾಮ ಸ್ವರಾಜ್ ಪರಿಕಲ್ಪನೆಯನ್ನು ಯಶಸ್ವಿಗೊಳಿಸಲು ಕ್ರಮ ಕೈಗೊಂಡಿತು.

ತುಮಕೂರು ಜಿಲ್ಲೆಯ ಗಾಂಧೀಜಿಯವರ ಅನುಯಾಯಿಗಳು, ಕಾಂಗ್ರೆಸ್ಸಿನ ಮುಖಂಡರಾದ ಮಧುಗಿರಿಯ ಎಂ. ಪುಟ್ಟತಿಮ್ಮಯ್ಯ, ಖಾದಿಗಂಗಪ್ಪ, ತಿಪಟೂರಿನ ಟಿ.ಎ. ದಾಸಪ್ಪ ಪಾವಗಡದ ವಿ.ಎನ್.ರೆಡ್ಡಿಯವರು ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಂಡರು.

ಮಧುಗಿರಿ ತಾಲ್ಲೂಕಿನ ಎಂ. ಪುಟ್ಟತಿಮ್ಮಯ್ಯನವರು ಗ್ರಾಮೀಣಾಭಿವೃದ್ಧಿಯ ಅಂಗವಾಗಿ 'ಗ್ರಾಮ ಸಿಪಾಯಿ' ಎಂಬ ಕಾರ್ಯಕ್ರಮವನ್ನು ರೂಪಿಸಿದರು. ಇವರು ಹಳ್ಳಿಗಳಲ್ಲಿ ಜನರನ್ನು ಒಂದು ಕಡೆ ಸೇರಿಸಿ ಜನರ ಸಮಸ್ಯೆಗಳನ್ನು ಕೇಳಿ ಅವರ ಸಮಸ್ಯೆಗಳಿಗೆ ಸ್ಪಂದಿಸುತ್ತಿದ್ದರು.[೧೧] ಗಾಂಧೀಜಿಯವರ ಕನಸಿನಂತೆ ನಮ್ಮ ದೇಶ ಗ್ರಾಮ ಸ್ವರಾಜ್ಯವಾಗಬೇಕೆಂಬುದು ಇವರ ಗುರಿಯಾಗಿತ್ತು. ಇವರು ಸಾವಿರಾರು ಸ್ವಯಂ ಸೇವಕರೊಂದಿಗೆ ತುಮಕೂರು ಜಿಲ್ಲೆಯ ಮಧುಗಿರಿ, ಶಿರಾ ಹಾಗೂ ತಿಪಟೂರು ತಾಲ್ಲೂಕುಗಳ ಹಳ್ಳಿಗಳಲ್ಲಿ ಇಂಟನ್‌ಶೀವ್ ಕಾರ್ಯಕ್ರಮ ಹಾಕಿಕೊಂಡು ದಿನಕ್ಕೊಂದು ಹಳ್ಳಿಗೆ ಹೋಗಿ ಸ್ವಚ್ಛತೆ ಮಾಡುವುದು, ರಸ್ತೆಗಳು ಇಲ್ಲದೇ ಇರುವ ಕಡೆ ರಸ್ತೆಗಳನ್ನು ನಿರ್ಮಾಣ ಮಾಡುವುದು, ದೇವಸ್ಥಾನಗಳ ದುರಸ್ಥಿ, ಗಿಡಗಳನ್ನು ರಸ್ತೆಯ ಬದಿಗಳಲ್ಲಿ ನೆಡೆಸುತ್ತಿದ್ದರು. ಗಾಂಧೀಜಿಯವರ ಮೂಲ ಶಿಕ್ಷಣವನ್ನು ಗ್ರಾಮೀಣ ಯುವಕರಲ್ಲಿ ಪ್ರಚಾರ ಮಾಡಿದರು.[೧೨] ಇವರು ಸ್ವಯಂ ಸೇವಾ ಶಿಬಿರಗಳನ್ನು ಹಳ್ಳಿಗಳಲ್ಲಿ ಹಮ್ಮಿಕೊಳ್ಳುವುದರ ಮೂಲಕ ಗ್ರಾಮೀಣಾಭಿವೃದ್ಧಿ ಕಾರ್ಯಗಳನ್ನು ಯಶಸ್ವಿಯಾಗಿ ನಡೆಸ ತೊಡಗಿದರು.

ಎಂ. ಪುಟ್ಟತಿಮ್ಮಯ್ಯನವರು ಮಧುಗಿರಿ ತಾಲ್ಲೂಕಿನ ಬಡವನಹಳ್ಳಿ ಹತ್ತಿರ ಒಂದು ಆದರ್ಶ ಗ್ರಾಮವನ್ನು ಕಟ್ಟಲು ೧೨೦೦ ಎಕರೆ ಜಮೀನನ್ನು ಸರ್ಕಾರದಿಂದ ಪಡೆದು ೪೦ ಹಿಂದುಳಿದ ಕುಟುಂಬಗಳು ಅಲ್ಲಿ ನೆಲಸುವಂತೆ ಮಾಡಿದರು. ಹಾಗೆಯೇ ಅವರಿಗೆ ವಸತಿ, ಆಹಾರ, ನೀರಿನ ವ್ಯವಸ್ಥೆಗಾಗಿ ಒಂದು ಕೆರೆ ನಿರ್ಮಾಣ, ದನಕರುಗಳಿಗೆ ಗೋ ಕಟ್ಟೆಯನ್ನು, ಭಜನಾ ಮಂದಿರವನ್ನು ನಿರ್ಮಾಣ ಮಾಡಿದರು[೧೩] ತುಮಕೂರು ಜಿಲ್ಲೆಯ ತಿಪಟೂರು ತಾಲ್ಲೂಕಿನ ಟಿ.ಎ. ದಾಸಪ್ಪನವರು ಸೇವಾದಳದ ಮೂಲಕ ಶ್ರಮದಾನ ಶಿಬಿರಗಳನ್ನು ಹಮ್ಮಿಕೊಂಡು ಗ್ರಾಮೀಣಾಭಿವೃದ್ಧಿಗೆ ಪೂರಕವಾದ ಕೆಲಸಗಳನ್ನು ಕಾರ್ಯಗತಗೊಳಿಸಿದರು. ಇವರು ಗ್ರಾಮೀಣಾಭಿವೃದ್ಧಿ ಪೂರಕವಾಗಿ ತಾಲ್ಲೂಕಿನಲ್ಲಿ ಕೈಗೊಂಡ ರಸ್ತೆ ಕೆಲಸಗಳೆಂದರೆ ಕಂಚಿ ಘಟ್ಟದ ಮಾರ್ಗವಾಗಿ ಹೊನ್ನವಳ್ಳಿಯವರೆವಿಗೂ ೧೧ ಮೈಲಿಗಳ ಉದ್ದದ ರಸ್ತೆಯನ್ನು, ನಾಗರಘಟ್ಟ – ಮೂಗುತಿಹಳ್ಳಿಯ ೨.೫ ಮೈಲಿಗಳ ಉದ್ದದ ರಸ್ತೆಯನ್ನು ನಿರ್ಮಾಣ ಮಾಡಿಸಿದರು. ತಾಲ್ಲೂಕಿನ ಅನೇಕ ಹಳ್ಳಿಗಳ ರಸ್ತೆ ರಿಪೇರಿ, ಚರಂಡಿ ನಿರ್ಮಾಣ, ಗಿಡಗಳನ್ನು ನೆಡಿಸುವುದು ಮುಂತಾದ ಗ್ರಾಮೀಣಾಭಿವೃದ್ಧಿ ಕಾರ್ಯಗಳನ್ನು ಕೈಗೊಂಡು ಯಶಸ್ವಿಯಾಗಿದ್ದರು.[೧೪] ಅದೇ ರೀತಿಯಾಗಿ ಶಿರಾ ತಾಲ್ಲೂಕಿನ ರಾರೋಗೆರೆಯ ಕೆ.ಪಿ. ಚನ್ನಬಸಯ್ಯ ಶಿರಾ ತಾಲ್ಲೂಕಿನಾದ್ಯಂತ ಹೊಸ ರಸ್ತೆಗಳ ನಿರ್ಮಾಣ, ಕುಡಿಯುವ ನೀರಿನ ವ್ಯವಸ್ಥೆ, ಗ್ರಾಮ ನೈರ್ಮಲ್ಯೀಕರಣ ಮುಂತಾದ ಗ್ರಾಮೀಣಾಭಿವೃದ್ಧಿ ಕಾರ್ಯಗಳನ್ನು ಜಾರಿಗೆ ತರಲು ಶ್ರಮವಹಿಸಿದರು.[೧೫] ಹಾಗೆಯೇ ಪಾವಗಡ ತಾಲ್ಲೂಕಿನ ವೆಂಕಟಾಪುರ ಗ್ರಾಮದ ವಿ.ಎನ್. ರೆಡ್ಡಿಯವರು

ಗಾಂಧೀಜಿಯವರ ಗ್ರಾಮೀಣಾಭಿವೃದ್ಧಿಯ ತತ್ವಗಳಿಂದ ಆಕರ್ಷಿತರಾಗಿದ್ದರು. ಇವರು ವೆಂಕಟಾಪುರ ಗ್ರಾಮ ಪಂಚಾಯ್ತಿಯ ಅಧ್ಯಕ್ಷರಾಗಿ ಸತತವಾಗಿ ೨೮ ವರ್ಷ ಸೇವೆ ಸಲ್ಲಿಸಿದರು. ಈ ಅವಧಿಯಲ್ಲಿ ಗ್ರಾಮೀಣಾಭಿವೃದ್ಧಿಗೆ ಬೇಕಾದ ಹಲವು ಕಾರ್ಯಕ್ರಮಗಳನ್ನು ಜಾರಿಗೆ ತಂದರು. ಗ್ರಾಮ ನೈರ್ಮಲ್ಯೀಕರಣ, ಗ್ರಾಮಗಳಲ್ಲಿ ಬೀದಿಯ ಬೆಳಕಿನ ಸೌಕರ್ಯ, ಗ್ರಾಮದಿಂದ ಗ್ರಾಮಗಳಿಗೆ ಕಚ್ಚಾ ರಸ್ತೆಯ ನಿರ್ಮಾಣ ಕಾರ್ಯಗಳು, ಬಡವರಿಗೆ ನಿವೇಶನಗಳ ಹಂಚಿಕೆ ಮುಂತಾದ ಕಾರ್ಯಗಳನ್ನು ಜಾರಿಗೆ ತಂದು ಕಾರ್ಯಗತಗೊಳಿಸಿದರು. ಇವರು ಗ್ರಾಮೀಣಾಭಿವೃದ್ಧಿಯ ಸಲಹಾ ಮಂಡಳಿಯ ಸದಸ್ಯರಾಗಿಯೂ ೯ ವರ್ಷ ಸೇವೆ ಸಲ್ಲಿಸಿದರು. ಇವರು ಗ್ರಾಮೀಣಾಭಿವೃದ್ಧಿಯಲ್ಲಿ ಕೈಗೊಂಡ ಸೇವಾ ಕಾರ್ಯಗಳಿಗಾಗಿ ಇವರಿಗೆ ೧೯೬೫ ರಲ್ಲಿ ರಾಜ್ಯ ಸರ್ಕಾರವು ಸಾರ್ವಜನಿಕ ಸೇವಾ ಪ್ರಶಸ್ತಿಯನ್ನು ನೀಡಿ ಗೌರವಿಸಿತು.[೧೬]

ತುಮಕೂರು ಜಿಲ್ಲೆಯಲ್ಲಿನ ಗಡಿನಾಡ ಪ್ರದೇಶವಾದ ಪಾವಗಡ ತಾಲ್ಲೂಕಿನ ರಂಗಸಮುದ್ರದಲ್ಲಿ ಗಾಂಧೀಜಿಯವರ ಅನುಯಾಯಿಯಾದ ಖಾದಿ ಗಂಗಪ್ಪನವರ ನಾಯಕತ್ವದಲ್ಲಿ ಗ್ರಾಮೀಣಾಭಿವೃದ್ಧಿಗಾಗಿ ೧೯೮೩ ರಲ್ಲಿ ಸರ್ವ ಸೇವಾ ಪಾರಂ ಆರಂಭಗೊಂಡಿತು. ಇದರ ವ್ಯಾಪ್ತಿಯಲ್ಲಿ ತಾಲ್ಲೂಕಿನ ರಂಗ ಸಮುದ್ರ, ಕೋಟಗುಡ್ಡ, ವದನಕಲ್ಲು, ಕೊಡಿಗೇಹಳ್ಳಿ ಮತ್ತು ಸಾಸಲಕುಂಟೆ ಗ್ರಾಮ ಪಂಚಾಯ್ತಿಗಳಿಗೆ ಸೇರಿದ ೬೪ ಹಳ್ಳಿಗಳು ಈ ಪಾರಂನ ವ್ಯಾಪ್ತಿಗೊಳಪಟ್ಟಿವೆ. ಇದು ಹಳ್ಳಿಗಳನ್ನು ದತ್ತು ಪಡೆದು ಅಲ್ಲಿನ ರೈತರ ಜಮೀನಿನ ಅಭಿವೃದ್ಧಿಗಾಗಿ, ರೈತರಿಗೆ ಮನೆ ಕಟ್ಟಿ ಕೊಳ್ಳಲು, ಬೇಸಾಯಕ್ಕೆ ಬಾವಿ ತೋಡಿಸಲು, ಎತ್ತಿನ ಗಾಡಿಗಳನ್ನು ಕೊಳ್ಳಲು ಧನ ಸಹಾಯ ನೀಡಲು ನೆರವಾಗುತ್ತಿದೆ. ಈ ಸರ್ವಸೇವಾ ಪಾರಂನಲ್ಲಿ ರೈತರ ಕುಟುಂಬ ವರ್ಗದವರಿಗೆ ಟೈಲರಿಂಗ್, ಊದುಬತ್ತಿ ಹೊಸೆ ಯುವ, ಕಸೂತಿ ಹಾಕುವ, ಮೇಣದ ಬತ್ತಿ ತಯಾರಿಕೆ, ಸಿಹಿ ತಿಂಡಿ ಮಾಡುವ ಬಗ್ಗೆ ತರಬೇತಿಯನ್ನು ನೀಡುತ್ತದೆ. ಇದಲ್ಲದೇ ಚರ್ಮ ಹದ ಮಾಡುವ ಆದರಿಂದ ಕರಕುಶಲ ವಸ್ತುಗಳನ್ನು ತಯಾರಿಸುವ ಲೆದರ್ ಇಂಡಸ್ಟ್ರೀಸ್ ಮತ್ತು ದಿನನಿತ್ಯದ ಬಳಕೆಯ ವಸ್ತುಗಳಾದ ಮೊಟ್ಟೆಗಾಗಿ ಕೋಳಿ ಫಾರಂ, ಹಾಲು ಉತ್ಪಾದನೆ ಮತ್ತು ಮಾರಾಟ ಮೊದಲಾದ ವಿಷಯಗಳ ಬಗ್ಗೆ ತರಬೇತಿ ನೀಡಿ ಸ್ವಯಂ ಉದ್ಯೋಗಿಗಳಾಗಲು ನೆರವು ನೀಡಲಾಯಿತು.

ರೈತಾಪಿ ವರ್ಗದವರಿಗೆ ಕುರಿ–ಮೇಕೆ ಸಾಕಾಣಿಕೆ ಹಾಲು ಉತ್ಪಾದನೆಗೆ ಹಸು ಎಮ್ಮೆಗಳನ್ನು ವಿತರಿಸಲಾಯಿತು. ನೀರು ಸರಬರಾಜಿಗಾಗಿ ಪೈಪ್ ಲೈನ್, ಪಂಪ್ ಸೆಟ್ ಗಾಗಿ ಸಾಲ ಸೌಲಭ್ಯವನ್ನು ಒದಗಿಸಿತು. ಇದು ಅಲ್ಲದೇ ನಿರೀಕ್ಷಿತ ಸೌಲಭ್ಯಗಳಿಲ್ಲದ ಹಳ್ಳಿಯ ಶಾಲೆಗಳನ್ನು ಗುರುತಿಸಿ ಆ ಶಾಲೆಗಳಿಗೆ ಪಾಠೋಪಕರಣ, ಪೀಠೋಪಕರಣಗಳನ್ನು ಕೊಡುಗೆಯಾಗಿ ನೀಡಿ ಗ್ರಾಮೀಣ ಪ್ರದೇಶದ ಮಕ್ಕಳ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿದರು. ಶಿಶುವಿಹಾರ ಮತ್ತು

ವಯಸ್ಕರ ಶಿಕ್ಷಣ ಶಾಲೆಗಳನ್ನು ತೆರೆದು ಜನರ ಜ್ಞಾನಾಭಿವೃದ್ಧಿಗಾಗಿ ಶ್ರಮಿಸಿದರು. ದೀನ ದಲಿತರಿಗೆ ವಸ್ತ್ರದಾನ, ಆರ್ಥಿಕವಾಗಿ ಬಹಳ ಹಿಂದುಳಿದ ಕುಟುಂಬದ ಮಕ್ಕಳಿಗೆ ಉಚಿತ ಬಟ್ಟೆ, ಪುಸ್ತಕ ಮೊದಲಾದವುಗಳನ್ನು ನೀಡಿ ಅವರು ಇತರರಂತೆ ವಿದ್ಯಾಭ್ಯಾಸ ಮಾಡಲು ಅನುಕೂಲ ಕಲ್ಪಿಸಿದರು.[೧೩] ಈ ಸರ್ವಸೇವಾ ಪಾರಂನ ವತಿಯಿಂದ ರಂಗ ಸಮುದ್ರದ ಹತ್ತಿರ ವಿನೋಬಾ ನಗರ, ಮತ್ತು ಗಾಂಧಿನಗರ ಎಂಬ ಎರಡು ಹೊಸ ಗ್ರಾಮಗಳನ್ನು ನಿರ್ಮಾಣ ಮಾಡಿದ ಕೀರ್ತಿ ಗಂಗಪ್ಪನವರಿಗೆ ಸಲ್ಲುತ್ತದೆ. ಈ ಮೂಲಕ ಗಾಂಧೀಜಿಯವರು ಕಂಡಿದ್ದ ಗ್ರಾಮ ಸ್ವರಾಜ್ಯದ ಕನಸನ್ನು ನನಸು ಮಾಡಲು ಪ್ರಯತ್ನಿಸಿದರು. ಇವರ ಕಾರ್ಯ ಚಟುವಟಿಕೆಗಳಲ್ಲಿ ರಂಗಸಮುದ್ರದ ಚಂದ್ರಮೌಳಿ, ದೊಡ್ಡೇನಹಳ್ಳಿಯ ಟಿ.ಡಿ. ತಿಪ್ಪೇಸ್ವಾಮಿ, ಕೋಟಗುಡ್ಡದ ರಾಮಚಂದ್ರರಾವ್ ಕೈ ಜೋಡಿಸಿ ಸಹಕರಿಸಿದರು.

ಸರ್ವೋದಯ : ಗಾಂಧೀಜಿಯವರ ಪ್ರಕಾರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮವು ಸರ್ವೋದಯ ಸಿದ್ಧಾಂತದ ತಳಹದಿಯ ಆಧಾರದ ಮೇಲೆ ಅಭಿವೃದ್ಧಿಯಾದುದಾಗಿದೆ. ಸರ್ವೋದಯ ಸಿದ್ಧಾಂತವು ಎಲ್ಲರ ಒಳಿತನ್ನು ಬಯಸುವ ಆದರ್ಶ ಸಿದ್ಧಾಂತವಾಗಿದೆ. ಗಾಂಧೀಜಿಯವರು ರಷ್ಯಾದ ಜಾನ್ ರಸ್ಕಿನ್ ನ 'ಅನ್ ಟು ದಿ ಲಾಸ್ಟ್' ಎಂಬ ಗ್ರಂಥವನ್ನು ಓದಿದ ನಂತರ ಇದನ್ನು ಗುಜರಾತಿ ಭಾಷೆಗೆ ಅನುವಾದಿಸಿ 'ಸರ್ವೋದಯ' ಎಂದು ಪ್ರಕಟಿಸಿ ಅದರಲ್ಲಿ ಸರ್ವೋದಯ ಸಿದ್ಧಾಂತವನ್ನು ಈ ರೀತಿ ಅರ್ಥೈಸಿದರು.

೧. ಎಲ್ಲರ ಏಳಿಗೆಯಲ್ಲಿ ನನ್ನ ಏಳಿಗೆ ಸೇರಿರುತ್ತದೆ.

೨. ವಕೀಲ ಮತ್ತು ಕ್ಷೌರಿಕರಿಬ್ಬರು ಕೆಲಸದ ಸೇವೆಗೆ ಒಂದೇ ಬೆಲೆಯನ್ನು ನಿಗದಿ ಮಾಡಬೇಕು. ಏಕೆಂದರೆ ಎಲ್ಲರಿಗೂ ಜೀವನವನ್ನು ನಡೆಸುವ ಹಕ್ಕು ಸಮಾನವಾಗಿದೆ.

೩. ಸರಳವಾದ ಕಷ್ಟದ ದುಡಿಮೆಯ, ರೈತನ ಜೀವನವೇ ನಿಜವಾದ ಜೀವನ[೧೪] ಎಂದು ಗಾಂಧೀಜಿಯವರು ಸರ್ವೋದಯ ಸಿದ್ಧಾಂತದ ಬಗ್ಗೆ ತಮ್ಮ ಅಭಿಪ್ರಾಯವನ್ನು ಸೂಚಿಸಿದ್ದರು. ಅನಂತರ ಗಾಂಧೀಜಿಯವರು ತಮ್ಮ ಆದರ್ಶ ಸಮಾಜದ ಕಲ್ಪನೆಯನ್ನು 'ಹಿಂದ್ ಸ್ವರಾಜ್' ಎಂಬ ಹೊತ್ತಿಗೆಯಲ್ಲಿ ಉಲ್ಲೇಖಿಸಿ, ಅದನ್ನು ಸರ್ವೋದಯ ಎಂದು ಕರೆದರು. ಸರ್ವೋದಯ ಅಂತ್ಯೋದಯದಿಂದ ಆರಂಭವಾಗಬೇಕೆಂಬುದು ಅವರ ಕಾರ್ಯ ವಿಧಾನವಾಗಿತ್ತು. ಅದು ಅಲ್ಲಿಗೆ ನಿಲ್ಲದೇ ಎಲ್ಲರ, ಎಲ್ಲದರ ಉದಯ ಅದರ ವ್ಯಾಪ್ತಿಯಲ್ಲಿ ಬರುತ್ತದೆ. ಆರ್ಥಿಕ, ರಾಜಕೀಯ, ನೈತಿಕ, ಶೈಕ್ಷಣಿಕ, ಸಾಂಸ್ಕೃತಿಕ ಹೀಗೆ ಎಲ್ಲ ಸರ್ವ ವಿಧದ ಏಳಿಗೆಯನ್ನು ಸೂಚಿಸುತ್ತದೆ. ಮನುಕುಲವೇ ಅಲ್ಲದೇ ಎಲ್ಲಾ ಜೀವರಾಶಿಗಳ ಏಳ್ಗೆಯ ಕಳಕಳಿ ಅದರಲ್ಲಿ ಅಡಗಿರುತ್ತದೆ[೧೫] ಎಂದು ಗಾಂಧೀಜಿಯವರು ವಿವರಿಸಿದರು.

ಗಾಂಧೀಜಿಯವರ ನಂತರ ಆಚಾರ್ಯ ವಿನೋಬಾ ಭಾವೆಯವರು ಗಾಂಧೀಜಿಯವರ ಆದರ್ಶದ ಭೂ ಸುಧಾರಣೆಯನ್ನು ತಮ್ಮ ಭೂದಾನ ಚಳುವಳಿಯ ಮೂಲಕ ಕೈಗೊಂಡರು. ಭೂದಾನವೆಂದರೆ ಭೂಮಾಲೀಕರು ಭೂಮಿಯನ್ನು ಭೂಮಿ ಇಲ್ಲದವರಿಗೆ ದಾನವಾಗಿ ನೀಡುವುದು. ಭೂಮಿಯು ಪ್ರಕೃತಿಯ ಉಚಿತ ಕೊಡುಗೆಯಾಗಿರುವುದರಿಂದ ಇದು ಎಲ್ಲರಿಗೂ ದೊರಕಬೇಕು. ಭೂಮಿಯು ಎಲ್ಲರಿಗೂ ದೊರೆತಾಗ ಪದಾರ್ಥಗಳನ್ನು ಬೆಳೆದುಕೊಂಡು ಬಡವರು ಅಭಿವೃದ್ಧಿಯಾಗುತ್ತಾರೆ. ಆದ್ದರಿಂದ ಭೂದಾನ ಚಳುವಳಿಯು ಗ್ರಾಮೀಣ ಸರ್ವೋದಯ ಸಾಧನೆಯಲ್ಲಿ ಮಹತ್ವದ ಸ್ಥಾನ ಪಡೆಯಬೇಕು ಎಂದು ಆಚಾರ್ಯ ವಿನೋಬಾ ಭಾವೆ ಆಶಿಸಿದರು.[೨೦] ೧೯೫೧ ಮಾರ್ಚ ೮ ರಂದು ಹೈದರಾಬಾದಿನ ಶಿವರಾಮ ಪಲ್ಲಿಯಲ್ಲಿ ಸರ್ವೋದಯ ಕಾರ್ಯಕರ್ತರ ಅಧಿವೇಶನ ನಡೆಯಿತು. ಇಲ್ಲಿಗೆ ವಿನೋಬಾ ಭಾವೆಯವರು ವಾರ್ಧಾದಿಂದ ಪಾದಯಾತ್ರಿಕರಾಗಿ ಭೇಟಿ ನೀಡಿದರು. ಇಲ್ಲಿಯೇ ಪ್ರಪ್ರಥಮವಾಗಿ ತನ್ನ ಭೂದಾನ ಚಳುವಳಿಯನ್ನು ಪ್ರಾರಂಭಿಸಿದರು.[೨೧] ಈ ಭೂದಾನ ಚಳುವಳಿಯಿಂದ ಪ್ರಭಾವಿತರಾದ ಕರ್ನಾಟಕದ ಬೆಳಗುಂಬ ನಾರಾಯಣಪ್ಪ, ಖಾದ್ರಿ ಶಾಮಣ್ಣ, ಜಿ.ವಿ. ನಾರಾಯಣಮೂರ್ತಿ, ಗರುಡಶರ್ಮ, ಬಾ.ಸು. ಕೃಷ್ಣಮೂರ್ತಿ, ಟಿ.ಎಸ್. ಅನಂತರಂಗಾಚಾರ್, ಗುಂಡಾಚಾರ್, ಅರ್ಕೈಯರ್, ಪಿ. ವೆಂಕೋಬರಾವ್, ಕೆ.ಎಸ್. ನಾರಾಯಣಸ್ವಾಮಿ, ಎಂ. ಪುಟ್ಟತಿಮ್ಮಯ್ಯ, ಖಾದಿ ಗಂಗಪ್ಪ, ಹೆಚ್.ಎಸ್. ದೊರೆಸ್ವಾಮಿಯವರು ೧೯೫೨ ರಿಂದಲೇ ಕರ್ನಾಟಕದಲ್ಲಿ ಭೂದಾನ, ಸರ್ವೋದಯ ಕಾರ್ಯ ಕ್ರಮಗಳನ್ನು ಪ್ರಾರಂಭಿಸಿದರು.[೨೨] ಈ ರೀತಿಯಾಗಿ ನಡೆಯುತ್ತಿದ್ದ ಸರ್ವೋದಯ ಕಾರ್ಯ ಕ್ರಮಗಳಿಂದ ಪ್ರಭಾವಿತರಾದ ತುಮಕೂರು ಜಿಲ್ಲೆಯ ಕಾಂಗ್ರೆಸ್ಸಿನ ನಾಯಕರು, ಸರ್ವೋದಯ ಕಾರ್ಯಕರ್ತರು ಜಿಲ್ಲೆಯಲ್ಲಿ ಗ್ರಾಮೀಣಾಭಿವೃದ್ಧಿಯ ಅಂಗವಾಗಿ ಸರ್ವೋದಯ ಮತ್ತು ಭೂದಾನ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಪ್ರಚಾರ ಕೈಗೊಂಡರು.

೧೯೫೨ ಜಿ.ವಿ. ನಾರಾಯಣಮೂರ್ತಿಯವರು ವಿನೋಬಾ ಭಾವೆಯವರ ಭೂದಾನದ ಯಾತ್ರೆಯಿಂದ ಪ್ರಭಾವಿತರಾಗಿ ತುಮಕೂರು ಜಿಲ್ಲೆಯ ಚಿಕ್ಕನಾಯಕನ ಹಳ್ಳಿ ತಾಲ್ಲೂಕಿನಾದ್ಯಂತ, ಅರ್ಕೈಯರ್, ಖಾದ್ರಿ ಶಾಮಣ್ಣ, ಬಾ.ಸು. ಕೃಷ್ಣಮೂರ್ತಿ, ಬೆಳಗುಂಬ ನಾರಾಯಣಪ್ಪನವರೊಂದಿಗೆ ಪಾದಯಾತ್ರೆ ಕೈಗೊಂಡು ಸರ್ವೋದಯ ತತ್ವಗಳನ್ನು ಪ್ರಚಾರ ಮಾಡಿದರು.[೨೩] ಈ ಸಮಯದಲ್ಲಿ ಜಿ.ವಿ. ನಾರಾಯಣಮೂರ್ತಿಯವರ ಸೌಜನ್ಯತೆಯಿಂದಾಗಿ ತಾಲ್ಲೂಕಿನಲ್ಲಿ ಸ್ವಲ್ಪ ಭೂಮಿಯನ್ನು ದಾನವನ್ನಾಗಿ ದೊರಕಿಸಿಕೊಟ್ಟಿತು ಎಂದು ಅರ್ಕೈಯರ್ ರವರು ಜಿ.ವಿ. ನಾರಾಯಣಮೂರ್ತಿಯವರ ಸರ್ವೋದಯ ಕಾರ್ಯಕ್ರಮದ ಬಗ್ಗೆ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ಅನಂತರ ಜಿ.ವಿ. ನಾರಾಯಣಮೂರ್ತಿಯವರು "Charity begians at home" ಎಂಬಂತೆ ತಮ್ಮ ಸ್ವಂತ ಬೆಳೆ ಬಾಳುವ ಜಮೀನನ್ನು ದಾನ ಮಾಡಿ ಭೂದಾನ

ಚಳುವಳಿಯನ್ನು ಕಾರ್ಯತಃ ಜಿಲ್ಲೆಯಲ್ಲಿ ಮೊದಲ ಬಾರಿಗೆ ಜಾರಿಗೆ ತಂದು ಯಶಸ್ವಿಗೊಳಿಸಲು ಪ್ರಯತ್ನಿಸಿದರು.[೨೪] ಜಿ.ವಿ. ನಾರಾಯಣಮೂರ್ತಿಯವರು ೧೯೫೩ ರಲ್ಲಿ ವಾರ್ಧಾಕ್ಕೆ ಹೋಗಿ ಅಲ್ಲಿ ಗಾಂಧೀ ವಿಚಾರ ಪರಿಷತ್ ಎಂಬ ಸಂಸ್ಥೆಯಲ್ಲಿ ಸರ್ವೋದಯ ಬಗ್ಗೆ ವಿದ್ವಾಂಸರಾಗಿ ಸಂಶೋಧನೆಯನ್ನು ಕೈಗೊಂಡರು. ಆ ಸಮಯದಲ್ಲಿ ಅಲ್ಲಿ ಅವರಿಗೆ ರಾಷ್ಟ್ರ ನಾಯಕರಾದ ಜೆ.ಪಿ. ಕೃಪಲಾನಿಯವರ ಪರಿಚಯವಾಗಿ ಗಾಂಧೀ ವಿಚಾರದಲ್ಲಿ ಮತ್ತು ಸರ್ವೋದಯ ವಿಚಾರದಲ್ಲಿ ಸಾಕಷ್ಟು ಮಾಹಿತಿಯನ್ನು ಪಡೆದುಕೊಂಡರು.[೨೫]

ಸರ್ವೋದಯ ಕಾರ್ಯಕರ್ತರಾದ ಜಿ.ವಿ. ನಾರಾಯಣ ಮೂರ್ತಿಯವರ ವ್ಯಕ್ತಿತ್ವದಿಂದ ಪ್ರಭಾವಿತರಾದ ತುರುವೇಕೆರೆ ತಾಲ್ಲೂಕಿನ ಮಾಯಸಂದ್ರದ ಮಾ.ಕೃ. ನರಸಿಂಹಯ್ಯನವರು ೧೯೫೪ ರಲ್ಲಿ ಸರ್ವೋದಯ ತತ್ವಗಳ ಆಧಾರದ ಮೇಲೆ ಮಾಯಸಂದ್ರದಲ್ಲಿ ಸರ್ವೋದಯ ಶಿಕ್ಷಣ ಸಮಿತಿ ಎಂಬ ವಿದ್ಯಾ ಕೇಂದ್ರವನ್ನು ಆರಂಭಿಸಿದರು. ಈ ಸಮಿತಿಗೆ ಮಾ.ಕೃ. ನರಸಿಂಹಯ್ಯ ಅಧ್ಯಕ್ಷರಾದರು. ಜಿ.ವಿ. ನಾರಾಯಣ ಮೂರ್ತಿಯವರು ಕಾರ್ಯದರ್ಶಿಯಾದರು. ಈ ಸಮಿತಿಯ ಸದಸ್ಯರಾಗಲು ಈ ನಿಯಮಗಳನ್ನು ಅನುಸರಿಸಬೇಕಾಗಿತ್ತು.

೧. ಸಮಿತಿಯ ಸದಸ್ಯರೆಲ್ಲರೂ ಖಾದೀದಾರಿಗಳಾಗಬೇಕು.

೨. ಸಭೆ ಸೇರುವ ಮುನ್ನ ಪ್ರತಿಯೊಬ್ಬ ಸದಸ್ಯರು ಅರ್ಧಗಂಟೆಯಾದರೂ ಚರಕದಿಂದಾಗಲಿ, ತಕಲಿಯಿಂದಾಗಲಿ ನೂಲನ್ನು ನೂಲಬೇಕು.

೩. ಮನೆಯಲ್ಲಿ ನೂತ ನೂಲಿನಲ್ಲಿ ಒಂದೊಂದು ಲಡ್ಡಿ ದಾರವನ್ನು ತಂದು ಸಮಿತಿಗೆ ಒಪ್ಪಿಸಬೇಕು.

೪. ಈ ಸಮಿತಿಯ ಸದಸ್ಯರು ಯಾರು ಪ್ರತ್ಯೇಕವಾಗಿ ರಾಜಕೀಯದಲ್ಲಿ ಭಾಗವಹಿಸಕೂಡದು. ಈ ನಿಯಮಗಳನ್ನು ಒಪ್ಪಿಕೊಂಡವರನ್ನು ಮಾತ್ರ ಸರ್ವೋದಯ ಶಿಕ್ಷಣ ಸಮಿತಿಯ ಕಾರ್ಯಕಾರಿ ಸಮಿತಿಗೆ ಸೇರಿಸಿಕೊಳ್ಳುವುದು ಎಂದು ಜಿ.ವಿ. ನಾರಾಯಣ ಮೂರ್ತಿಯವರು ತಿಳಿಸಿದರು.[೨೬] ಈ ಶಿಕ್ಷಣ ಸಮಿತಿಯ ಅಂಗ ಸಂಸ್ಥೆಯಾದ ನೆಹರು ಪ್ರೌಢಶಾಲೆಯಲ್ಲಿ ನಡೆಯುತ್ತಿದ್ದ ಸರ್ವೋದಯ ಚಟುವಟಿಕೆಗಳಾದ ಸಾಮೂಹಿಕ ಪ್ರಾರ್ಥನೆ, ಸಾಮೂಹಿಕ ನೀತಿ ಪಾಠಗಳು, ವಿದ್ಯಾರ್ಥಿಗಳು ನೂಲುವ ಕಲೆಯನ್ನು ಮೊದಲು ಅರ್ಧಗಂಟೆ ನೂಲುವುದು, ಕ್ರಮೇಣ ಒಂದು ಗಂಟೆ ನೂಲುವುದು, ಕೆಲವು ವಿದ್ಯಾರ್ಥಿಗಳು ತಕಲಿಯಲ್ಲಿ ನೂಲುವುದನ್ನು ಚೆನ್ನಾಗಿ ಕಲಿತರು. ನೂತ ನೂಲನ್ನು ಬೆಂಗಳೂರಿಗೆ ಕಳುಹಿಸಿ ಖಾದಿ ವಸ್ತ್ರವನ್ನು ಉತ್ಪಾದಿಸುವ ಕಾರ್ಯವು ಸಮರ್ಪಕವಾಗಿ ನಡೆಯಿತು. ಈ ರಚನಾತ್ಮಕ ಕಾರ್ಯಕ್ರಮದ ಪ್ರಯೋಗದ ಫಲಿತಾಂಶವನ್ನು ಸಾಧ್ಯವಾಗಿ ಅಧ್ಯಯನ ಮಾಡಿ ಅಂದಿನ

ಶಿಕ್ಷಣ ಸಚಿವರಾಗಿದ್ದ ಎ.ಜಿ. ರಾಮಚಂದ್ರರಾಯರ ಬಳಿಗೆ, ತುಮಕೂರು ಜಿಲ್ಲೆಯ ರೆವಿನ್ಯೂ ಜಿಲ್ಲಾಧಿಕಾರಿಯಾದ ರಹಮತುಲ್ಲಾಖಾನ್, ಸಿ.ಹೆಚ್. ಲಿಂಗದೇವರು, ಮಾ.ಕೃ. ನರಸಿಂಹಯ್ಯ, ಶ್ರೀನಿವಾಸ ಅಯ್ಯಂಗಾರ್, ಜಿ.ವಿ. ನಾರಾಯಣ ಮೂರ್ತಿಯವರನ್ನೊಳಗೊಂಡ ನಿಯೋಗವು ಭೇಟಿ ನೀಡಿತು. ಇದರಿಂದಾಗಿ ಈ ರಚನಾತ್ಮಕ ಕಾರ್ಯಕ್ರಮವನ್ನು ರಾಜ್ಯದ ೭ ಪ್ರೌಢಶಾಲೆಗಳಲ್ಲಿ ಸರ್ವೋದಯ ಪ್ರಯೋಗ ಪರೀಕ್ಷೆ ಮಾಡಲು ಶಿಕ್ಷಣ ಸಚಿವರು ಆಜ್ಞೆ ಹೊರಡಿಸಿದರು.[೨೭] ಇದು ತುಮಕೂರು ಜಿಲ್ಲೆಯ ಕ್ರಿಯಾತ್ಮಕ ಸರ್ವೋದಯ ಶಿಕ್ಷಣಕ್ಕೆ ದೊರೆತ ಮನ್ನಣೆ ಎನ್ನಬೇಕು.

ಸರ್ವೋದಯ ಕಾರ್ಯಕ್ರಮದ ಅಂಗವಾಗಿ ವಿನೋಬಾ ಭಾವೆಯವರು ಮೈಸೂರು ಸಂಸ್ಥಾನದಲ್ಲಿ ಭೂದಾನ ಯಾತ್ರೆಯನ್ನು ಕೈಗೊಂಡು ತುಮಕೂರು ಜಿಲ್ಲೆಗೆ ಭೇಟಿ ನೀಡಿದರು. ಇವರು ಜಿಲ್ಲೆಯಲ್ಲಿ ನಡೆಸಿದ ಮೊದಲನೆಯ ಸಭೆಯು ೨೫-೧೦-೧೯೫೭ರಂದು ಕುಣಿಗಲ್ಲಿನಲ್ಲಿ ನಡೆಯಿತು. ಈ ಸಭೆಯಲ್ಲಿ ವಿನೋಬಾ ಭಾವೆಯವರು ಹಿಂದಿನ ಮೈಸೂರು ಸಂಸ್ಥಾನದ ಇತರೆ ಜಿಲ್ಲೆಯವರಿಗೆ ಜಾಗೃತರಾದ ನೀವು ಆದರ್ಶವಾಗುವಂತೆ ಈ ಭೂದಾನ ಕ್ರಾಂತಿಯಲ್ಲಿ ಭಾಗವಹಿಸಿರಿ ಎಂದು ತುಮಕೂರು ಜಿಲ್ಲೆಯ ಸರ್ವೋದಯ ಕಾರ್ಯಕರ್ತರಿಗೆ, ಜನತೆಗೆ ತಿಳಿಸಿದರು. ಅದೇ ರೀತಿಯಾಗಿ ಪಾದಯಾತ್ರೆಯ ಎರಡನೆಯ ಸಭೆಯೂ ಹೆಬ್ಬೂರಿನಲ್ಲಿ ೨೬-೧೦-೧೯೫೭ ರಂದು ನಡೆಯಿತು. ಈ ಸಭೆಯಲ್ಲಿ ವಿನೋಭಾ ಭಾವೆಯವರು ಗ್ರಾಮ ಸೇವಕರ ಗುಣಗಳ ಬಗ್ಗೆ ತಿಳಿಸಿದರು. ಅನಂತರ ಮೂರನೆಯ ಸಭೆಯೂ ಗೂಳೂರಿನಲ್ಲಿ ೨೭-೧೦-೧೯೫೭ರಂದು ನಡೆಯಿತು. ಈ ಸಭೆಯಲ್ಲಿ ವಿನೋಬಾ ಭಾವೆಯವರು ಗ್ರಾಮದಾನ ಚಳುವಳಿ ಶುದ್ಧ ಜನ ಕ್ರಾಂತಿ ಎಂದು ತಿಳಿಸಿದರು.[೨೮] ಅನಂತರ ತುಮಕೂರಿನಲ್ಲಿ ೨೯-೧೦-೧೯೫೭ ರಂದು ನಡೆದ ಸಭೆಯಲ್ಲಿ ವಿನೋಭಾ ಭಾವೆಯವರು ಸರ್ವೋದಯ ಬಾವುಟ ವಿಶ್ವದಲ್ಲಿ ಹಾರಾಡಲಿ ಎಂದು ಮೆಚ್ಚಿಗೆ ವ್ಯಕ್ತ ಪಡಿಸಿದರು. ಅಲ್ಲದೆ ಸಂಪತ್ತನ್ನು ದಾನ ಮಾಡುವ ಜಯದೇವನೆಂಬ ಸರ್ವೋದಯ ಕಾರ್ಯಕರ್ತನನ್ನು ಪ್ರಶಂಸಿಸಿ ಹೊಗಳಿದರು.[೨೯] ವಿನೋಬಾ ಭಾವೆಯವರು ತುಮಕೂರಿನಲ್ಲಿ ಭೂದಾನ ಯಾತ್ರೆ ನಡೆಸುತ್ತಿರುವ ಸಂದರ್ಭದಲ್ಲಿ ಕೆ. ನಾರಾಯಣ ಶೆಟ್ಟರು ತುಮಕೂರಿನ ಮರಳೂರು ರಸ್ತೆಯಲ್ಲಿರುವ ತಮ್ಮ ಮೂರು ಎಕರೆ ಭೂಮಿಯನ್ನು ವಿನೋಬಾ ಭಾವೆಯವರಿಗೆ ದಾನವಾಗಿ ನೀಡಿದರು. ಆ ಭೂಮಿಯನ್ನು ವಿನೋಬಾ ಭಾವೆಯವರು ಅಂದಿನ ವಿದ್ಯಾ ಸಂಸ್ಥೆಯಾದ ಆರ್ಯನ್ ಹೈಸ್ಕೂಲ್‌ನವರಿಗೆ ಹಸ್ತಾಂತರಿಸಿದರು.[೩೦]

ವಿನೋಬಾ ಭಾವೆಯವರು ಜಿಲ್ಲೆಯಲ್ಲಿ ಭೂದಾನ ಯಾತ್ರೆ ಕೈಗೊಂಡು ಗೊಲ್ಲಹಳ್ಳಿಗೆ ಭೇಟಿ ನೀಡಿದರು. ಆಗ ಹೆಚ್.ಎಂ. ಗಂಗಾಧರಯ್ಯನವರ ಮನೆಯಲ್ಲಿ ಒಂದು ದಿನ ರಾತ್ರಿ

ವಿಶ್ರಾಂತಿ ತೆಗೆದುಕೊಂಡರು. ಆ ಸಂದರ್ಭದಲ್ಲಿ ವಿನೋಬಾ ಭಾವೆಯವರೊಂದಿಗೆ ಹೆಚ್.ಎಂ. ಗಂಗಾಧರಯ್ಯನವರು ಸಾಕಷ್ಟು ಸರ್ವೋದಯ ವಿಚಾರಗಳ ಬಗ್ಗೆ ಚರ್ಚಿಸಿದರು. ಆಗ ವಿನೋಬಾ ಭಾವೆಯವರು ಗಂಗಾಧರಯ್ಯನವರೊಂದಿಗೆ ಮಾತನಾಡುತ್ತಾ "may you be a staunch social worker and may this Gollahalli be a Shanthinikethan. Let your honesty be a becacon for your efforts" ಎಂದು ಆಶೀರ್ವದಿಸಿದರು.[೩೧] ಅನಂತರ ಜಿಲ್ಲೆಯಲ್ಲಿ ಭೂದಾನ ಯಾತ್ರೆಯನ್ನು ಮುಂದುವರಿಸಿದ ವಿನೋಬಾ ಭಾವೆಯವರು ೩-೧೧-೧೯೫೭ರಲ್ಲಿ ಮಾಯಸಂದ್ರದಲ್ಲಿ ನಡೆದ ಸಭೆಯಲ್ಲಿ ಸರ್ವೋದಯ ಶಿಕ್ಷಣ ಪದ್ಧತಿಯ ಬಗ್ಗೆ ಸಂದೇಶವನ್ನು ಸಾರಿದರು.

೧. ಸಾದು ಸಂತರ ಸಾಹಿತ್ಯವನ್ನು, ಸರ್ವೋದಯ ಸಾಹಿತ್ಯವನ್ನು ವಿದ್ಯಾರ್ಥಿಗಳಿಗೆ ಕಲಿಸಬೇಕು. ಆದರಲ್ಲಿ ಪರೀಕ್ಷೆ ನಡೆಸಬೇಕು.

೨. ಅಧ್ಯಾಪಕರುಗಳ ವೇತನ ಪದ್ಧತಿಯಲ್ಲಿ ಆವರವರ ಆವಶ್ಯಕತೆಗನುಸಾರವಾಗಿರದೆ, ಯೋಗ್ಯತೆಗೆ ತಕ್ಕಂತಿರಬೇಕು. ಇದಕ್ಕೆ ಬದಲಾಗಿ ಎಲ್ಲಾ ಅಧ್ಯಾಪಕರುಗಳು ತಮ್ಮ ವೇತನವನ್ನೆಲ್ಲಾ ಒಟ್ಟುಗೂಡಿಸಿ, ಉಪಾಧ್ಯಾಯರುಗಳ ಕುಟುಂಬಗಳ ಜನಸಂಖ್ಯೆ ಮತ್ತು ಅವಶ್ಯಕತೆಗಳಿಗನುಸಾರವಾಗಿ ಹಂಚಿಕೊಂಡರೆ ಅಧ್ಯಾಪಕರುಗಳ ಬಗ್ಗೆ ಸಮಾಜದಲ್ಲಿ ಗೌರವ ಭಾವನೆ ಹೆಚ್ಚುತ್ತದೆ.

೩. ನೂಲಲು ಬೇಕಾಗುವ ಸುಧಾರಿತ ರಾಟೆಗಳನ್ನು ಸ್ಕೂಲಿನಲ್ಲಿ ನಡೆಸಬೇಕು. ಅಧ್ಯಾಪಕರುಗಳು ತಮ್ಮ ಕುಟುಂಬ ಸಮೇತರಾಗಿ ಖಾದಿ ವಸ್ತ್ರ ಧರಿಸಿ ಸ್ವಾವಲಂಬಿಗಳಾಗಬೇಕು. ವಿದ್ಯಾರ್ಥಿಗಳನ್ನು ವಸ್ತ್ರ ಸ್ವಾವಲಂಬಿಗಳನ್ನಾಗಿ ಮಾಡಬೇಕು,[೩೨] ಎಂದು ವಿನೋಬಾ ಭಾವೆಯವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

ಸರ್ವೋದಯ ಕಾರ್ಯಕರ್ತರಾದ ಖಾದಿ ಗಂಗಪ್ಪನವರ ಸತತ ಪರಿಶ್ರಮ ಪ್ರಯತ್ನದ ಫಲವಾಗಿ ವಿನೋಬಾ ಭಾವೆಯವರು ಕರ್ನಾಟಕ ರಾಜ್ಯದ ಗಡಿನಾಡ ಪ್ರದೇಶವಾದ ಪಾವಗಡ ತಾಲ್ಲೂಕಿನ ರಂಗಸಮುದ್ರಕ್ಕೆ ಭೇಟಿ ನೀಡಿದರು. ಆ ಸಮಯದಲ್ಲಿ ಭೂದಾನ ಚಳುವಳಿಯ ಸಕ್ರಿಯ ಕಾರ್ಯಕರ್ತರಲ್ಲೊಬ್ಬರಾದ ಸೆಟ್ಲೂರು ಕೃಷ್ಣಮೂರ್ತಿಯವರು ೩೫೨ ಎಕರೆ ಜಮೀನನ್ನು ಭೂದಾನಕ್ಕೆ ಉದಾರವಾಗಿ ನೀಡಿದರು.[೩೩] ಇವರು ದಾನ ನೀಡಿದ ಜಮೀನನ್ನು ಹಂಚಲು ಸರ್ವೋದಯ ಕಾರ್ಯಕರ್ತರಾದ ಹೆಚ್.ಎಸ್. ದೊರೆಸ್ವಾಮಿ, ಸತ್ಯವ್ರತರವರು ಒಬ್ಬ ನಿವೃತ್ತ ಮೋಜಿದಾರನನ್ನು ಕರೆದುಕೊಂಡು ರಂಗಸಮುದ್ರಕ್ಕೆ ಬಂದರು. ಅನಂತರ ಊರಿನಲ್ಲಿರುವ ಹರಿಜನ ಮತ್ತು ಅಲ್ಪ ಸಂಖ್ಯಾತ ಮನೆಗಳಿಗೆ ಭೇಟಿ ನೀಡಿ ಭೂ

ಹೀನರ ಪಟ್ಟಿ ತಯಾರಿಸಿದರು. ಊರಿನ ಹಿರಿಯರ ಅಧ್ಯಕ್ಷತೆಯಲ್ಲಿ ಒಂದು ಸಭೆ ನಡೆಸಿ ಈ ಸಮಾರಂಭದಲ್ಲಿ ೫೭ ಭೂ ರಹಿತ ಕುಟುಂಬಗಳಿಗೆ ಜಮೀನಿನ ಹಕ್ಕು ಪತ್ರ ಮತ್ತು ಪಟ್ಟಗಳನ್ನು ವಿತರಿಸಲಾಯಿತು.[೩೪]

ಸರ್ವೋದಯ ಕಾರ್ಯಕರ್ತರಾದ ಮಧುಗಿರಿ ತಾಲ್ಲೂಕಿನ ಎಂ. ಪುಟ್ಟತಿಮ್ಮಯ್ಯನವರು ಗಾಂಧಿ, ವಿನೋಬಾ ಭಾವೆಯವರ ಸರ್ವೋದಯ ತತ್ವಗಳನ್ನು ಅಧ್ಯಯನ ಮಾಡಿದ ನಂತರ ೧೯೫೭ ರಲ್ಲಿ ತಮ್ಮ ಪತ್ನಿ ಕೃಪಾ ಹಾಗೂ ಸೋದರಿ ಪಾಪಮ್ಮನವರೊಂದಿಗೆ ಜಿಲ್ಲೆಯ ತಾಲ್ಲೂಕಿನ ಕೇಂದ್ರವಾದ ಪಾವಗಡದ ಅಕ್ಕಪಕ್ಕದ ಹಳ್ಳಿಗಳಲ್ಲಿ ಸರ್ವೋದಯ ಚಳುವಳಿಯ ಅಂಗವಾಗಿ ಭೂದಾನ ಯಾತ್ರೆಯನ್ನು ಕೈಗೊಂಡಿದ್ದರು. ಈ ಸಮಯದಲ್ಲಿ ಗಾಂಧೀಜಿಯವರ ತತ್ವಗಳಾದ ಸತ್ಯ, ಅಹಿಂಸೆಯ ಬಗ್ಗೆ ಪ್ರಚಾರ ಮಾಡಿದರು. ಇವರು ವಿನೋಬಾ ಭಾವೆಯವರ ಬಗ್ಗೆ ಹೇಳುತ್ತಾ ಬದುಕಿಗೆ ಬದುಕು ಅಲ್ಲ, ಲೋಕೋದ್ಧಾರಕ್ಕಾಗಿ ಬದುಕು ಎಂಬುದು ಅವರ ಬದುಕಿನ ರಹಸ್ಯವಾಗಿತ್ತು[೩೫] ಎಂದು ಪಾವಗಡ ತಾಲ್ಲೂಕಿನ ಜನತೆಗೆ ತಿಳಿಸಿದರು. ಅನಂತರ ೧೯೫೭ ರಲ್ಲಿ ಎಂ. ಪುಟ್ಟ ತಿಮ್ಮಯ್ಯನವರನ್ನು ಸರ್ವೋದಯ ಸಂಚಾಲಕರನ್ನಾಗಿ ವಿನೋಬಾ ಭಾವೆಯವರು ನೇಮಿಸಿದರು. ಈ ಸಮಯದಲ್ಲಿ ಇವರು ಶ್ರಮ ಜೀವನಕ್ಕೆ, ಜಾತ್ಯಾತೀತತೆ, ಶೋಷಣೆ ರಹಿತ ಸಮಾಜಕ್ಕೆ ಹೆಚ್ಚಿನ ಗಮನ ನೀಡಿ ಹೋರಾಡಿದರು. ಎಲ್ಲರ ಉಳಿವಿನಲ್ಲಿ ನನ್ನ ಉಳಿವು, ನನ್ನ ಉಳಿವಿನಲ್ಲಿ ಎಲ್ಲರ ಉಳಿವು ಎಂಬ ಸರ್ವೋದಯ ತತ್ವವನ್ನು ಜನತೆಯಲ್ಲಿ ಪ್ರಚಾರ ನಡೆಸಿದರು.[೩೬] ಎಂ. ಪುಟ್ಟತಿಮ್ಮಯ್ಯನವರು ಗ್ರಾಮೀಣ ಅಭಿವೃದ್ಧಿಯ ಅಂಗವಾಗಿ Collective Forming Society ಯ ಮೂಲಕ ಮಧುಗಿರಿ ತಾಲ್ಲೂಕಿನ ದೊಡ್ಡೇರಿ ಹೋಬಳಿಯಲ್ಲಿ ಸ್ಥಾಪಿಸಿರುವ ಇಂದೀರಾ ಗ್ರಾಮವು ಒಂದು ಅತ್ಯುತ್ತಮ ಸರ್ವೋದಯ ತತ್ವಕ್ಕೆ ನಿದರ್ಶನವಾಗಿದೆ. ಇದೇ ರೀತಿಯಾಗಿ ಮಧುಗಿರಿಯಲ್ಲಿ ಸಹಪಾಠಿಗಳಾದ ಖಾದಿಗಂಗಪ್ಪ, ಸಿದ್ದನಂಜಪ್ಪ, ಮಲ್ಲಯ್ಯನವರ ಸಹಕಾರದಿಂದ ಸರ್ವೋದಯ ಹಾಸ್ಟೇಲ್‌ನ್ನು ಪ್ರಾರಂಭಿಸಿದರು.[೩೭]

ತಿಪಟೂರು ತಾಲ್ಲೂಕಿನ ಟಿ.ಎ. ದಾಸಪ್ಪನವರು ಸರ್ವೋದಯ ತತ್ವಗಳಲ್ಲಿ ನಂಬಿಕೆ ಯಿಟ್ಟಿದ್ದರು. ಸರ್ವೋದಯ ಕಾರ್ಯಕ್ರಮದ ಅಂಗವಾಗಿ ಇವರು ಅನೇಕ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದರು.

೧. ಗಾಂಧೀ ವಿದ್ಯಾಪೀಠ ಪ್ರೌಢಶಾಲೆ – ೧೯೭೧

೨. ಸರ್ವೋದಯ ಪ್ರೌಢಶಾಲೆ ತಿಪಟೂರು – ೧೯೭೫–೭೬

೩. ಸರ್ವೋದಯ ಪ್ರಾಥಮಿಕ ಶಾಲೆ, ತಿಪಟೂರು – ೧೯೭೫–೭೬

೪. ಸರ್ವೋದಯ ವೃತ್ತಿ ಶಿಕ್ಷಣ ಶಾಲೆ, ತಿಪಟೂರು – ೧೯೮೨

೪. ಸರ್ವೋದಯ ಪದವಿ ಪೂರ್ವ ಕಾಲೇಜು, ತಿಪಟೂರು – ೧೯೮೪

ಈ ರೀತಿಯಾಗಿ ಸರ್ವೋದಯ ತತ್ವಗಳನ್ನು ಕಾರ್ಯತಃ ಹಮ್ಮಿಕೊಳ್ಳಲು ಟಿ.ಎ. ದಾಸಪ್ಪನವರು ಶ್ರಮಿಸಿದರು.[೩೮] ಇವರಂತೆಯೇ ತುಮಕೂರು ಜಿಲ್ಲೆಯ ಕ್ಯಾತ್ಸಂದ್ರದ ಕೆ.ಎಸ್. ರಾಜಪ್ಪನವರು, ಸರ್ವೋದಯ ಚಿಂತಕರಾದ ವಿನೋಬಾ ಭಾವೆ, ಜೆ.ಬಿ. ಕೃಪಲಾನಿ, ಜಯಪ್ರಕಾಶ ನಾರಾಯಣ್, ಹೆಚ್.ಎಸ್. ದೊರೆಸ್ವಾಮಿ, ಬೆಳಗುಂಬ ನಾರಾಯಣಪ್ಪನವರ ಮಾರ್ಗದರ್ಶನದಲ್ಲಿ ಸರ್ವೋದಯ ಕಾರ್ಯಕರ್ತರಾಗಿ ೪೫ ವರ್ಷಗಳ ಸುದೀರ್ಘ ಸೇವೆ ಸಲ್ಲಿಸಿದ್ದಾರೆ.[೩೯] ಇವರು ಗಾಂಧೀಜಿಯವರ ೧೨೫ ಜನ್ಮ ದಿನಾಚರಣೆ ಮತ್ತು ವಿನೋಬಾ ಭಾವೆಯವರ ೧೦೦ ವರ್ಷಗಳ ಜನ್ಮದಿನಾಚರಣೆಯ ಅಂಗವಾಗಿ ಸರ್ವೋದಯ ಚಳುವಳಿಯ ಕಾರ್ಯಕರ್ತರಾದ ಪಿ. ವೆಂಕೋಬರಾವ್, ಎನ್.ಆರ್. ಮಠದ, ಡಿ.ಎಸ್. ಸಂಪತ್ ರವರು ತುಮಕೂರು, ಬೆಂಗಳೂರು ನಗರ, ಗ್ರಾಮಾಂತರ, ಕೋಲಾರ, ಮಂಡ್ಯ ಜಿಲ್ಲೆಗಳಲ್ಲಿ ೧೨೫ ಶಾಲಾ ಕಾಲೇಜು ಶಿಕ್ಷಣ ಸಂಸ್ಥೆಗಳಿಗೆ ಭೇಟಿ ನೀಡಿ ಸರ್ವೋದಯ ತತ್ವಗಳನ್ನು, ಗಾಂಧೀಜಿಯವರ ವಿಚಾರಗಳನ್ನು ವಿದ್ಯಾರ್ಥಿಗಳಿಗೆ ಪ್ರಚಾರ ಮಾಡಿದರು.[೪೦]

## ಪಶುಸಂಗೋಪನೆ ಮತ್ತು ಗೋಹತ್ಯೆ–ನಿಷೇಧ

ಭಾರತದ ರೈತರ ಆರ್ಥಿಕಾಭಿವೃದ್ಧಿಯಲ್ಲಿ ಒಟ್ಟಾರೆ ಗ್ರಾಮೀಣಾಭಿವೃದ್ಧಿಯಲ್ಲಿ ಪಶು ಸಂಗೋಪನೆಯ ಪ್ರಾಮುಖ್ಯತೆಯನ್ನು ಗಾಂಧೀಜಿ ಬಹಳ ಚೆನ್ನಾಗಿಯೇ ಗುರುತಿಸಿದ್ದಾರೆ. ಗ್ರಾಮೀಣ ಭಾಗದ ಬಹುಸಂಖ್ಯೆಯ ಜನರು ವ್ಯವಸಾಯದಲ್ಲಿ ನಿರತಾಗಿದ್ದಾರೆ. ಉಳಲು ದನಕರುಗಳನ್ನು ಉಪಯೋಗಿಸುತ್ತಾರೆ. ವ್ಯವಸಾಯ ಎಷ್ಟು ಮುಖ್ಯವೋ ಪಶುಸಂಗೋಪನೆಯೂ ಅಷ್ಟೆ ಮುಖ್ಯ. ಪಶುಸಂಪತ್ತನ್ನು ಮುಕ್ತವಾಗಿ ರಕ್ಷಿಸದೆ ಮತ್ತು ಅದರ ಪ್ರಯೋಜನವನ್ನು ಪಡೆಯದೇ ಇದ್ದರೆ ಗ್ರಾಮೀಣರ ಬದುಕು ಅಧೋಗತಿಗೆ ಇಳಿಯುತ್ತದೆ. ಅವರ ಸ್ಥಿತಿಗತಿಗಳನ್ನು ಸುಧಾರಿಸಲು ಕಷ್ಟವಾಗುತ್ತದೆ. ಇದನ್ನು ಆಡಳಿತಗಾರರು ಅರಿಯಬೇಕು ಎಂದು ಗಾಂಧೀಜಿ ಆಶಿಸಿದರು.

ಗೋಹತ್ಯೆಯನ್ನು ಗಾಂಧೀಜಿ ಸ್ಪಷ್ಟವಾಗಿ ವಿರೋಧಿಸಿದರು. ಅದು ಎಷ್ಟೇ ಅಮೂಲ್ಯ ವಾಗಿರಲಿ. ಒಂದು ಹಸುವನ್ನು ರಕ್ಷಿಸಲು ಒಬ್ಬ ಮನುಷ್ಯನನ್ನು ಕೊಲ್ಲಲಾರೆ. ಅದೇ ರೀತಿ ಒಬ್ಬ ಮನುಷ್ಯನನ್ನು ರಕ್ಷಿಸಲು ಒಂದು ಹಸುವನ್ನು ಕೊಲ್ಲಲಾರೆ ಎಂದು ಗಾಂಧೀಜಿ ಹೇಳಿದ್ದಾರೆ. ಗೋರಕ್ಷಣೆಯು ರಾಷ್ಟ್ರದ ಗ್ರಾಮೀಣ ಪ್ರದೇಶದ ಅಭಿವೃದ್ಧಿಯಲ್ಲಿ ಬಹಳ ಮುಖ್ಯ ಪಾತ್ರವಹಿಸುವುದರಿಂದ ಜನರು ಇದರ ಮಹತ್ವವನ್ನು ಅರಿಯಬೇಕೆಂದು ಗಾಂಧೀಜಿ ಬಯಸಿದರು. ದನಕರುಗಳು ಮಾನವ ಜನಾಂಗಕ್ಕೆ ಪೌಷ್ಟಿಕವಾದ ಹಾಲು ಮತ್ತು ಕೃಷಿಗೆ ಬೇಕಾದ ಗೊಬ್ಬರ

ನೀಡುವಲ್ಲಿ ಉಪಯೋಗಕಾರಿ ಎಂಬುದನ್ನು ತೋರಿಸುತ್ತದೆ. ಆದುದರಿಂದ ಗೋರಕ್ಷಣೆಗೆ ಎಲ್ಲರೂ ಮುಂದಾಗಬೇಕು ಎಂದು ತಿಳಿಸಿ ಗೋ – ರಕ್ಷಣೆಯೂ ಹಿಂದೂ ಧರ್ಮವು ಜಗತ್ತಿಗೆ ನೀಡಿರುವ ಶ್ರೇಷ್ಠವಾದ ಕೊಡುಗೆ ಎಂದು ಬಣ್ಣಿಸಿದ್ದರೆ. ಗೋ–ಮಾತೆಯು ಹೆತ್ತ ತಾಯಿಗಿಂತಲೂ ಅನೇಕ ದೃಷ್ಟಿಯಿಂದ ಹೆಚ್ಚು ಎಂದೂ ಗಾಂಧೀಜಿ ಪ್ರತಿಪಾದನೆ ಮಾಡಿದ್ದಾರೆ. ಏಕೆಂದರೆ ಹೆತ್ತ ತಾಯಿಯು ನಮಗೆ ಕೆಲವು ವರ್ಷ ಹಾಲು ನೀಡುತ್ತಾಳೆ. ನಾವು ಬೆಳೆದ ಮೇಲೆ ನಮ್ಮಿಂದ ಸೇವೆಯನ್ನು ಬಯಸುತ್ತಾಳೆ. ಆದರೆ ಗೋಮಾತೆಯು ನಮ್ಮಿಂದ ಏನನ್ನು ನಿರೀಕ್ಷಿಸುತ್ತಾಳೆ ಎಂದರೆ ಹುಲ್ಲು ಮತ್ತು ಬೂಸಾವನ್ನು, ಇಲ್ಲಿ ಗಾಂಧೀಜಿ ಗೋಮಾತೆಯನ್ನು ಹೆತ್ತ ತಾಯಿಯಷ್ಟೇ ಪೂಜ್ಯ ಭಾವನೆಯಿಂದ ನೋಡುತ್ತಾರೆ ಎಂಬುದನ್ನು ನಾವು ಅರಿಯಬೇಕು."[೧]

ಗೋಹತ್ಯೆಯು ಪಂಚಮಹಾಪಾತಕಗಳಲ್ಲಿ ಒಂದು. ಗೋ–ಸಂರಕ್ಷಣಾ ಕಾರ್ಯವನ್ನು ಗಾಂಧೀಜಿಯವರು ತಮ್ಮ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಸೇರಿಸಿ, ಗೋ–ರಕ್ಷಣೆ ಮಾಡಲು ಜನತೆಗೆ ಕರೆ ನೀಡಿದರು. ಗೋ–ಸಂರಕ್ಷಣೆ ಮಾಡುವುದು ಪ್ರತಿಯೊಂದು ಹಿಂದುವಿನ ಕರ್ತವ್ಯ. ಗೋ–ರಕ್ಷಣೆ ಮಾಡದವನು ಹಿಂದೂವೇ ಅಲ್ಲ, ನರವಧೆಯೂ ಒಂದೇ, ಗೋ ವಧೆಯೂ ಒಂದೇ, ಇವುಗಳನ್ನು ನಿಲ್ಲಿಸಲು ಅಹಿಂಸಾ ಮಾರ್ಗ ಒಂದೇ ದಾರಿ, ಇದು ಕಾನೂನುನಿಂದ ಆಗುವ ಕೆಲಸವಲ್ಲ, ಪ್ರತಿಯೊಬ್ಬ ಮಾನವನ ಪ್ರೇಮದಿಂದಾಗುವ ಕೆಲಸ ಎಂದು ಗಾಂಧೀಜಿಯವರು ತಮ್ಮ 'ಯಂಗ್ ಇಂಡಿಯಾ' ಪತ್ರಿಕೆಯಲ್ಲಿ ಬರೆದಿದ್ದಾರೆ.

೧೯೨೪ರ ಬೆಳಗಾಂ ಕಾಂಗ್ರೆಸ್ ಅಧಿವೇಶನದಲ್ಲಿ ಗಾಂಧೀಜಿಯವರು ಗೋ–ಸಂರಕ್ಷಣೆಯು ಸ್ವರಾಜ್ಯ ಪ್ರಶ್ನೆಗಿಂತಲೂ ಕಡಿಮೆ ಮಹತ್ವದಲ್ಲ, ಆದಕ್ಕಿಂತ ಹೆಚ್ಚು ಆಶ್ಪೃಶ್ಯತೆಯನ್ನು ಹೋಗಲಾಡಿಸುವವರೆವಿಗೂ ಹಿಂದೂ–ಮುಸ್ಲಿಮ್ ಐಕ್ಯ ಹೇಗೆ ಸಾಧ್ಯವಿಲ್ಲವೋ, ಹಾಗೆಯೇ ಗೋ–ಸಂರಕ್ಷಣೆಯ ನೀತಿ ನಮಗೆ ತಿಳಿಯುವವರೆವಿಗೂ ಸ್ವರಾಜ್ಯ ಬಂದರೂ ಪ್ರಯೋಜನವಿಲ್ಲ ಎಂಬ ಮಾತನ್ನು ಹೇಳುವುದರ ಮೂಲಕ ಗೋ–ಸಂರಕ್ಷಣೆಯ ಕಾರ್ಯದ ಮಹತ್ವವನ್ನು ಎತ್ತಿ ಹಿಡಿದರು. ಈ ಮಾತುಗಳಿಂದ ಸ್ಫೂರ್ತಿಗೊಂಡ ಕರ್ನಾಟಕದ ಜನತೆ ಗೋ–ಸಂರಕ್ಷಣಾ ಕಾರ್ಯದಲ್ಲಿ ನಿರತರಾದರು. ಈ ಅಧಿವೇಶನದಲ್ಲಿ ಭಾಗವಹಿಸಿದ ತುಮಕೂರು ಜಿಲ್ಲೆಯ ಹಿರಿಯ ಕಾಂಗ್ರೆಸ್ ಮುಖಂಡರುಗಳಾದ ಕೆ. ರಂಗೈಯ್ಯಾಂಗಾರ್, ತಾಳೆಕೆರೆ ಸುಬ್ರಮಣ್ಯಂ ರವರು ಗಾಂಧೀಜಿಯವರ ಗೋ–ಹತ್ಯೆಯ ನಿಷೆಧದ ಭಾಷಣದಿಂದ ಪ್ರಬಾವಿತರಾಗಿದ್ದರು. ಇದರಿಂದಾಗಿ ತುಮಕೂರಿನ ಕೋಡಿಬಸವೇಶ್ವರ ದೇವಸ್ಥಾನದ ಮುಂದೆ ಒಂದು ಗೋ–ಹತ್ಯೆ ಮಾಡುವ ಒಂದು ಕಾಸಾಯಿಖಾನೆ ಇತ್ತು. ಇಲ್ಲಿನ ಪ್ರಾಣಿವಧೆ ಹಾಗೂ ಗೋ–ಹತ್ಯೆಯನ್ನು ನಿಲ್ಲಿಸಲು ಕೆ. ರಂಗೈಯ್ಯಾಂಗಾರ್, ತಾಳೆಕೆರೆ ಸುಬ್ರಹ್ಮಣ್ಯಂ, ಡಿ.ಎಸ್.ಶಾಮರಾಜಪ್ಪನವರು

ಜಿಲ್ಲಾಧಿಕಾರಿಗಳಿಗೆ ಮನವಿಯನ್ನು ಸಲ್ಲಿಸುವುದರ[೪೨] ಮೂಲಕ ಗೋ-ಸಂರಕ್ಷಣಾ ಕಾರ್ಯವನ್ನು ಜಿಲ್ಲೆಯಲ್ಲಿ ಆರಂಭ ಮಾಡಿದರು.

ತುಮಕೂರಿನ ದೊಡ್ಡಬೆಲೆಯ ಡಿ.ಎಸ್. ಶಾಮರಾಜಪ್ಪನವರು ಅಹಿಂಸಾ ಧರ್ಮ ಪ್ರಧಾನವಾದ ಜೈನಧರ್ಮದಲ್ಲಿ ಹುಟ್ಟಿದ್ದರಿಂದ ದೇವರ ಹೆಸರಿನಲ್ಲಿ ಬಲಿಯಾಗುತ್ತಿದ್ದ ಪ್ರಾಣಿಗಳ ಹಾಗೂ ಪ್ರತಿದಿನ ಕಾಸಾಯಿಖಾನೆಗೆ ಎಳೆದೊಯ್ಯುತ್ತಿದ್ದ ಗೊವುಗಳ ರಕ್ಷಣೆಗಾಗಿ ೧೯೨೬ ರಲ್ಲಿ ಪ್ರಾಣಿದಯಾ ಪ್ರಚಾರಕ ಸಂಘವನ್ನು ತುಮಕೂರಿನಲ್ಲಿ ಸ್ಥಾಪಿಸಿದರು. ಇವರು "ದಿ ಆರ್ಡರ್ ದಿ ಗೋಲ್ಡ್ ಏಜ್" ಸಂಸ್ಥೆಯಿಂದ ಪ್ರಕಟಸಲ್ಪಡುತ್ತಿದ್ದ ಇಂಗ್ಲೀಷಿನ ಕಿರು ಹೊತ್ತಿಗೆಯಲ್ಲಿನ ಗೋ-ಸಂರಕ್ಷಣಾ ಕಾರ್ಯಕ್ಕೆ ಸಂಬಂಧಪಟ್ಟ ಲೇಖನಗಳನ್ನು ಕನ್ನಡಕ್ಕೆ ಅನುವಾದಿಸುತ್ತಿದ್ದರು. ಇದು ದೇಶ ವಿದೇಶಿಯ ವಿದ್ವಾಂಸರು ಮಾಂಸಹಾರದ ಬಗ್ಗೆ ಹೇಳಿರುವ ಅಭಿಪ್ರಾಯಗಳನ್ನು ಒಳಗೊಂಡಿರುವ ಭೋಧಪ್ರದ ಹೊತ್ತಿಗೆಯಾಗಿದ್ದು ಜಿಲ್ಲೆಯಲ್ಲಿ ಗೋ-ಸಂರಕ್ಷಣೆಗೆ ಪ್ರೋತ್ಸಾಹ ನೀಡಿತು.[೪೩]

೧೯೨೭ ರಲ್ಲಿ ಗಾಂಧೀಜಿಯವರು ಖಾದಿ ಪ್ರಚಾರಕ್ಕಾಗಿ ಮೈಸೂರು ಸಂಸ್ಥಾನದಾದ್ಯಂತ ಪ್ರವಾಸ ಕೈಗೊಂಡು ಜುಲೈ ೧೪ರಂದು ತುಮಕೂರಿಗೆ ಭೇಟಿ ನೀಡಿದರು. ಅಂದು ತುಮಕೂರಿನಲ್ಲಿ ಮೂರು ಸಭೆಗಳಾದವು. ತುಮಕೂರಿನ ಪೌರಸಭೆಯು ಒಂದು ಭಿನ್ನವತ್ತಳೆ ಕೊಟ್ಟಿತು. ಇದಕ್ಕೆ ಉತ್ತರವಾಗಿ ಗಾಂಧೀಜಿಯವರು ಪುರಸಭೆಯ ಪ್ರತಿನಿಧಿಗಳಿಗೆ ಶುದ್ಧವಾದ ನೀರನ್ನು ಒದಗಿಸಿದರೆ ಸಾಲದು, ನೀರಿನಷ್ಟೇ ಸುಲಭವಾಗಿ ಜನರಿಗೆ ಹಾಲು ಸಿಗಬೇಕಾದರೆ ಊರಿಗೊಂದು ಗೋಶಾಲೆಯನ್ನು ನಡೆಸಬೇಕು ಮತ್ತು ಗೋ-ಮಾಂಸ ಭಕ್ಷಿಸುವುದನ್ನು ನಿಲ್ಲಿಸಬೇಕೆಂದು ಜನತೆಯನ್ನು ಕುರಿತು ಮಾತನಾಡಿದರು. ಈ ವೇಳೆಗಾಗಲೇ ಗೋ-ಸಂರಕ್ಷಣೆಗಾಗಿ ಸ್ಥಾಪಿಸಿದ್ದ ತುಮಕೂರಿನ ಪ್ರಾಣಿದಯಾ ಪ್ರಚಾರಕ ಸಂಘವು ಎರಡು ನೂರು ರೂಪಾಯಿಗಳ ನಿಧಿಯನ್ನು ಗಾಂಧೀಜಿಯವರಿಗೆ ಅರ್ಪಿಸಿತು. ಆ ಸಂದರ್ಭದಲ್ಲಿ ಬಹಳ ಕಡಿಮೆ ವೆಚ್ಚದಲ್ಲಿ ತುಮಕೂರಿನಲ್ಲಿ ಒಂದು ಕ್ಷೀರ ಕೇಂದ್ರವನ್ನು ಸ್ಥಾಪಿಸಬೇಕೆಂದು ಸಲಹೆ ನೀಡಿದರು.[೪೪] ಗಾಂಧೀಜಿಯವರು ತುಮಕೂರಿಗೆ ಭೇಟಿ ನೀಡಿದ ನಂತರ ಜಿಲ್ಲೆಯಲ್ಲಿ ಗೋ-ಸಂರಕ್ಷಣಾ ಕಾರ್ಯಕ್ಕೆ ಹೆಚ್ಚಿನ ಜನ ಸ್ಪಂದಿಸಿದರು.

ಗಾಂಧೀಜಿಯವರು ತುಮಕೂರಿಗೆ ಭೇಟಿ ನೀಡಿದಾಗ ಆದಿ ಕರ್ನಾಟಕ ಔದ್ಯೋಗಿಕ ಮತ್ತು ವಸತಿ ಶಿಕ್ಷಣ ಶಾಲೆಗೆ ಭೇಟಿ ನೀಡಿದರು. ಆಗ ಅಲ್ಲಿ ಅವರು ಹರಿಜನರು ಗೋ-ಮಾಂಸವನ್ನು ಭಕ್ಷಿಸುವುದನ್ನು ಬಿಡಬೇಕೆಂದು ತಿಳಿಸಿದರು. ಇವರ ಮಾತುಗಳಿಂದ ಪ್ರಭಾವಿತರಾದ ಹೆಚ್.ಎಂ. ಗಂಗಾಧರಯ್ಯನವರು ಗೋ-ಮಾಂಸ ತಿನ್ನುವುದನ್ನು ಬಿಟ್ಟು ಗೋ-ಸಂರಕ್ಷಣಾ

ಕಾರ್ಯದಲ್ಲಿ ತೊಡಗಿದರು.[೪೫] ಇವರು ಕೋಡ್ಲಾ ಸಂಸ್ಥಾನದ ಪೀಠಾಧಿಕಾರಿಯಾದ ಶಿವಯೋಗಿ ಸ್ವಾಮಿಗಳವರೊಂದಿಗೆ ಮಂಡ್ಯ, ಮೈಸೂರು, ತುಮಕೂರು ಜಿಲ್ಲೆಗಳಲ್ಲಿನ ಹರಿಜನರ ಕಾಲೋನಿಗಳಿಗೆ ಭೇಟಿ ನೀಡಿ ಗೋ-ಮಾಂಸ ತಿನ್ನುವುದನ್ನು ಕೈಬಿಡುವಂತೆ ತಿಳುವಳಿಕೆ ಮೂಡಿಸಲು ಪ್ರಯತ್ನಿಸಿದರು.[೪೬] ಈ ರೀತಿ ಗಾಂಧೀಜಿಯವರ ಗೋ-ಹತ್ಯೆ ನಿಷೇಧ ಕಾರ್ಯವನ್ನು ಜಿಲ್ಲೆಯಲ್ಲಿ ಪ್ರಚಾರ ಮಾಡಿದರು. ೧೯೩೦ರ ದಶಕದಲ್ಲಿ ತುಮಕೂರಿನ ಕಡೆಯಿಂದ ಒಬ್ಬ ಕುಡುಕನು ನೂರಾರು ಗೋವುಗಳನ್ನು ಹಗ್ಗಗಳಿಂದ ತೆಕ್ಕೆಹಾಕಿ ಕಸಾಯಿಖಾನೆಗೆ ತೆಗೆದುಕೊಂಡು ಹೋಗುತ್ತಿದ್ದ ದೃಶ್ಯವನ್ನು ಕಂಡ ಗಾಂಧೀವಾದಿ, ಸ್ವಾತಂತ್ರ್ಯ ಹೋರಾಟಗಾರರಾದ ಕ್ಯಾತ್ಸಂದ್ರದ ಕೆ.ಎಸ್.ರಾಜಪ್ಪನವರು ಗೋವುಗಳ ಹತ್ಯೆಯನ್ನು ತಪ್ಪಿಸಲು ಹರಿತವಾದ ಕುಡುಗೋಲನ್ನು ತೆಗೆದುಕೊಂಡು ಗೋವುಗಳ ತೆಕ್ಕೆ ಮತ್ತು ಮೂಗು ದಾರಗಳನ್ನು ಕೊಯ್ದು ಹಾಕಿದರು. ಇದರಿಂದಾಗಿ ಎಲ್ಲಾ ಹಸುಗಳು ಚೆಲ್ಲಾಪಿಲ್ಲಿಯಾಗಿ ಓಡಿ ಹೋದವು.[೪೭] ಈ ರೀತಿ ಕೆ.ಎಸ್. ರಾಜಪ್ಪನವರು ಗಾಂಧೀಜಿಯವರ ಗೋ-ಹತ್ಯೆ ನಿಷೇಧ ಕಾರ್ಯವನ್ನು ಯಶಸ್ವಿಗೊಳಿಸಲು ಪ್ರಯತ್ನಿಸಿದರು.

ಟಿ. ಜಿ. ಗುಬ್ಬಿ ಹುಚ್ಚಪ್ಪನವರು ತುಮಕೂರಿನ ಪ್ರಾಣಿ ದಯಾ ಪ್ರಚಾರಕ ಸಂಘದ ಖಜಾಂಚಿಗಳಾದ ಮೇಲೆ ಮೂಕ ಪ್ರಾಣಿಗಳ ಪುಣ್ಯವೇ ಸರಿ ಎಂದು ಗೋ-ಸಂರಕ್ಷಣಾ ಕಾರ್ಯದಲ್ಲಿ ತೊಡಗಿದರು. ಇವರು ಗೋಹತ್ಯೆ ನಿಷೇಧಕ್ಕೆ ಮುಸ್ಲಿಮ್ ಸೋದರರ ಮನವೊಲಿಸುವಲ್ಲಿ ಜಿಲ್ಲೆಯಾದ್ಯಂತ ಬಹಳ ಶ್ರಮವಹಿಸಿ ಕೆಲಸ ನಿರ್ವಹಿಸಿದರು. ಇವರು ಹೆಚ್ಚಾಗಿ ಗೋಹತ್ಯೆ ನಡೆಸುತ್ತಿದ್ದ ಹರಿಜನರ ಕಾಲೋನಿಗಳಿಗೆ ಭೇಟಿ ನೀಡಿ, ಪ್ರಾಚೀನ ಕಾಲದಿಂದಲೂ ಗೋವು ಹಿಂದುಗಳಿಗೆ ಪವಿತ್ರ ಪೂಜ್ಯನೀಯವಾದುದರಿಂದ ಗೋ-ಮಾಂಸವನ್ನು ತಿನ್ನುವುದನ್ನು ಬಿಟ್ಟು, ಗೋ-ಸಂರಕ್ಷಣೆಯನ್ನು ಮಾಡುವುದು ನಿಮ್ಮ ಕರ್ತವ್ಯ ಎಂದು ಹರಿಜನರನ್ನು ಕುರಿತು ಪರಿಪರಿಯಿಂದ ಮನವಿ ಮಾಡಿಕೊಳ್ಳುತ್ತಿದ್ದರು. ಕೆಲವೊಮ್ಮೆ ಅವರಿಂದ ಪ್ರತಿಜ್ಞೆಯನ್ನು ಸಹಾ ಮಾಡಿಸುತ್ತಿದ್ದರು. ಇವರು ಜಿಲ್ಲೆಯ ಕ್ಯಾತ್ಸಂದ್ರ, ಹೆಬ್ಬೂರು, ತಿಪಟೂರು, ಮಧುಗಿರಿ, ಶಿರಾ, ಕಡಬಾ, ಬೆಳ್ಳಾವಿ, ಕೊರಟಗೆರೆ, ಕುಣಿಗಲ್ಲುಗಳಲ್ಲಿ ನಡೆಯುತ್ತಿದ್ದ ಗೋ-ಹತ್ಯೆಯಂತಹ ಘೋರ ಕೃತ್ಯಗಳನ್ನು ನಿಲ್ಲಿಸುವಂತಹ ಪ್ರಯತ್ನವನ್ನು ಕೈಗೊಂಡರು.[೪೮] ಇವರು ಗೋ-ಹತ್ಯೆ ನಿಷೇಧ ಕಾರ್ಯಕ್ಕೆ ಸಲ್ಲಿಸಿದ ಸೇವೆಯನ್ನು ಪರಿಗಣಿಸಿ ತುಮಕೂರಿನ ಧಾನ್ಯ ವರ್ತಕರ ಸಂಘದವರು ೧೯೩೨ರಲ್ಲಿ ಪ್ರಶಂಸಿಸಿ ಭಿನ್ನವತ್ತಲೆಯನ್ನು ಅರ್ಪಿಸಿದರು. ಇದೇ ರೀತಿಯಾಗಿ ಇವರ ಗೋ-ಹತ್ಯೆ ನಿಷೇಧ ಸೇವಾ ಕಾರ್ಯವನ್ನು ಮೆಚ್ಚಿ ಅಂದಿನ ಮೈಸೂರಿನ ಮಹಾಪ್ರಭುಗಳಾದ ಜಯಚಾಮರಾಜೇಂದ್ರ ಒಡೆಯರ್‌ರವರು ಪ್ರಥಮ ದರ್ಜೆಯ ಸಾರ್ವಜನಿಕ ಸೇವಾ ಪದಕವನ್ನು ನೀಡಿ ಗೌರವಿಸಿದರು.[೪೯]

ತುಮಕೂರು ಜಿಲ್ಲೆಯ ತುರುವೇಕೆರೆ ತಾಲ್ಲೂಕಿನ ಬಾಣಸಂದ್ರದ ಗಾಂಧೀಜಿಯವರ ಅನುಯಾಯಿಯಾದ ಹುಚ್ಚೇಗೌಡರು ಗೋ-ಸಂರಕ್ಷಣಾ ಕಾರ್ಯದಲ್ಲಿ ತೊಡಗಿಸಿಕೊಂಡು ಪಶುಪಾಲನಾ ಕಾರ್ಯದಲ್ಲಿ ಹೆಚ್ಚಿನ ಆಸಕ್ತಿ ವಹಿಸಿದರು.[೫೦] ಇದೇ ರೀತಿಯಾಗಿ ತುಮಕೂರಿನ ಟಿ.ಎಸ್. ಸಿದ್ದಪ್ಪನವರು ಪ್ರತಿದಿನ ಪ್ರಾಣಿದಯಾ ಪ್ರಚಾರಕ ಸಂಘದ ಅಡಿಯಲ್ಲಿ ಅಂಗಹೀನವಾದ ಮತ್ತು ವಯಸ್ಸಾದ ಹಸು, ಎತ್ತು, ಎಮ್ಮೆಗಳಿಗೆ ರೈತರಿಂದ ಹುಲ್ಲು, ಸೊಪ್ಪುಗಳನ್ನು ಸಂಗ್ರಹಿಸಿ ಅವುಗಳಿಗೆ ಹಾಕುವ ಪರಿಪಾಠವನ್ನು ಮೈಗೂಡಿಸಿಕೊಂಡಿದರು. ೧೯೬೮ ರಲ್ಲಿನ ಭೀಕರ ಕ್ಷಾಮಗಾಲವು ತುಮಕೂರು ಜಿಲ್ಲೆಗೆ ವ್ಯಾಪಿಸಿತು. ಆ ಕ್ಲಿಷ್ಟ ಪರಿಸ್ಥಿತಿಯಲ್ಲಿ ರೈತರು ಹಸು, ಎತ್ತುಗಳನ್ನು ಸಾಕಲಾರದ ಪರಿಸ್ಥಿತಿಯುಂಟಾಯಿತು. ಇದರಿಂದಾಗಿ ರೈತರು ಪ್ರಾಣಿಗಳನ್ನು ಕಟುಕರಿಗೆ ಮಾರದೇ ತ್ರಿಶಂಕು ಸ್ಥಿತಿಯಲ್ಲಿದ್ದರು. ಆ ಸಂದರ್ಭದಲ್ಲಿ ಟಿ.ಎಸ್. ಸಿದ್ದಪ್ಪನವರು ಜಿಲ್ಲಾ ಪ್ರಾಣಿದಯಾ ಪ್ರಚಾರಕ ಸಂಘದ ಮೂಲಕ ಜಿಲ್ಲಾಧಿಕಾರಿಗಳನ್ನು, ಆಹಾರ ಸಚಿವರನ್ನು, ಪಶುಸಂಗೋಪನಾ ಶಾಖೆಯ ಮಂತ್ರಿಗಳನ್ನು ಸಂದರ್ಶಿಸಿ, ಜನರಿಗೆ ಆಹಾರ ಹೇಗೆ ಮುಖ್ಯವೋ ಪ್ರಾಣಿಗಳಿಗೂ ಸಹಾ ಮೇವು ಅಷ್ಟೆ ಮುಖ್ಯ ಎಂದು ಮನವಿ ಪತ್ರಗಳನ್ನು ಸಲ್ಲಿಸಿದರು.[೫೧] ಈ ರೀತಿ ಜಿಲ್ಲೆಯಲ್ಲಿ ಗೋ-ಸಂರಕ್ಷಣಾ ಕಾರ್ಯವನ್ನು ಕೈಗೊಂಡರು ಎಂದು ಹೇಳಬಹುದು. ಅದೇ ರೀತಿಯಾಗಿ ಹಿರಿಯ ಗಾಂಧೀವಾದಿ ಸರ್ವೋದಯ ಕಿರಣ ತಿಪಟೂರಿನ ಟಿ.ಎ. ದಾಸಪ್ಪನವರು ಗೋ-ಸಂರಕ್ಷಣಾ ಕಾರ್ಯದ ಅಂಗವಾಗಿ ತಿಪಟೂರಿನಲ್ಲಿ ೧೯೭೩ ರಲ್ಲಿ ಗೋ-ಶಾಲೆಯನ್ನು ಸ್ಥಾಪಿಸಿದರು.[೫೨]

ಈ ರೀತಿಯಾಗಿ ತುಮಕೂರು ಜಿಲ್ಲೆಯಲ್ಲಿ ಗಾಂಧೀಜಿಯವರ ಗೋ-ಹತ್ಯೆ ನಿಷೇಧ ಕಾರ್ಯಕ್ರಮಕ್ಕೆ ಕಾಂಗ್ರೆಸ್ಸಿಗರು, ಕಾರ್ಯಕರ್ತರು, ತುಮಕೂರಿನ ಪ್ರಾಣಿದಯಾ ಪ್ರಚಾರಕ ಸಂಘವು ಸೂಕ್ತವಾಗಿ ಸ್ಪಂದಿಸಿ ಸ್ವೀಕರಿಸಿ ಅದನ್ನು ಪ್ರಚಾರ ಮಾಡಲು ಕ್ರಮ ಕೈಗೊಂಡಿತು. ೧೯೯೧ ರಿಂದ ಈ ಸಂಘಕ್ಕೆ ಅಧ್ಯಕ್ಷರಾಗಿ ಬಂದ ಸಿ.ಎಲ್. ಶಿವಣ್ಣನವರು ಈ ಸಂಘವನ್ನು ಮಾದರಿಯಾಗಿಸಲು ಪ್ರಯತ್ನಿಸುತ್ತಿದ್ದಾರೆ.

### ವಯಸ್ಕರ ಶಿಕ್ಷಣ

ಗಾಂಧೀಜಿಯವರ ಪ್ರಕಾರ ವಯಸ್ಕರ ಶಿಕ್ಷಣ ದೇಶದ ಭದ್ರತೆಗೆ ಬುನಾದಿ. ಬಾಯಿ ಮಾತಿನ ಮುಖಾಂತರ ರಾಜಕೀಯ ಜ್ಞಾನವನ್ನುಂಟು ಮಾಡುವ ಶಕ್ತಿ ಇದಕ್ಕಿದೆ. ಇವರು ೧೯೨೭ ರಲ್ಲಿ ಸಂಸ್ಥಾನದ ಖಾದಿ ಪ್ರಚಾರ ಸಂದರ್ಭದಲ್ಲಿಯೇ ವಯಸ್ಕರನ್ನು ಉದ್ದೇಶಿಸಿ ಹೇಳುತ್ತಾ "ದೇಶದ ನವಯುವಕರು ನೀವು ಶಿಕ್ಷಣ ಪಡೆದು ರಾಜಕೀಯದಲ್ಲಿ ಪಾಲ್ಗೊಳ್ಳುವಂತೆಯೇ ಸಮಾಜದ ಸುಧಾರಣೆಯಲ್ಲಿ ಸಹ ಪಾಲ್ಗೊಳ್ಳಬೇಕು. ಹಾಗೂ ಶಿಕ್ಷಣ ಮೂಲಕ ಅಸ್ಪೃಶ್ಯತೆಯನ್ನು

ಹೋಗಲಾಡಿಸಿ" ಎಂಬ ಕರೆಯನ್ನು ನೀಡಿದರು.[೫೩] ಈ ಉಪದೇಶ ಸಂಸ್ಥಾನದ ಯುವಕರಲ್ಲಿ ಹೊಸ ಕಲ್ಪನೆಯನ್ನು ಮೂಡಿಸಿತು. ಇಲ್ಲಿಯ ಸರ್ಕಾರ, ಕಾಂಗ್ರೆಸ್ ಕಾರ್ಯಕರ್ತರು, ಸ್ತ್ರೀಯರು ಸಹಾ ಈ ಕಾರ್ಯಕ್ರಮವನ್ನು ಒಪ್ಪಿ ಸ್ವೀಕರಿಸಿದರು. ಬಹು ಸಂಖ್ಯಾತ ಅನಕ್ಷರತೆ ಭಾರತದ ಪಾಪ ಹಾಗೂ ಕಳಂಕವಾಗಿದೆ, ಅದನ್ನು ತೊಡೆದು ಹಾಕಲೇಬೇಕು ಎಂಬುದು ಗಾಂಧೀಜಿಯವರ ಅಭಿಪ್ರಾಯವಾಗಿತ್ತು.

ಗಾಂಧೀಜಿಯವರ ವಯಸ್ಕರ ಶಿಕ್ಷಣವು ಗ್ರಾಮೀಣಾಭಿವೃದ್ಧಿಗೆ ಪೂರಕವಾದ ಒಂದು ರಚನಾತ್ಮಕ ಕಾರ್ಯಕ್ರಮವಾಗಿದೆ. ಈ ಅಂಶಕ್ಕೆ ತುಮಕೂರು ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು, ಕಾಂಗ್ರೆಸ್ಸಿನ ಮುಖಂಡರುಗಳು, ಗಾಂಧೀಜಿಯವರ ಅನುಯಾಯಿಗಳಾದ ಟಿ.ಆರ್. ಚನ್ನಪ್ಪ, ಜಿ.ವಿ. ನಾರಾಯಣಮೂರ್ತಿ, ವಿ.ಎಸ್. ರೆಡ್ಡಿಯವರು ಸೂಕ್ತವಾಗಿಯೇ ಸ್ಪಂದಿಸಿ ಸ್ವೀಕರಿಸಿ ಈ ಕಾರ್ಯಕ್ರಮವನ್ನು ಜಿಲ್ಲೆಯಲ್ಲಿ ಪ್ರಚಾರ ಮಾಡಿದರು. ಕೊರಟಗೆರೆ ತಾಲ್ಲೂಕಿನ ತೀತ ಗ್ರಾಮದ ಟಿ.ಆರ್. ಚನ್ನಪ್ಪನವರು ೧೯೩೯ರಲ್ಲಿ ರಾತ್ರಿ ಸಮಯದಲ್ಲಿ ವಯಸ್ಕರಿಗೆ ಪಾಠ ಶಾಲೆಯನ್ನು ನಡೆಸುವುದು, ಅನಕ್ಷರಸ್ಥರಿಗೆ ಅಕ್ಷರಾಭ್ಯಾಸ ಮಾಡಿಸುವುದು, ರಾಷ್ಟ್ರೀಯ ಕಾಂಗ್ರೆಸ್ ಮುಂದಾಳುಗಳ ಹೋರಾಟವನ್ನು ಅನಕ್ಷರಸ್ಥ ಯುವಕರಿಗೆ ಬಣ್ಣಿಸುವುದು ಮುಂತಾದ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡು ವಯಸ್ಕರ ಶಿಕ್ಷಣದ ಮೂಲಕ ಜನತೆಯನ್ನು ರಾಷ್ಟ್ರೀಯ ಹೋರಾಟದ ತೆಕ್ಕೆಗೆ ಸಜ್ಜುಗೊಳಿಸಿದರು.[೫೪] ಇದೇ ರೀತಿಯಾಗಿ ಚಿಕ್ಕನಾಯಕನಹಳ್ಳಿ ಯಲ್ಲಿ ಜಿ.ವಿ. ನಾರಾಯಣಮೂರ್ತಿಯವರು ವಯಸ್ಕರ ಶಿಕ್ಷಣ ಕ್ಷೇತ್ರದಲ್ಲಿ ತಮ್ಮ ಸೇವೆಯನ್ನು ಪ್ರಾರಂಭಿಸಿದರು. ಪಾಠ ಶಾಲೆ ಶಿಕ್ಷಣದಿಂದ ವಂಚಿತರಾದ ವಯಸ್ಕರಿಗೆ ತಮ್ಮ ಬಿಡುವಿನ ವೇಳೆ ರಾತ್ರಿ ಸಮಯದಲ್ಲಿ ಪಾಠಶಾಲೆಯನ್ನು ಪ್ರಾರಂಭಿಸಿ ಅಕ್ಷರ ಅಭ್ಯಾಸ ಮಾಡಿಸಿ ಸಂಘಟಿಸುತ್ತಿದ್ದರು. ಆಗಿನ್ನೂ ಮೈಸೂರು ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯನ್ನು ಪ್ರಾರಂಭಿಸಿರಲಿಲ್ಲ. ಅಕ್ಷರಾಭ್ಯಾಸದ ಜೊತೆಗೆ ರಾಷ್ಟ್ರೀಯ ಹೋರಾಟಗಾರರ ಬಗ್ಗೆ ತಿಳುವಳಿಕೆ ನೀಡುವುದು, ನಾಟಕಗಳನ್ನಾಡಿಸುವುದು, ಪ್ರಚಲಿತ ರಾಷ್ಟ್ರೀಯ ವಿದ್ಯಾಮಾನಗಳ ಬಗ್ಗೆ ಚರ್ಚಾ ಸ್ಪರ್ಧೆಗಳನ್ನು ಏರ್ಪಡಿಸುವುದು, ಮುಂತಾದ ರಚನಾತ್ಮಕ ಕಾರ್ಯಕ್ರಮಗಳನ್ನು ಬಿರುಸಿನಿಂದ ಹಮ್ಮಿಕೊಂಡು ಪ್ರಚಾರ ನಡೆಸಿದರು. ೪೦ ವರ್ಷಕ್ಕೂ ಮೇಲ್ಪಟ್ಟ ವಯಸ್ಕರು ಉತ್ಸಾಹದಿಂದ ಈ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುತ್ತಿದ್ದರು.[೫೫] ಇದೊಂದು ಮಾದರಿಯ ವಯಸ್ಕರ ಶಿಕ್ಷಣ ರಚನಾತ್ಮಕ ಕಾರ್ಯಕ್ರಮವಾಗಿತ್ತು. ಜಿ.ವಿ. ನಾರಾಯಣಮೂರ್ತಿಯವರ ಪತ್ನಿ ಪದ್ಮಾವತಿ ಬಾಯಿ ನಾರಾಯಣಮೂರ್ತಿಯವರು ಹೇಳುವ ಪ್ರಕಾರ ಜಿ.ವಿ. ನಾರಾಯಣಮೂರ್ತಿಯವರು ೧೯೪೦ ರ ದಶಕದಲ್ಲಿ ಕನ್ನಡ ಸಂಘದ ಆಶ್ರಯದಲ್ಲಿ ವಯಸ್ಕರ ಶಿಕ್ಷಣ ತರಗತಿಗಳನ್ನು ತೆರೆದು ವಯಸ್ಕರಿಗೆ ಶಿಕ್ಷಣ ತರಗತಿಗಳನ್ನು ಪ್ರಾರಂಭಿಸಿ ನಡೆಸುತ್ತಿದ್ದರು. ಜೊತೆಗೆ ಹಲವಾರು

ಕನ್ನಡದ ಕಾರ್ಯಕ್ರಮಗಳನ್ನು ನಡೆಸುತ್ತಿದ್ದರು. ಇವರ ಜೊತೆಗೆ ಸಂಸ್ಕೃತ ವಿದ್ವಾಂಸರಾದ ಚಿಕ್ಕನಾಯಕನಹಳ್ಳಿಯ ಮಾಧ್ಯಮಿಕ ಶಾಲೆಯ ಪ್ರಧಾನ ಅಧ್ಯಾಪಕರಾಗಿದ ಡಾ॥ ಎನ್.ಎಸ್. ಅನಂತರಂಗಾಚಾರ್ಯರವರು ಸೇರಿಕೊಂಡು ವಯಸ್ಕರ ಶಿಕ್ಷಣವನ್ನು ಪ್ರಚಾರ ಮಾಡಲು ಶ್ರಮಿಸಿದರು.[೫೬]

೧೯೪೨ ರಲ್ಲಿ ಪಾವಗಡ ತಾಲ್ಲೂಕಿನ ವೆಂಕಟಾಪುರ ಗ್ರಾಮದ ವಿ.ಎನ್. ರೆಡ್ಡಿಯವರು ಎಸ್.ಎಸ್.ಎಲ್.ಸಿ. ವಿದ್ಯಾಭ್ಯಾಸ ಮುಗಿಸಿದರು. ಅದೇ ಸಮಯದಲ್ಲಿ ಚಲೇಜಾವ್ ಚಳುವಳಿ ಪ್ರಾರಂಭವಾಗಿದ್ದರಿಂದ ತಮ್ಮ ಮುಂದಿನ ಶಿಕ್ಷಣಕ್ಕೆ ತಿಲಾಂಜಲಿ ನೀಡಿ ವೆಂಕಟಾಪುರ ಗ್ರಾಮದಲ್ಲಿ ವಯಸ್ಕರ ಶಿಕ್ಷಣ ತರಗತಿಗಳನ್ನು ಪ್ರಾರಂಭಿಸಿ ಅನಕ್ಷರಸ್ಥರಿಗೆ ಅಕ್ಷರಾಭ್ಯಾಸ ಮಾಡಿಸಿ, ಅನಕ್ಷರಸ್ಥ ಜನತೆಯಲ್ಲಿ ರಾಷ್ಟ್ರೀಯ ಪ್ರಜ್ಞೆಯನ್ನು ಬೆಳೆಸಿ ಜಾಗೃತರಾಗುವಂತೆ ಶ್ರಮಿಸಿದರು.[೫೭] ಈ ರೀತಿಯಾಗಿ ಕರ್ನಾಟಕದ ಗಡೀ ಪ್ರದೇಶವಾದ ಪಾವಗಡ ತಾಲ್ಲೂಕಿನ ಗಡಿನಾಡ ಹಳ್ಳಿಯಾದ ವೆಂಕಟಾಪುರದಲ್ಲಿ ವಯಸ್ಕರಿಗೆ ಶಿಕ್ಷಣ ಕೊಡುವುದರ ಮೂಲಕ ವಿ.ಎನ್.ರೆಡ್ಡಿಯವರು ರಾಷ್ಟ್ರೀಯ ಹೋರಾಟವಾದ ಕ್ವಿಟ್ ಇಂಡಿಯಾ ಚಳುವಳಿಗೆ ಜನರನ್ನು ಹುರಿದುಂಬಿಸುತ್ತಿದ್ದರು.

ತುಮಕೂರು ಜಿಲ್ಲಾ ವಯಸ್ಕರ ಶಿಕ್ಷಣ ಸಮಿತಿಯು ೧೯೪೩ ರ ಸೆಪ್ಟೆಂಬರ್‌ನಲ್ಲಿ ಸ್ಥಾಪಿತವಾಯಿತು. ಇದರ ಉದ್ದೇಶವು ತುಮಕೂರು ಜಿಲ್ಲೆಯು ಅಕ್ಷರಜ್ಞಾನದಲ್ಲಿ ಎಷ್ಟು ಹಿಂದೆ ಬಿದ್ದಿದೆ ಎಂಬುದನ್ನು ಗುರುತಿಸುವುದಾಗಿದೆ. ಇದು ಅಲ್ಲದೇ ಪ್ರತಿ ವರ್ಷವೂ ವ್ಯವಸ್ಥಿತವಾಗಿ ಜಿಲ್ಲೆಯ ನಾನಾ ಭಾಗಗಳಲ್ಲಿ ನೂರಾರು ವಯಸ್ಕರ ಶಿಕ್ಷಣ ಶಾಲೆಗಳನ್ನು ನಡೆಸುತ್ತಾ ಸಾವಿರಾರು ಅನಕ್ಷರಸ್ಥರನ್ನು ಅಕ್ಷರಸ್ಥರನ್ನಾಗಿ ಮಾಡುವುದು ಇದರ ಕೆಲಸವಾಗಿದೆ. ತುಮಕೂರು ಜಿಲ್ಲಾ ವಯಸ್ಕರ ಶಿಕ್ಷಣ ಸಮಿತಿಗೆ ಮೊದಲು ಶ್ರೀಮಾನ್ ಜಿ. ಮುದ್ದಪ್ಪನವರು ಕಾರ್ಯದರ್ಶಿಯಾಗಿದ್ದರು.[೫೮] ಈ ಜಿಲ್ಲಾ ವಯಸ್ಕರ ಶಿಕ್ಷಣ ಸಮಿತಿಗಾಗಿ ಜಿ.ವಿ. ನಾರಾಯಣಮೂರ್ತಿಯವರು 'ವಿನೋಭಾ' ಎಂಬ ಒಂದು ಕಿರು ಹೊತ್ತಿಗೆಯನ್ನು ಬರೆದಿದ್ದಾರೆ. ಈ ಹೊತ್ತಿಗೆಯಲ್ಲಿ ಅವರು ವಯಸ್ಕರಿಗೆ ಕೊಡುವ ಶಿಕ್ಷಣ ಪದ್ಧತಿಯನ್ನು, ಓದುವುದು, ವಯಸ್ಕರ ಶಿಕ್ಷಣದ ಮೂಲಕ ಬರೆಯುವುದು, ವಯಸ್ಕರಿಗೆ ಯಾವ ಯಾವ ರೀತಿಯಲ್ಲಿ ಕಲಿಸಿದರೆ ಶಿಕ್ಷಣವನ್ನು ಬೇಗನೆ ಗ್ರಹಿಸಿಕೊಂಡು ಅರ್ಥ ಮಾಡಿಕೊಂಡು ಕಲಿಯುತ್ತಾರೆ[೫೯] ಮುಂತಾದ ವಿಷಯಗಳ ಬಗ್ಗೆ ವಿವರಿಸಿದ್ದಾರೆ.

ತುಮಕೂರು ಜಿಲ್ಲೆಯ ವಯಸ್ಕರ ಶಿಕ್ಷಣದ ಬಗ್ಗೆ ವಿನೋಬಾ ಭಾವೆಯವರು ಭೂದಾನ ಯಾತ್ರೆಯ ಅಂಗವಾಗಿ ೧೯೫೭ ರಲ್ಲಿ ಭೇಟಿ ನೀಡಿದಾಗ ಅದರ ಕಾರ್ಯವೈಖರಿಗಳ ಬಗ್ಗೆ ತಮ್ಮ ಅಭಿಪ್ರಾಯವನ್ನು ಸೂಚಿಸಿದರು. ಈ ಸಂದರ್ಭದಲ್ಲಿ ೨೮-೧೦-೧೯೫೭ ರಂದು

ತುಮಕೂರು ತಾಲ್ಲೂಕಿನ ಸಿದ್ಧಗಂಗಾ ಕ್ಷೇತ್ರದಲ್ಲಿ ಮೈಸೂರು ರಾಜ್ಯದ ವಯಸ್ಕರ ಶಿಕ್ಷಣ ಸಮಿತಿಯ ಕಾರ್ಯಕರ್ತರ ಮತ್ತು ವಿನೋಬಾಭಾವೆಯವರ ನಡುವೆ ವಯಸ್ಕರ ಶಿಕ್ಷಣಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ಚರ್ಚೆ ನಡೆಯಿತು. ವಯಸ್ಕರ ಶಿಕ್ಷಣ ಸಮಿತಿಯವರು ವಯಸ್ಕರ ಶಿಕ್ಷಣಕ್ಕೆ ಸಂಬಂಧಿಸಿದಂತೆ ಕೆಲವು ಚಿತ್ರ, ಚಲನಚಿತ್ರಗಳನ್ನು ಸಾಕ್ಷ್ಯ ಚಿತ್ರಗಳನ್ನು ತೋರಿಸುವುದರ ಮೂಲಕ ಅನಕ್ಷರಸ್ಥ ವಯಸ್ಕರನ್ನು ಆಕರ್ಷಿಸುವ ಪ್ರಯತ್ನ ಮಾಡಬೇಕು[೬೦] ಎಂದು ವಿನೋಬಾ ಭಾವೆಯವರು ವಯಸ್ಕರ ಶಿಕ್ಷಣದ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

ರಾಷ್ಟ್ರೀಯ ಶಿಕ್ಷಣ: ೧೯೦೬ ರ ಕಲ್ಕತ್ತ ಕಾಂಗ್ರೆಸ್ ಅಧಿವೇಶನವು ಸ್ವರಾಜ್ಯವೇ ತನ್ನ ಮೂಲ ಗುರಿ ಎಂದು ಘೋಷಿಸಿತು. ಸ್ವದೇಶಿ, ವಿದೇಶಿವಸ್ತು ಬಹಿಷ್ಕಾರ, ರಾಷ್ಟ್ರೀಯ ಶಿಕ್ಷಣವು ಈ ಗುರಿಯನ್ನು ತಲುಪುವ ಸಾಧನಗಳೆಂದು ಘೋಷಿಸಿತು.[೬೧] ಈ ನಿಟ್ಟನಲ್ಲಿ ೧೯೨೦ ಸೆಪ್ಟೆಂಬರ್‌ನಲ್ಲಿ ಕಲ್ಕತ್ತೆಯಲ್ಲಿ ಕಾಂಗ್ರೆಸ್‌ನ ವಿಶೇಷ ಅಧಿವೇಶನ ಜರುಗಿತು. ಇಲ್ಲಿ ಮೋತಿಲಾಲ್ ನೆಹರು, ಲಾಲ ಲಜಪತರಾಯ್‌ರವರನ್ನು ಒಳಗೊಂಡಂತೆ ದೇಶದ ಹಲವು ಮುಖಂಡರು ಗಾಂಧೀಜಿಯವರ ಚಳುವಳಿಯ ಮಾರ್ಗವನ್ನು ಬೆಂಬಲಿಸಿದರು. ಖಾದಿ ಪ್ರಚಾರ, ಶಾಲಾ ಕಾಲೇಜುಗಳ ಬಹಿಷ್ಕಾರ, ರಾಷ್ಟ್ರೀಯ ಶಾಲಾ ಕಾಲೇಜುಗಳ ಸ್ಥಾಪನೆಯಂತಹ ರಚನಾತ್ಮಕ ಕಾರ್ಯಗಳನ್ನು ಕೈಗೊಳ್ಳುವ ನಿರ್ಧಾರವನ್ನು ಹಮ್ಮಿಕೊಳ್ಳಲಾಯಿತು. ಈ ಅಧಿವೇಶನದಲ್ಲಿ ಚಳುವಳಿಯ ನಿರ್ಧಾರದ ಫಲವಾಗಿ ೧೮೪೪ ಮತಗಳು ಹಾಗೂ ವಿರೋಧವಾಗಿ ೧೩೨ ಮಂದಿ ಮತ ನೀಡಲಾಯಿತು.[೬೨] ಅನಂತರ ೧೯೨೪ ರ ಬೆಳಗಾಂ ಕಾಂಗ್ರೆಸ್ ಅಧಿವೇಶನದಲ್ಲಿ ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳ ವಿಷಯವಾಗಿ ಒಂದು ಗೊತ್ತುವಳಿಯನ್ನು ಅಂಗೀಕರಿಸಲಾಯಿತು. ಯಾವ ಶಿಕ್ಷಣ ಸಂಸ್ಥೆಗಳಲ್ಲಿ ಶಿಕ್ಷಣದ ಮಧ್ಯಮವು ಯಾವುದಾದರೂ ಭಾರತೀಯ ಭಾಷೆಯಲ್ಲಿರುವುದಿಲ್ಲವೋ, ಅಸ್ಪೃಶ್ಯತಾ ನಿವಾರಣೆ ಅವರಲ್ಲಿ ಶಿಕ್ಷಣದ ಪ್ರಚಾರದ ಕೆಲಸವನ್ನು ಮಾಡುವುದಿಲ್ಲವೋ, ಯಾವ ಸಂಸ್ಥೆ ಗಳಲ್ಲಿ ನೂಲುವುದು, ಹತ್ತಿ ಹಿಂಜುವುದು, ಅವಶ್ಯಕ ವಿಷಯದಂತೆ ಕಲಿಸಲ್ಪಡುವುದಿಲ್ಲವೋ, ಶಾರೀರಿಕ ವ್ಯಾಯಾಮ ಮತ್ತು ಆತ್ಮರಕ್ಷಣೆಯ ಶಿಕ್ಷಣವೂ ಕೊಡಲ್ಪಡುವುದಿಲ್ಲವೋ, ೧೨ ವರ್ಷಕ್ಕೆ ಮೇಲ್ಪಟ್ಟ ವಿದ್ಯಾರ್ಥಿಗಳು, ಅಧ್ಯಾಪಕರು, ದಿನಾಲು ಅರ್ಧ ಗಂಟೆಯಾದರೂ ನೂಲುವುದಿಲ್ಲವೋ, ಖಾದಿಯನ್ನು ಧರಿಸುವುದಿಲ್ಲವೋ ಅವು ರಾಷ್ಟ್ರೀಯ ಶಿಕ್ಷಣದ ಸಂಸ್ಥೆಗಳಲ್ಲ. ಈ ಗೊತ್ತುವಳಿಗೆ ಅನುಸಾರವಾಗಿಯೇ ಎಲ್ಲಾ ರಾಷ್ಟ್ರೀಯ ಶಾಲೆಗಳಲ್ಲಿಯೇ ಪಾಠ ಕ್ರಮವಿದೆಯೆಂದೂ ಎದೆ ತಟ್ಟಿ ಹೇಳಬಹುದು. ಈ ರಾಷ್ಟ್ರೀಯ ಶಿಕ್ಷಣದಿಂದ ರಾಷ್ಟ್ರೀಯ ಸಂಸ್ಕೃತಿಯನ್ನು ಸುಸಂಪನ್ನ ಮಾಡುವುದು ಮತ್ತು ರಾಷ್ಟ್ರೀಯ ಸಾಹಿತ್ಯದ ಸರ್ವಾಂಗೀಣ ಉನ್ನತಿಯನ್ನು ಮಾಡುವುದು ರಾಷ್ಟ್ರೀಯ ಶಿಕ್ಷಣದ ಉದ್ದೇಶ ಎಂದು ಸಾರಲಾಯಿತು.[೬೩]

ಬೆಳಗಾಂ ಕಾಂಗ್ರೆಸ್ ಅಧಿವೇಶನದಲ್ಲಿ ಕೈಗೊಂಡ ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳ ಗೊತ್ತುವಳಿಯಿಂದಾಗಿ ಕರ್ನಾಟಕದ ಧಾರವಾಡ, ಹುಬ್ಬಳ್ಳಿ, ಮಂಗಳೂರು, ಗದಗ, ಹಾನಗಲ್ಲು, ಸಿರ್ಸಿ, ಸಿದ್ದಾಪುರ, ಬೆಳಗಾಂ, ಹೊಸಪೇಟೆ, ಬಿಜಾಪುರ, ಬಾಗಲಕೋಟೆ, ತುಮಕೂರು ಮುಂತಾದ ಕಡೆಗಳಲ್ಲಿ ರಾಷ್ಟ್ರೀಯ ಶಾಲೆಗಳು ಸ್ಥಾಪನೆಯಾದವು. ಈ ರಾಷ್ಟ್ರೀಯ ಶಿಕ್ಷಣ ಶಾಲೆಗಳಲ್ಲಿ ಖಾದಿ ಪ್ರಚಾರ, ಅಸ್ಪೃಶ್ಯತಾ ನಿವಾರಣೆ, ಪಾನ ನಿರೋಧ, ಗ್ರಾಮೀಣಾಭಿವೃದ್ಧಿ, ಗ್ರಾಮ ಕೈಗಾರಿಕೆಗಳು[೬] ಮುಂತಾದ ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳ ಬಗ್ಗೆ ಶಿಕ್ಷಣವನ್ನು ನೀಡಲಾಯಿತು. ಈ ರಚನಾತ್ಮಕ ಕಾರ್ಯಗಳ ಉದ್ದೇಶ ಕನ್ನಡ ನಾಡಿನ ಜನತೆಯಲ್ಲಿ ಐಕ್ಯತೆಯ ಅರಿವನ್ನುಂಟು ಮಾಡುವುದು ಆಗಿತ್ತು.

ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳಲ್ಲಿ ಇರಬೇಕಾದ ಅಂಶಗಳು

೧. ರಾಷ್ಟ್ರೀಯ ಶಿಕ್ಷಣ ಶಾಲೆಗಳು ಸಾಮ್ರಾಜ್ಯಶಾಹಿ ವಿರೋಧಿ ತಾತ್ವಿಕ ಶಿಕ್ಷಣವನ್ನು ವಿದ್ಯಾರ್ಥಿಗಳಿಗೆ ನೀಡಲು ಆರಂಭಿಸಿದರು.

೨. ರಾಷ್ಟ್ರೀಯ ಶಿಕ್ಷಣ ಶಾಲೆಗಳ ಮೂಲಕ ರಚನಾತ್ಮಕ ಕಾರ್ಯಕರ್ತರು ರಾಷ್ಟ್ರೀಯ ಚಳುವಳಿಗೆ ಪ್ರೇರಣೆ ನೀಡಿದರು.

೩. ರಾಷ್ಟ್ರೀಯ ಶಿಕ್ಷಣ ಶಾಲೆಗಳ ಮೂಲಕ ರಚನಾತ್ಮಕ ಕಾರ್ಯಕರ್ತರು ರಾಷ್ಟ್ರೀಯ ಚಳುವಳಿಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ಪ್ರಮುಖ ಪಾತ್ರ ವಹಿಸಲು ಅನುವು ಮಾಡಿಕೊಟ್ಟವು.

೪. ಗುಲಾಮಗಿರಿಯ ಮೊದಲನೆಯ ಕೊಂಡಿ ಪ್ರಾರಂಭವಾಗುವುದು ಬ್ರಿಟಿಷ್ ಚಾಲಿತ ಶಾಲೆಗಳಲ್ಲಿ. ಆದ್ದರಿಂದ ಈ ರಾಷ್ಟ್ರೀಯ ಶಿಕ್ಷಣ ಶಾಲೆಗಳು ಸ್ವತಂತ್ರವಾದ ಪ್ರಥಮ ಆಯುಧಗಳನ್ನು ತಯಾರು ಮಾಡುವ ಕಾರ್ಖಾನೆಗಳು. ಬ್ರಿಟಿಷರ ಗುಲಾಮಗಿರಿಯನ್ನು ವಿರೋಧಿಸುವವು ಆಗಿವೆ.

೫. ರಾಷ್ಟ್ರೀಯ ಶಿಕ್ಷಣ ಶಾಲೆಗಳು ನಿಜವಾಗಿಯೂ ರಾಷ್ಟ್ರೀಯವಾಗಬೇಕಾಗಿದ್ದರೆ, ಅವು ಹಿಂದು-ಮುಸ್ಲಿಮ್ ಐಕ್ಯತೆಯ ಬಗ್ಗೆ ಅರಿವು ಬೆಳೆಸಬೇಕು. ಅಸ್ಪೃಶ್ಯತೆಯ ನಿವಾರಣೆ, ಖಾದಿ ಪ್ರಚಾರ, ನೂಲುವ ಕಲೆಯನ್ನು ಕಲಿಸಬೇಕು. ಅಂತಃಕರಣ ಶಿಕ್ಷಣ, ಬೌದ್ಧಿಕ, ನೈತಿಕ, ಆರ್ಥಿಕ, ರಾಜಕೀಯ ಶಿಕ್ಷಣ ಮುಂತಾದ ವಿಷಯಗಳ ಬಗ್ಗೆ ಬೋಧನೆಯನ್ನು ಮಾಡಬೇಕು.

೬. ರಾಷ್ಟ್ರೀಯ ಶಿಕ್ಷಣ ಶಾಲೆಗಳ ಪ್ರವೇಶ ಪಡೆದಂತಹ ವಿದ್ಯಾರ್ಥಿಗಳು ಬಹಿಷ್ಕಾರ ತತ್ವವನ್ನು ಅಳವಡಿಸಿಕೊಂಡು ಬ್ರಿಟಿಷ್ ಶಾಲೆಗಳಿಗೆ ಬದಲಾಗಿ ರಾಷ್ಟ್ರೀಯ ಶಾಲೆಗಳ ಪ್ರವೇಶಕ್ಕೆ ಒಪ್ಪಿದರು. ರಾಷ್ಟ್ರೀಯ ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡರು. ಈ ರೀತಿಯ ಶಿಕ್ಷಣ

ಸಂಸ್ಥೆಯನ್ನು ತುಮಕೂರು ಜಿಲ್ಲೆಯ ವ್ಯಾಪ್ತಿಯಲ್ಲಿ ಸ್ಥಾಪಿಸಿದ ಕೀರ್ತಿ, ಜಿ.ವಿ. ನಾರಾಯಣ ಮೂರ್ತಿಯವರಿಗೆ ಸಲ್ಲುತ್ತದೆ.

ರಾಷ್ಟ್ರೀಯ ಶಿಕ್ಷಣದ ದೇಶೀಯ ವಿದ್ಯಾಪೀಠ : ರಾಷ್ಟ್ರ ನಾಯಕರು, ಸ್ವಾತಂತ್ರ್ಯ ಹೋರಾಟಗಾರರು ಸ್ವಾತಂತ್ರ್ಯ ಸಾಧನೆ ಕ್ಷೇತ್ರದಲ್ಲಿ ರಾಷ್ಟ್ರೀಯ ಶಿಕ್ಷಣದ ಮಹತ್ವವನ್ನರಿತು ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸಿ ಮಾರ್ಗದರ್ಶನ ನೀಡಿದರು. ಮದನಮೋಹನ ಮಾಳವೀಯರ ಕಾಶೀ ಹಿಂದೂ ವಿಶ್ವವಿದ್ಯಾಲಯ, ವಿಶ್ವಕವಿ ರವೀಂದ್ರರ ವಿಶ್ವಭಾರತಿ, ಬೆಂಗಳೂರಿನ ನ್ಯಾಷನಲ್ ಕಾಲೇಜ್, ಮುಂತಾದ ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳು ಜನ್ಮ ತಾಳಿ ರಾಷ್ಟ್ರೀಯ ಶಿಕ್ಷಣ ಕ್ಷೇತ್ರದಲ್ಲಿ ಸಾಕಷ್ಟು ಮುನ್ನಡೆ ಸಾಧಿಸಿದವು. ಈ ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳ ಮಹತ್ವವನ್ನರಿತ ಜಿ.ವಿ. ನಾರಾಯಣ ಮೂರ್ತಿಯವರು ತುಮಕೂರು ಜಿಲ್ಲೆಯಲ್ಲಿನ ಚಿಕ್ಕನಾಯಕನಹಳ್ಳಿಯಲ್ಲಿ ಗ್ರಾಮೀಣಾಭಿವೃದ್ಧಿಯ ದೃಷ್ಟಿಯಿಂದ, ಗ್ರಾಮೀಣ ವಿದ್ಯಾರ್ಥಿಗಳ ಪ್ರಗತಿಗೂ ಒಂದು ರಾಷ್ಟ್ರೀಯ ಶಿಕ್ಷಣ ಸಂಸ್ಥೆಯ ಅಗತ್ಯವನ್ನು ಅರಿತು ಕಾರ್ಯಮಗ್ನರಾದರು. ರಾಷ್ಟ್ರದಲ್ಲೇ ಸ್ವಾತಂತ್ರ್ಯ ಕಹಳೆ ಮೊಳಗುತ್ತಿದ್ದ ರಾಷ್ಟ್ರೀಯ ಪ್ರಕ್ಷುಬ್ಧ ಕಾಲದಲ್ಲಿ ೧೯೪೩ ರಲ್ಲಿ ಜಿ.ವಿ. ನಾರಾಯಣ ಮೂರ್ತಿಯವರು ದೇಶೀಯ ವಿದ್ಯಾಪೀಠ ಎಂಬ ಶಿಕ್ಷಣ ಸಂಸ್ಥೆಯನ್ನು ಸಿ.ಹೆಚ್. ಲಿಂಗದೇವರು ಎಂಬುವರ ಸಹಕಾರದೊಂದಿಗೆ ಪ್ರಾರಂಭಿಸಿದರು. ರಾಷ್ಟ್ರೀಯ ಶಿಕ್ಷಣವೇ ಪ್ರಧಾನ ಗುರಿಯಾಗಿ ೧೯೪೪ ಜೂನ್ ೨ ರಂದು ದೇಶೀಯ ವಿದ್ಯಾಪೀಠವು ಪ್ರೌಢಶಾಲೆಯನ್ನು ಪ್ರಾರಂಭಿಸಿತು. ಇದು ತುಮಕೂರು ಜಿಲ್ಲೆಯಲ್ಲಿಯೇ ಪ್ರಥಮ ಖಾಸಗಿ ಪ್ರೌಢಶಾಲೆ.[೬೫]

## ಸತ್ಯಾಗ್ರಹಿಗಳ ಶಾಲೆ

೧೯೪೭ ಆಗಸ್ಟ್ ೧೫ ರಂದು ಭಾರತ ಸ್ವಾತಂತ್ರ್ಯ ಪಡೆಯಿತು. ಆದರೆ ಮೈಸೂರು ಸಂಸ್ಥಾನದಲ್ಲಿ ಅರಸರ ಆಳ್ವಿಕೆ ಅಂತ್ಯಗೊಂಡಿರಲಿಲ್ಲ. ಇದರಿಂದಾಗಿ ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ಚಳುವಳಿ ಪ್ರಾರಂಭವಾಯಿತು. ಆಗ ದೇಶೀಯ ವಿದ್ಯಾಪೀಠ ತುಮಕೂರು ಜಿಲ್ಲೆಯ ಹೋರಾಟದ ಕೇಂದ್ರವಾಯಿತು. ಪ್ರೌಢಶಾಲೆ ಸತ್ಯಾಗ್ರಹಿಗಳ ಶಾಲೆಯಾಗಿ ಪರಿಣಮಿಸಿತ್ತು. ಅದು ವಿದ್ಯಾರ್ಥಿಗಳನ್ನು ಸತ್ಯಾಗ್ರಹಕ್ಕೆ ಸಜ್ಜುಗೊಳಿಸಿದ ರೀತಿ ಅಪೂರ್ವವಾಗಿತ್ತು. ಪ್ರೌಢಶಾಲೆಯ ಎಲ್ಲಾ ವಿದ್ಯಾರ್ಥಿಗಳು ಸ್ವಯಂ ಪ್ರೇರಣೆಯಿಂದ ಹೋರಾಟಕ್ಕೆ ಇಳಿದರು. ಈ ಸಂದರ್ಭದಲ್ಲಿ ಇಡೀ ಚಿಕ್ಕನಾಯಕನಹಳ್ಳಿಯ ತಾಲ್ಲೂಕಿನಾದ್ಯಂತ ಹೋರಾಟದ ಸಂಘಟನೆಯ ಹೊಣೆಯನ್ನು ಹೊತ್ತಿದ್ದರು. ಇವರ ನೇತೃತ್ವದಲ್ಲಿ ಯಾವ ಹಿಂಸಾಕೃತ್ಯಗಳಿಗೂ ಅವಕಾಶವಾಗದಂತೆ ಸಭೆ, ಮೆರವಣಿಗೆ, ಸರ್ಕಾರಿ ಕಚೇರಿಗಳ ಸರ್ಪಗಾವಲು ಮಧ್ಯಮಾರುವ ಅಂಗಡಿಗಳ ಮುಂದೆ ಪಿಕೆಟಿಂಗ್ ವ್ಯವಸ್ಥಿತವಾಗಿ ನಡೆಸುತ್ತಿದ್ದರು. ಪ್ರತಿದಿನ ಸತ್ಯಾಗ್ರಹಿಗಳು ಕಾನೂನು

ಭಂಗ ಮಾಡಿ ಬಂಧನಕ್ಕೊಳಗಾಗುತ್ತಿದ್ದರು. ಮೊದಲ ದಿನ ಕಾನೂನು ಭಂಗ ಮಾಡಿ ಬಂಧನಕ್ಕೊಳಗಾದವರು ಜಿ.ವಿ.ನಾರಾಯಣಮೂರ್ತಿಯವರು, ಅನಂತರ ಸಿ.ಹೆಚ್. ಲಿಂಗದೇವರು, ಎಂ.ಎಸ್. ಹನುಮಂತರಾವ್, ಮುರುಡಯ್ಯ ಮುಂತಾದ ೩೫-೪೦ ಮಂದಿ ಬಂಧನವಾಯಿತು. ಕೊನೆಯಲ್ಲಿ ಅಧ್ಯಾಪಕರುಗಳಾದ ಚಿ.ತ. ಈಶ್ವರನ್ ಮತ್ತು ಚಿ.ನ. ಕೃಷ್ಣರಾವ್ ರವರನ್ನು ವಿದ್ಯಾರ್ಥಿಗಳನ್ನು ಅಪ್ರತ್ಯಕ್ಷವಾಗಿ ಪ್ರಚೋದಿಸುತ್ತಿದ್ದಾರೆಂಬ ಆರೋಪದ ಮೇಲೆ ಬಂಧಿಸಲಾಯಿತು. ಇಲ್ಲಿ ಕವಾಯಿತು, ಹಿಂದೀ ಪ್ರಚಾರ, ರಾಷ್ಟ್ರಗೀತೆಗಳ ಅಭ್ಯಾಸ, ಪ್ರಭಾತ್ ಪೇರಿ, ಖಾದಿ ಪ್ರಚಾರ, ಹರಿಜನೋದ್ಧಾರ, ಗಾಂಧೀ ಜಯಂತಿ ಸಪ್ತಾಹ ಮುಂತಾದ ರಚನಾತ್ಮಕ ಕಾರ್ಯಕ್ರಮಗಳಿಂದ ಒಂದು ಹೊಸ, ತತ್ವವೇ ಮೂಡತೊಡಗಿತು. ಇಲ್ಲಿ ಒಳ್ಳೆಯ ಸ್ವಯಂ ಸೇವಕರ ಪಡೆ ಸಿದ್ಧವಾಯಿತು. ಇದರಿಂದಾಗಿ ರಾಷ್ಟ್ರೀಯ ಹೋರಾಟದ ಬಗ್ಗೆ ಸಾಮುದಾಯಿಕ ಪ್ರಜ್ಞೆ ಮೂಡತೊಡಗಿತ್ತು.[೬೬] ಹೀಗೆ ತುಮಕೂರು ಜಿಲ್ಲೆಯಲ್ಲಿ ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳನ್ನು ಕಾರ್ಯ ರೂಪಕ್ಕೆ ತರುವುದರಲ್ಲಿ ದೇಶೀಯ ವಿದ್ಯಾಪೀಠದ ಪ್ರೌಢಶಾಲೆಯು ಅಗ್ರ ಸ್ಥಾನವನ್ನು ಪಡೆದುಕೊಂಡಿದೆ.

## ಹಿಂದೂ-ಮುಸ್ಲಿಮ್ ಐಕ್ಯತೆ

ಹಿಂದೂ-ಮುಸ್ಲಿಮ್ ಐಕ್ಯತೆ ಗಾಂಧೀಜಿಯವರ ರಚನಾತ್ಮಕ ಕಾರ್ಯಕ್ರಮಗಳಲ್ಲಿ ಒಂದಾಗಿದೆ. ಹಿಂದೂ-ಮುಸ್ಲಿಮ್ ಐಕ್ಯತೆ, ರಾಟಿಯಷ್ಟೆ ಬಾಳಿನ ಉಸಿರು, ಅದು ಸ್ವರಾಜ್ಯ ಸ್ಥಾಪನೆಗೆ ಹಿಂದೂ-ಮುಸ್ಲಿಮ್ ಐಕ್ಯತೆ ಅತ್ಯಗತ್ಯ. ಸ್ವರಾಜ್ಯ ಪ್ರಾಪ್ತಿಯಾಗಬೇಕಾದರೆ ತಮ್ಮ ತಮ್ಮಲ್ಲಿನ ಭಿನ್ನಾಭಿಪ್ರಾಯಗಳನ್ನು ಮರೆತು ಐಕ್ಯತೆಯಿಂದ ಬಾಳಬೇಕು. ಹಿಂದೂ-ಮುಸ್ಲಿಮ್ ಐಕ್ಯತೆ ಎಂದರೆ ಹಿಂದೂ-ಮುಸ್ಲಿಮ್, ಕ್ರಿಶ್ಚಿಯನ್, ಪಾರ್ಸಿ ಇತ್ಯಾದಿ ಜನಾಂಗದವರೆಲ್ಲ ಕೂಡಿಯೇ ಹಿಂದೂಸ್ಥಾನವಾಗಿದೆ. ಇವರುಗಳಲ್ಲಿ ಯಾರನ್ನು ಕಡೆಗಣಿಸಿದರು ಅವರಿಗೆ ರಚನಾತ್ಮಕ ಕಾರ್ಯಗಳು ಗೊತ್ತಿಲ್ಲ[೬೭] ಎಂದೇ ಅರ್ಥ ಎಂದು ಗಾಂಧೀಜಿಯವರು ನವಭಾರತ ಪತ್ರಿಕೆಯಲ್ಲಿ ಬರೆದಿದ್ದಾರೆ.

ಮಹಾತ್ಮ ಗಾಂಧೀಜಿಯವರು ಕೋಮು ಐಕ್ಯತೆಗೆ ತಮ್ಮ ರಚನಾತ್ಮಕ ಕಾರ್ಯಕ್ರಮದಲ್ಲೇ ಪ್ರಥಮಸ್ಥಾನ ಕೊಟ್ಟಿದ್ದಾರೆ. ಗಾಂಧೀಜಿಯವರು ಐಕ್ಯತೆಯ ಬಗ್ಗೆ ಹೇಳುತ್ತಾ ಸರ್ವಧರ್ಮೀಯರ ಐಕ್ಯಮತ್ಯ ಅಗತ್ಯ ಎಂದು ಎಲ್ಲರೂ ಒಪ್ಪುತ್ತಾರೆ. ಆದರೆ ರಾಜಕೀಯ ಬಲತ್ಕಾರದಿಂದ ಸೇರುವುದು ಐಕ್ಯಮತ್ಯವಲ್ಲ, ಅವಿಚ್ಛಿನ್ನವಾದ ಸ್ನೇಹ, ಸೌಹಾರ್ದ ಬೆಳೆಸಿಕೊಳ್ಳುವುದು ಐಕ್ಯತೆ, ಹಿಂದೂ-ಮುಸ್ಲಿಮ್, ಕ್ರೈಸ್ತ, ಪಾರ್ಸಿ, ಯಹೂದಿ ಎಲ್ಲರಿಗೂ ತಾನು ಸಮಾನವಾದ ಪ್ರತಿನಿಧಿ ಎಂದು ನಾಯಕರು ಭಾವಿಸಬೇಕು. ತನ್ನ ಧರ್ಮಕ್ಕೆ ತಾನು ತೋರುವ ಗೌರವವನ್ನೇ ಇತರ

ಎಲ್ಲ ಧರ್ಮಗಳಿಗೂ ಅನ್ವಯಿಸಬೇಕು. ಅದೇ ಸಂತೋಷದಾಯಕ[೧೮] ಸ್ಥಿತಿ ಎಂದು ಸ್ಪಷ್ಟ ಪಡಿಸಿದರು.

ಗಾಂಧೀಜಿಯವರ ಹಿಂದೂ-ಮುಸ್ಲಿಮ್ ಐಕ್ಯತೆಯ ಅಂಶವನ್ನು ತುಮಕೂರು ಜಿಲ್ಲೆಯ ಕಾಂಗ್ರೆಸ್ ಕಾರ್ಯಕರ್ತರಾದ ಗುಬ್ಬಿ ಹುಚ್ಚಪ್ಪ, ಸೆಟ್ಲೂರ್, ಪುಟ್ಟಮುದ್ದಯ್ಯ, ಗಫಾರಖಾನ್, ಕೆ.ವಿ. ಕೃಷ್ಣಸ್ವಾಮಿ ಇನ್ನು ಮುಂತಾದವರು ಪ್ರಚಾರ ಕೈಗೊಂಡಿದ್ದರು. ೧೯೩೨ ಜನವರಿ ೨೯ ರಂದು ಪೆಷಾವರ್ ಡೇ ಪ್ರಯುಕ್ತ ಸಾರ್ವಜನಿಕ ಸಭೆಯನ್ನು ತುಮಕೂರಿನಲ್ಲಿ ಕರೆಯಲಾಗಿತ್ತು. ಆ ಸಭೆಯಲ್ಲಿ ಗುಬ್ಬಿ ಹುಚ್ಚಪ್ಪ, ಸೆಟ್ಲೂರ್, ಪುಟ್ಟಮುದ್ದಯ್ಯ, ಗಫಾರಖಾನ್‌ರವರು ಹಿಂದೂ, ಮುಸ್ಲಿಮ್ ಭೇದವನ್ನು ಮರೆತು ನಾವೆಲ್ಲರೂ ಒಂದೇ ಎಂಬ ಐಕ್ಯತಾ ಭಾವನೆಯಿಂದ ಒಂದಾಗಿ ಕಾಂಗ್ರೆಸ್‌ನ ಸಂದೇಶವನ್ನು ಸಾರಿ ಸ್ವರಾಜ್ಯ ಪ್ರಾಪ್ತಿಗೆ ಪ್ರಯತ್ನಿಸಬೇಕೆಂದು[೧೯] ಜನತೆಯನ್ನು ಕುರಿತು ಮಾತನಾಡಿದರು. ಅದೇ ರೀತಿಯಾಗಿ ತುಮಕೂರಿನ ಟಿ. ಮಹಮ್ಮದ್ ಅಬೀಬ್ ಸಾಹೇಬರು, ಮಹಮ್ಮದ್ ನೂರುಲ್ಲಾ ಸಾಹೇಬರು ನಿಷ್ಠಾವಂತ ಮುಸ್ಲಿಮ್‌ರಾಗಿದ್ದರೂ ಸಹ ಹಿಂದೂ ಧರ್ಮದಲ್ಲಿ ಹಿಂದೂ ಗಳೊಡನೆ ಮೈತ್ರಿಯುತರಾಗಿ ಪ್ರೇಮಮಯರಾಗಿ ಜೀವನ ನಡೆಸಿಕೊಂಡು ಹೋಗುತ್ತಿದ್ದು ಅಲ್ಲದೇ ಹಿಂದೂ-ಮುಸ್ಲಿಮ್ ಐಕ್ಯತೆಯಿಂದಿದ್ದರೆ ಸ್ವರಾಜ್ಯವನ್ನು ಬಹುಬೇಗ ಪಡೆಯುತ್ತೇವೆ[೨೦] ಎಂದು ತುಮಕೂರಿನ ಸಾರ್ವಜನಿಕರಲ್ಲಿ ಪ್ರಚಾರ ಕೈಗೊಂಡಿದ್ದರು.

ತುಮಕೂರು ಜಿಲ್ಲೆಯ ಕಾಂಗ್ರೆಸ್ ನಾಯಕರು ಸಂಸ್ಥಾನದ ನಾಯಕರನ್ನು ಆಹ್ವಾನಿಸಿ ಹಿಂದೂ-ಮುಸ್ಲಿಮ್ ಐಕ್ಯತೆಯ ಬಗ್ಗೆ ತಮ್ಮ ಉಪನ್ಯಾಸಗಳ ಮೂಲಕ ಜನತೆಯಲ್ಲಿ ಅರಿವು ಮೂಡಿಸುತ್ತಿದ್ದರು. ಅಲ್ಲದೇ ಕಾಂಗ್ರೆಸ್ ಸಭೆಗಳಲ್ಲಿಯೂ ಸಹ ಹಿಂದೂ-ಮುಸ್ಲಿಮ್ ಐಕ್ಯತೆ ಯ ಬಗ್ಗೆ ತಮ್ಮ ಅಭಿಪ್ರಾಯಗಳ ಮೂಲಕ ಪ್ರಚಾರ ಕೈಗೊಂಡಿದ್ದರು. ೩-೩-೧೯೩೮ ರಂದು ಕುಣಿಗಲ್ ತಾಲ್ಲೂಕಿನ ಎಲೆಯೂರಿನಲ್ಲಿ ನಡೆದ ಜಿಲ್ಲಾ ಕಾಂಗ್ರೆಸ್ ಅಧಿವೇಶನದಲ್ಲಿ ಗುರುರಾಜರಾವ್ ರವರು ತಮ್ಮ ಭಾಷಣದಲ್ಲಿ ಭಾರತದ (ಅಂದಿನ) ೩೬ ಕೋಟಿ ಜನತೆಯಲ್ಲಿ, ೯ ಕೋಟಿ ಹರಿಜನರು, ೧೫ ಕೋಟಿ ಮುಸ್ಲಿಮ್‌ರು ವಾಸಿಸುತ್ತಿದ್ದಾರೆ. ಆದರೆ ಬ್ರಿಟಿಷರು ಪ್ರತ್ಯೇಕ ಮತ ಕ್ಷೇತ್ರಗಳನ್ನು ಸೃಷ್ಟಿಸಿ ಹಿಂದೂ-ಮುಸ್ಲಿಮ್ ಐಕ್ಯತೆಯನ್ನು ಹಾಳು ಮಾಡುತ್ತಿದ್ದಾರೆ ಬ್ರಿಟಿಷ್‌ರ ಈ ನೀತಿಗೆ ಎಲ್ಲಾ ಜನಾಂಗಗಳ ಜನತೆಯು ಏಕತೆಯಿಂದ ಕೊಡಲಿ ಪೆಟ್ಟು ನೀಡಬೇಕು[೨೧] ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತ ಪಡಿಸಿದರು. ಅನಂತರ ೧೯೪೭ ರ ಭಾರತ ವಿಭಜನೆಯ ಸಂದರ್ಭದಲ್ಲಿ ಕುಣಿಗಲ್ಲಿನಲ್ಲಿ ೨/೫ ಭಾಗ ಮುಸ್ಲಿಮ್‌ರಿದ್ದರೂ ಆದುದರಿಂದ ಇಲ್ಲಿ ಹಿಂದೂ-ಮುಸ್ಲಿಮ್ ಘರ್ಷಣೆಯಾಗದಂತೆ ಕೆ.ವಿ. ಕೃಷ್ಣಸ್ವಾಮಿಯವರು ತಮ್ಮ ಪ್ರಯತ್ನದಿಂದ ನಿಲ್ಲಿಸಿದರು.[೨೨] ಈ ರೀತಿಯಾಗಿ ತುಮಕೂರು ಜಿಲ್ಲೆಯಲ್ಲಿ ಗಾಂಧೀಜಿಯವರ

ಹಿಂದೂ-ಮುಸ್ಲಿಮ್ ಐಕ್ಯತೆಯ ಕಾರ್ಯಕ್ರಮವನ್ನು ಜಿಲ್ಲೆಯ ಕಾಂಗ್ರೆಸ್ಸಿನ ನಾಯಕರು ಪ್ರಚಾರ ಕೈಗೊಂಡಿದ್ದರು.

ಗ್ರಾಮ ನೈರ್ಮಲ್ಯ: ಗ್ರಾಮೀಣಾಭಿವೃದ್ಧಿಯ ಕಾರ್ಯದಲ್ಲಿ ಗ್ರಾಮಗಳ ಸ್ವಚ್ಛತೆಯನ್ನು ಸೇರಿಸ ದಿದ್ದರೆ, ನಮ್ಮ ಗ್ರಾಮಗಳು ಕಸದ ಗುಂಪುಗಳಾಗಿಯೇ ಉಳಿಯುತ್ತವೆ. ಹಳ್ಳಿಯ ಸ್ವಚ್ಛತೆ ಅಲ್ಲಿಯ ಜೀವನದ ಮಹತ್ವದ ಅಂಶವಾಗಿದೆ. ಅದು ಮಹತ್ವದಿದ್ದಷ್ಟೇ ಕಠಿಣವೂ ಹೌದು. ತಲೆತಲಾಂತರಗಳಿಂದ ಬಂದ ಹೊಲಸನ್ನು ಉಚ್ಚಾಟನೆಗೊಳಿಸಲು ಗಂಭೀರವಾಗಿ ಪ್ರಯತ್ನಿಸಬೇಕು. ಹಳ್ಳಿಯ ಕಾರ್ಯಕರ್ತನಿಗೆ ಹಳ್ಳಿಯ ಸ್ವಚ್ಛತೆಯ ಶಾಸ್ತ್ರೀಯ ಜ್ಞಾನವಿರದಿದ್ದರೆ, ಆತನು ನುರಿತ ಭಂಗಿಯಾಗಿದರೂ, ಗ್ರಾಮ ಸ್ವಚ್ಛತೆಯ ಸೇವೆಯ ಕಾರ್ಯ ಅವನಿಂದ ಮಾಡಲು ಸಾಧ್ಯವಾಗಲಾರದು[೩] ಎಂಬುದು ಗಾಂಧೀಜಿಯವರ ಅಭಿಪ್ರಾಯ.

ಗ್ರಾಮೀಣ ಪ್ರದೇಶಗಳ ಅಭಿವೃದ್ಧಿಯಲ್ಲಿ ಗ್ರಾಮಗಳ ನೈರ್ಮಲ್ಯಕ್ಕೆ, ಅಗತ್ಯವಾದ ಪ್ರಮಾಣದಲ್ಲಿ ಗಮನ ನೀಡಬೇಕು. ಪ್ರತಿಯೊಬ್ಬ ಗ್ರಾಮೀಣ ಪ್ರಜೆಯೂ ಗ್ರಾಮ ನೈರ್ಮಲ್ಯ ಮತ್ತು ಆರೋಗ್ಯ ನಿಯಮಗಳನ್ನು ಶ್ರದ್ಧೆಯಿಂದ ಪಾಲಿಸಬೇಕು ಎಂದು ಗಾಂಧೀಜಿ ಆಶಿಸಿದರು. ಎಲ್ಲೆಂದರಲ್ಲಿ ಉಗುಳುವುದು, ಕಸಕಡ್ಡಿಗಳನ್ನು ಎಸೆಯುವುದು, ತಮ್ಮ ಮನೆಯಲ್ಲಿ ಸತ್ತುಬಿದ್ದ ಪ್ರಾಣಿಗಳನ್ನು ತಂದು ಬೀದಿಯಲ್ಲಿ ಹಾಕುವುದು, ತಮ್ಮ ದನಕರುಗಳ ಸಗಣಿಗಳನ್ನು ಹಾಕುತ್ತಾ ಒಂದು ತಿಪ್ಪೆಗಳನ್ನು ನಿರ್ಮಿಸುವುದರಿಂದ, ಮೂತ್ರವನ್ನು ಮಾಡುವುದರಿಂದ ಗ್ರಾಮಗಳು ಅಶುದ್ಧವಾಗುತ್ತವೆ. ಈ ರೀತಿ ಮಾಡುವುದರಿಂದ ಜನರಿಗೆ ಮತ್ತು ಪ್ರಕೃತಿಗೆ ಅಪಚಾರವೆಸಗಿದಂತೆ ಮತ್ತು ಮಹಾ ಪಾಪವೆಸಗಿದಂತೆ ಎಂದು ಗಾಂಧೀಜಿ ತಿಳಿಸಿದ್ದಾರೆ.[೪]

ತುಮಕೂರು ಜಿಲ್ಲೆಯಲ್ಲಿ ಗಾಂಧೀಜಿಯವರ ಗ್ರಾಮ ನೈರ್ಮಲ್ಯಕ್ಕೆ ಸಂಬಂಧಿಸಿದ ಸುಧಾರಣೆಗಳನ್ನು ಹಮ್ಮಿಕೊಂಡು ಜನತೆಯಲ್ಲಿ ಅರಿವು ಮೂಡಿಸಿದ್ದರು. ೧೯೨೭ ಜುಲೈ ೧೪ ರಂದು ಗಾಂಧೀಜಿಯವರು ತುಮಕೂರಿಗೆ ಭೇಟಿ ನೀಡಿದಾಗ ಆರೋಗ್ಯ ಶುಚಿತ್ವ, ನೈರ್ಮಲ್ಯದ ಬಗ್ಗೆ ಭಾಷಣದಲ್ಲಿ ತಿಳಿಸಿದರು. ಅಂದು ತುಮಕೂರಿನ ಜನತೆಯನ್ನು ಕುರಿತು "ನೀವೇ ಸ್ವತಃ ಕೈಯಲ್ಲಿ ಪೊರಕೆ, ಬಕೆಟ್ಟುಗಳನ್ನು ಹಿಡಿದುಕೊಂಡು ತುಮಕೂರನ್ನು ಸ್ವಚ್ಛಗೊಳಿಸಬೇಕು" ಎಂದು ಜನತೆಗೆ ತಿಳಿಸಿದರು. ಅವರು ಅಂದು ಪಾಶ್ಚಿಮಾತ್ಯ ಸಂಸ್ಕೃತಿಯನ್ನು ಎಷ್ಟೋ ನಿಂದನೆ ಮಾಡಿದ್ದರೂ, ಅವರ ಸ್ವಚ್ಛತೆ ಅನುಕರಣೀಯ ಎಂದು ಹೇಳಿದರು. ಅಸ್ವಚ್ಛತೆಗೆ ಸಾಕ್ಷಿ ಎಂದರೆ ನಮ್ಮ ಪಾಯಖಾನೆಗಳ(ಕಕ್ಕಸುಗಳ) ಸ್ಥಿತಿ. ನಮ್ಮ ಪಾಯಖಾನೆಗಳು ಬಹಳ ಘೋರ ಸ್ಥಿತಿಯಲ್ಲಿವೆ, ಅವುಗಳನ್ನು ಸರಿಪಡಿಸಿಕೊಳ್ಳದ ಹೊರತು ಆರೋಗ್ಯ, ಶುಚಿತ್ವ ಸಾಧ್ಯವಿಲ್ಲ[೫]" ಎಂದು ಹೇಳಿದರು. ೧೯೪೧ ನವೆಂಬರ ೨೪ ರಂದು ಮೈಸೂರು ಸಂಸ್ಥಾನದ ಆರೋಗ್ಯ ಶಾಖ ಮಂತ್ರಿಗಳಾದ ಹೆಚ್.ಬಿ. ಗುಂಡಪ್ಪಗೌಡರು ತುಮಕೂರಿಗೆ ಭೇಟಿ ನೀಡಿ ಇಲ್ಲಿನ ಆರೋಗ್ಯ

ಮತ್ತು ನೈರ್ಮಲ್ಯದ ಬಗ್ಗೆ ಮೆಚ್ಚಿಗೆ ವ್ಯಕ್ತಪಡಿಸಿದರು. ಪುರಸಭೆಯವರು ನೀಡಿದ ಭಿನ್ನವತ್ತಳೆಗೆ ಉತ್ತರಿಸುತ್ತಾ ಅವರು "ಇಡೀ ಮೈಸೂರು ಸಂಸ್ಥಾನದಲ್ಲಿಯೇ ತುಮಕೂರು ಪಟ್ಟಣವು ಆರೋಗ್ಯ ಮತ್ತು ನೈರ್ಮಲ್ಯದ ವಿಷಯದಲ್ಲಿ ೪ ನೇ ಸ್ಥಾನ ಪಡೆದಿರುವುದು ಸಂತೋಷದ ಸಂಗತಿಯಾಗಿದೆ ಎಂದು ಮೆಚ್ಚಿಗೆಯನ್ನು ವ್ಯಕ್ತಪಡಿಸಿದರು. ಪುರಸಭೆಯು ೨೨ ವರ್ಷಗಳಿಂದ ಅಧ್ಯಕ್ಷರನ್ನು ಹೊಂದಿದ್ದು ಜನರ ಆರೋಗ್ಯ ಯೋಗಕ್ಷೇಮ, ಬಡಾವಣೆಗಳಲ್ಲಿ ಸ್ವಚ್ಛತೆ, ನೈರ್ಮಲ್ಯ ವಿಚಾರದಲ್ಲಿ ಶ್ರಮಿಸುತ್ತಿದ್ದಾರೆ[೬೬] ಎಂದು ತುಮಕೂರು ಪುರಸಭೆಯು ಕೈಗೊಂಡಿದ ಆರೋಗ್ಯ, ನೈರ್ಮಲ್ಯ ಚಟುವಟಿಕೆಗಳನ್ನು ಕುರಿತು ಜನತೆಗೆ ಭಾಷಣದಲ್ಲಿ ತಿಳಿಸಿದರು.

೧೯೬೯ರಲ್ಲಿ ಸ್ಥಾಪಿತವಾದ ಬಾಪೂಜಿ ವಿದ್ಯಾಸಂಸ್ಥೆಯ ವಿದ್ಯಾರ್ಥಿಗಳು ಪ್ರಾರಂಭದಲ್ಲಿ ೧೦–೧೫ ವರ್ಷಗಳ ಅವಧಿಯಲ್ಲಿ ತುಮಕೂರಿನ ರಸ್ತೆಗಳ ಅಕ್ಕಪಕ್ಕಗಳಲ್ಲಿ ಗಿಡಗಳನ್ನು ನೆಡೆಸುವುದು, ಕೊಳಚೆ ವಸ್ತುಗಳನ್ನು ತೆಗೆದು ಸ್ವಚ್ಛತೆಯನ್ನು ಮಾಡುವುದು ಮುಂತಾದ ಕೆಲಸಗಳನ್ನು ಮಾಡುವುದರ ಮೂಲಕ ಗ್ರಾಮ ನೈರ್ಮಲ್ಯದ ಬಗ್ಗೆ ಅರಿವು ಮೂಡಿಸಿದರು. ಇದು ಅಲ್ಲದೇ ಹರಿಜನ ಕಾಲೋನಿಯಾದ ನರಸಿಂಹರಾಜ ಕಾಲೋನಿಯಲ್ಲಿ ವಿದ್ಯಾರ್ಥಿಗಳು ಸೇವಾದಳದ ಶಿಬಿರ ನಡೆಸಿ ಅಲ್ಲಿ ಕೊಳಚೆ ನಿರ್ಮೂಲನೆಯನ್ನು ಮಾಡಿದರು. ನಂತರ ಅಲ್ಲಿನ ಜನತೆಗೆ ಆರೋಗ್ಯ ಮತ್ತು ಶುಚಿತ್ವದ ಬಗ್ಗೆ ತಿಳುವಳಿಕೆ ನೀಡಿದರು. ಈ ರೀತಿಯಾಗಿ ವಿದ್ಯಾರ್ಥಿಗಳು ಸಾಮೂಹಿಕವಾಗಿ ಸೇವಾದಳದ ಶಿಬಿರದಿಂದ ಗಾಂಧೀಜಿಯವರ ಆರೋಗ್ಯ ಮತ್ತು ನೈರ್ಮಲ್ಯ, ಒಳ ಚರಂಡಿಯನ್ನು ಸ್ವಚ್ಛತೆಗೊಳಿಸುವ ಕಾರ್ಯದಲ್ಲಿ ಭಾಗವಹಿಸಿ ಯಶಸ್ವಿಗೊಳಿಸಲು ಮುಂದಾದರು.[೭೭]

ಗಾಂಧೀಜಿಯವರ ಗ್ರಾಮಸ್ವಚ್ಛತೆ, ಶುಚಿತ್ವ, ಗ್ರಾಮ ನೈರ್ಮಲ್ಯೀಕರಣ ಕಾರ್ಯಕ್ರಮಗಳನ್ನು ಇಂದು ಆಯಾಯ ಜಿಲ್ಲಾ ಪಂಚಾಯತ್, ತಾಲ್ಲೂಕ್ ಪಂಚಾಯತ್, ಗ್ರಾಮ ಪಂಚಾಯ್ತಿಗಳ ಮೂಲಕ ನಡೆಸಲು ಕ್ರಮ ಕೈಗೊಳ್ಳಲಾಗಿದೆ. ಇಂದು ಜಿಲ್ಲೆಯಲ್ಲಿ ಜಿಲ್ಲಾ ಪಂಚಾಯ್ತಿಯ ಮೂಲಕ ಸ್ವಚ್ಛ ಗ್ರಾಮ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ.

ಅಡಿಟಿಪ್ಪಣಿಗಳು

೧. ಆಚಾರ್ಯ ಕೆ.ಎಸ್, ಗಾಂಧೀ ವಿಚಾರಧಾರೆ, ಗಾಂಧೀ ವಿಜ್ಞಾನ ಟ್ರಸ್ಟ್, ಬೆಂಗಳೂರು, ೧೯೩೩, ಪು.೫೨

೨. ಬಸವರಾಜು ಎಂ.ಜಿ. (ಲೇ), ಗಾಂಧೀಜಿ ದೃಷ್ಟಿಯಲ್ಲಿ ಗ್ರಾಮೀಣಾಭಿವೃದ್ಧಿ, ಕಮಲೇಶ್ ಕೆ.ಆರ್.(ಸಂ), ಕರ್ನಾಟಕದಲ್ಲಿ ಗ್ರಾಮೀಣಾಭಿವೃದ್ಧಿ, ಗ್ರಾಮಚೇತನ, ಎಂ.ವಿ. ರಾಜಶೇಖರನ್ ಅಭಿನಂದನಾ ಗ್ರಂಥ ಸಮಿತಿ, ಬೆಂಗಳೂರು, ೨೦೦೫, ಪು.೫೧

೩. ಚಂದ್ರಶೇಖರ್ ಕೆ., ಮಹಾತ್ಮ ಗಾಂಧೀಜಿ ಮತ್ತು ಗ್ರಾಮ ಸ್ವರಾಜ್ಯ, ಪ್ರಸಾರಾಂಗ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ, ಶಿವಮೊಗ್ಗ, ೨೦೦೧, ಪು.೧೫– ೧೬

೪. ಪ್ರಜಾವಾಣಿ ಪತ್ರಿಕೆ, ದಿನಾಂಕ ೩೦–೯–೨೦೦೧, ಪು.೩

೫. ಜವರೇಗೌಡ ದೇ(ಸಂ), ಸರ್ವೋದಯ ಪಥ, ಜ.ವಿ.ನಾ. ಅಭಿನಂದನಾ ಗ್ರಂಥ ಸಮಿತಿ, ಚಿಕ್ಕನಾಯಕನಹಳ್ಳಿ, ೧೯೮೨, ಪು.೫೯೧

೬. ಬಸವರಾಜು ಎಂ.ಜಿ. (ಲೇ), ಪೂರ್ವೋಕ್ತ, ೨೦೦೫, ಪು.೫೨

೭. ಮಾಲಿಮುದ್ದಣ್ಣ, ಮಾಲಿಮರಿಯಪ್ಪ, ಸಾಹಿತ್ಯಾಲಯ, ಗಾಂಧೀನಗರ, ತುಮಕೂರು,೧೯೯೬, ಪು.೨೬

೮. ಸೂರ್ಯನಾಥ ಕಾಮತ್(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂಪುಟ–೨, ಗೀತಾಬುಕ್ ಹೌಸ್, ಮೈಸೂರು ೧೯೭೭, ಪು.೪೯೬

೯. ಮಾಲಿಮುದ್ದಣ, ಪೂರ್ವೋಕ್ತ, ೧೯೯೬, ಪು.೩೦–೩೧

೧೦. ನಟರಾಜನ್ ಸಂಗ್ರಹ, ತುಮಕೂರಿನ ಕೈಪಿಡಿ, ಖಾಸಗೀ ದಾಖಲೆ [ಕ.ರಾ.ಪ.ಇ.] ಬೆಂಗಳೂರು, ಪು. ೧೨೩–೧೨೬

೧೧. ಚಿಕ್ಕಣ್ಣ ಎನ್, ಎಂ. ಪುಟ್ಟತಿಮ್ಮಯ್ಯ, ಗಾಂಧೀ ಅಧ್ಯಯನ ಮಾಲೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೨೦೦೬, ಪು. ೧೬

೧೨. ಮೂಡ್ಲ ಗಿರೀಶ್ ಎಂ.ವಿ., ಮಧುಗಿರಿ ಗಾಂಧಿ ಎಂ. ಪುಟ್ಟತಿಮ್ಮಯ್ಯ, ಮಧುಗಿರಿ, ೨೦೦೨, ಪು.೨೪

೧೩. ಚಿಕ್ಕಣ್ಣ ಎನ್., ಎಂ. ಪುಟ್ಟತಿಮ್ಮಯ್ಯ, ಗಾಂಧೀ ಅಧ್ಯಯನ ಮಾಲೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೨೦೦೬, ಪು.೧೮

೧೪. ಕವಿತಾಕೃಷ್ಣ, ಸರ್ವೋದಯ ಕಿರಣ ಟಿ.ಎ. ದಾಸಪ್ಪ, ರಾಕ್‌ಲೈನ್ ಪ್ರಕಾಶನ, ಕ್ಯಾತ್ಸಂದ್ರ, ತುಮಕೂರು, ೨೦೦೧, ಪು.೩೦–೩೧

೧೫. ಸೂರ್ಯನಾಥ ಕಾಮತ್(ಸಂ), ಪೂರ್ವೋಕ್ತ, ಸಂಪುಟ–೩, ೧೯೮೦, ಪು.೮೯೪

೧೬. ಅದೇ ಪು.೮೫೪

೧೭. ಕೃಷ್ಣಪ್ಪ ಸಿ., ಖಾದಿಗಂಗಪ್ಪ, ಗಾಂಧೀ ಅಧ್ಯಯನ ಮಾಲೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೨೦೦೬, ಪು.೨೦–೨೨

೧೮. ಕೃಷ್ಣಸ್ವಾಮಿ(ಲೇ), ಗಾಂಧೀಜಿಯವರ ೧೨೫ ನೇ ಜನ್ಮದಿನೋತ್ಸವದ ಸ್ಮರಣ ಸಂಚಿಕೆ, ಕರ್ನಾಟಕ ರಾಜ್ಯ ಗಾಂಧೀ ಸ್ಮಾರಕ ನಿಧಿ, ಬೆಂಗಳೂರು, ೧೯೯೫, ಪು.೨೦

೧೯. ಜವರೇಗೌಡ ದೇ(ಸಂ), ಪೂರ್ವೋಕ್ತ, ೧೯೮೨, ಪು.೧೨೧

೨೦. ಬಸವರಾಜು ಎಂ.ಜಿ. (ಲೇ), ಪೂರ್ವೋಕ್ತ, ೨೦೦೫, ಪು.೫೨

೨೧. ಜವರೇಗೌಡ ದೇ(ಸಂ), ಪೂರ್ವೋಕ್ತ, ೧೯೮೨, ಪು. ೧೮೯

೨೨. ಅದೇ ಪು.೫೨೨

೨೩. ಅದೇ ಪು.೨೪

೨೪. ಅದೇ ಪು.೧೦೭

೨೫. ಅದೇ ಪು.೩೩

೨೬. ಅದೇ ಪು.೨೪–೨೫

೨೭. ಅದೇ ಪು.೧೨೮–೧೨೯

೨೮. ತಿರುಮಲೆ ಅನಂತರಂಗಾಚಾರ್(ಅನು), ತುಮಕೂರು ಜಿಲ್ಲೆಯಲ್ಲಿ ಪೂಜ್ಯ ವಿನೋಬಾ, ಗಾಂಧೀ ವಿಚಾರ ಪರಿಷತ್, ತುಮಕೂರು, ೧೯೫೭, ಪು.೧–೫

೨೯. ಅದೇ ಪು.೬

೩೦. ನಂಜುಂಡಸ್ವಾಮಿ ಬಿ.(ಸಂ), ಧಾನ್ಯಲಕ್ಷ್ಮಿ ವಜ್ರ ಮಹೋತ್ಸವದ ಸ್ಮರಣ ಸಂಚಿಕೆ, ೧೯೨೬–೨೦೦೧, ಧಾನ್ಯ ವ್ಯಾಪಾರಿಗಳ ಸಂಘ(ರಿ), ವಜ್ರ ಮಹೋತ್ಸವ ಸಮಿತಿ, ತುಮಕೂರು, ೨೦೦೧, ಪು.೧

೩೧. ಮಾದೇವ್ ಭರಣಿ, ಶಿಕ್ಷಣ ಭೀಷ್ಮ ಸಿದ್ಧಾರ್ಥ ಶಿಕ್ಷಣ ಸಂಸ್ಥೆ, ಸಿದ್ಧಾರ್ಥನಗರ, ತುಮಕೂರು, ೧೯೯೪, ಪು.೭೪

೩೨. ತಿರುಮಲೆ ಅನಂತರಂಗಾಚಾರ್(ಅನು), ಪೂರ್ವೋಕ್ತ, ೧೯೫೭, ಪು.೮೩

೩೩. ಕೃಷ್ಣಪ್ಪ ಸಿ. ಪೂರ್ವೋಕ್ತ, ೨೦೦೬, ಪು.–೧೯

೩೪. ದೊರೆಸ್ವಾಮಿ ಹೆಚ್.ಎಸ್., ನೆನಪಿನ ಸುರುಳಿ ತೆಗೆದಾಗ, ಸುವಿದ್ಯಾ ಪ್ರಕಾಶನ, ಬೆಂಗಳೂರು, ೧೯೯೭, ಪು.೧೩೨–೧೩೩

೩೫. ಮೂಡ್ಲಗಿರೀಶ್ ಎಂ.ವಿ, ಪೂರ್ವೋಕ್ತ, ೨೦೦೨, ಪು.೨೦–೨೧

೩೬. ಚಿಕ್ಕಣ್ಣ ಎನ್ (ಲೇ), ಪೂರ್ವೋಕ್ತ, ೨೦೦೬, ಪು.೧೪

೩೭. ಮೂಡ್ಲಗಿರೀಶ್ ಎಂ.ವಿ, ಪೂರ್ವೋಕ್ತ, ೨೦೦೨, ಪು.೨೩

೩೮. ಕವಿತಾಕೃಷ್ಣ, ಪೂರ್ವೋಕ್ತ, ೨೦೦೧, ಪು.೪೬

೩೯. ಪುಟ್ಟಗಂಗಮ್ಮ ಬಿ.ಆರ್, ಕೆ.ಎಸ್.ರಾಜಪ್ಪನವರ ಜೀವನ ಚರಿತ್ರೆ ಸಾಧನೆ ಮತ್ತು ಸಿದ್ಧಿ ಬೆಂಗಳೂರು, ೨೦೦೧, ಪು.೧೮

೪೦. ಅದೇ ಪು.೬೬

೪೧. ಬಸವರಾಜು ಎಂ.ಜಿ. (ಲೇ), ಪೂರ್ವೋಕ್ತ, ೨೦೦೫, ಪು.೫೬-೫೭

೪೨. ಮೈಸೂರ್ ಸ್ಟಾರ್ ಪತ್ರಿಕೆ, ದಿನಾಂಕ ೨-೧೨-೧೯೨೪ [ಕ.ರಾ.ಪ.ಇ] ಬೆಂಗಳೂರು

೪೩. ನಂಜುಂಡಸ್ವಾಮಿ, ಬಿ.(ಸಂ), ಪೂರ್ವೋಕ್ತ, ೨೦೦೧, ಪು.೧

೪೪. ಸಿದ್ಧವ್ವನಹಳ್ಳಿ ಕೃಷ್ಣಶರ್ಮ(ಸಂ), ಗಾಂಧೀ ಮತ್ತು ಕರ್ನಾಟಕ, ಗಾಂಧೀ ಸ್ಮಾರಕ ನಿಧಿ, ಬೆಂಗಳೂರು, ೧೯೬೯, ಪು.೧೯೫

೪೫. ಮಾದೇವ್ ಭರಣಿ, ಪೂರ್ವೋಕ್ತ, ೧೯೯೪, ಪು.೧೪

೪೬. ಅದೇ ಪು.೪೭

೪೭. ಪುಟ್ಟಗಂಗಮ್ಮ ಬಿ.ಆರ್., ಪೂರ್ವೋಕ್ತ, ೨೦೦೧, ಪು.೧೧೫

೪೮. ನಟರಾಜನ್ ಸಂಗ್ರಹ, ಪೂರ್ವೋಕ್ತ, ಪು.೧೨೭

೪೯. ನಂಜುಂಡಸ್ವಾಮಿ ಬಿ.(ಸಂ), ಪೂರ್ವೋಕ್ತ, ೨೦೦೧, ಪು.೩೨೦

೫೦. ಸತ್ಯವಾದಿ ಪತ್ರಿಕೆ, ದಿನಾಂಕ ೧೨-೬-೧೯೬೩ [ಕ.ರಾ.ಪ.ಇ] ಬೆಂಗಳೂರು

೫೧. ನಂಜುಂಡಸ್ವಾಮಿ ಬಿ.(ಸಂ), ಬಹುಧಾನ್ಯ ಸಿರಿ-ಸ್ಮರಣ ಸಂಚಿಕೆ, ಧಾನ್ಯ ವ್ಯಾಪಾರಿಗಳ ಸಂಘ(ರಿ), ವಜ್ರಮಹೋತ್ಸವದ ಸಮಿತಿ, ತುಮಕೂರು, ೧೯೯೮, ಪು.೪೦

೫೨. ಕವಿತಾಕೃಷ್ಣ, ಪೂರ್ವೋಕ್ತ, ೨೦೦೧, ಪು.೮೯

೫೩. ಸಿದ್ಧವ್ವನಹಳ್ಳಿ ಕೃಷ್ಣಶರ್ಮ(ಸಂ), ಪೂರ್ವೋಕ್ತ, ೧೯೬೯, ಪು.೨೧೦

೫೪. ಸೂರ್ಯನಾಥ ಕಾಮತ್(ಸಂ), ಪೂರ್ವೋಕ್ತ, ೧೯೭೭, ಪು.೪೮೩

೫೫. ಜವರೇಗೌಡ ದೇ(ಸಂ), ಪೂರ್ವೋಕ್ತ, ೧೯೮೨, ಪು.೧೯

೫೬. ಅದೇ ಪು.೩೨

೫೭. ಸೂರ್ಯನಾಥ ಕಾಮತ್(ಸಂ), ಪೂರ್ವೋಕ್ತ, ೧೯೮೦, ಪು.೮೫೨

೫೮. ನಟರಾಜನ್ ಸಂಗ್ರಹ, ಪೂರ್ವೋಕ್ತ, ಪು.೧೨೦

೫೯. ಜವರೇಗೌಡ ದೇ(ಸಂ), ಪೂರ್ವೋಕ್ತ, ೧೯೮೨, ಪು.-೧೭೬

೬೦. ತಿರುಮಲೆ ಅನಂತರಂಗಾಚಾರ್(ಅನು), ಪೂರ್ವೋಕ್ತ, ೧೯೫೭, ಪು.-೧೦

೬೧. ಸುಂದರ್ ಅ.(ಸಂ), ಕರ್ನಾಟಕ ಚರಿತ್ರೆ, ಸಂಪುಟ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, ಪು.೪೧-೪೨

೬೨. ಬಿಪನ್ ಚಂದ್ರ, ಇಂಡಿಯಾನ್ ಸ್ಟ್ರಗಲ್ ಫಾರ್ ಇಂಡಿಪೆಂಡೆನ್ಸ್, ಪೆಂಗ್ವಿನ್ ಬುಕ್ಸ್, ದೆಹಲಿ, ೧೯೮೯, ಪು.೧೮೧

೬೩. ಕಂಠೀರವ ವಾರ ಪತ್ರಿಕೆ, ದಿನಾಂಕ ೨೪-೧೨-೧೯೩೫ [ಕ.ರಾ.ಪ.ಇ] ಬೆಂಗಳೂರು

೬೪. ಹಾಲಪ್ಪ ಜಿ.ಎಸ್, ಹಿಸ್ಟರಿ ಆಫ್ ಫ್ರೀಡಮ್ ಮೂಮೆಂಟ್ ಇನ್ ಕರ್ನಾಟಕ, ಸಂಪುಟ-೨, ಗೌರ್‍ನಮೆಂಟ್ ಆಫ್ ಮೈಸೂರು, ೧೯೬೪, ಪು.೧೨೩

೬೫. ಜವರೇಗೌಡ ದೇ(ಸಂ), ಪೂರ್ವೋಕ್ತ, ೧೯೮೨, ಪು.೯೩

೬೬. ಅದೇ ಪು.೨೦-೨೩

೬೭. ನವಭಾರತ ಪತ್ರಿಕೆ, ದಿನಾಂಕ ೮-೧೦-೧೯೩೧, ಪು.-೫

೬೮. ಗಾಂಧೀಜಿ ಎಂ.ಕೆ., ಕಮ್ಯೂನಲ್ ಯುನಿಟಿ, ನವಜೀವನ, ಅಹಮದಾಬಾದ್ ೧೯೪೯, ಪು.೨೧೫

೬೯. ಹಾಲಪ್ಪ ಜಿ.ಎಸ್, ಪೂರ್ವೋಕ್ತ, ೧೯೬೪, ಪು.೧೮-೧೯

೭೦. ನಟರಾಜನ್ ಸಂಗ್ರಹ, ಪೂರ್ವೋಕ್ತ, ಪು.೧೮-೧೯

೭೧. ಕಾಂಗ್ರೆಸ್ಸ್ ಮೀಟಿಂಗ್ಸ್ ಇನ್ ತುಮಕೂರ್ ಡಿಸ್ಟ್ರಿಕ್ಟ್, ಕಡತದ ಸಂಖ್ಯೆ, ೬-೧-೧೯೩೮ ರಿಂದ ೨೮-೩-೩೮ ರವರೆಗೆ [ಕ.ರಾ.ಪ.ಇ] ಬೆಂಗಳೂರು

೭೨. ಸೂರ್ಯನಾಥ ಕಾಮತ್(ಸಂ), ಪೂರ್ವೋಕ್ತ, ೧೯೭೭, ಪು.೫೦೪

೭೩. ನವಭಾರತ ಪತ್ರಿಕೆ, ದಿನಾಂಕ: ೮-೧೦-೧೯೩೧

೭೪. ಬಸವರಾಜು ಎಂ.ಜಿ.(ಲೇ), ಪೂರ್ವೋಕ್ತ, ೨೦೦೫, ಪು.೯೩

೭೫. ಸಿದ್ಧವ್ವನಹಳ್ಳಿ ಕೃಷ್ಣ ಶರ್ಮ(ಸಂ), ಪೂರ್ವೋಕ್ತ, ೧೯೬೯, ಪು.-೧೯೬

೭೬. ತಾಯಿನಾಡು ಪತ್ರಿಕೆ, ದಿನಾಂಕ ೨೪-೧೧-೧೯೪೧ [ಕ.ರಾ.ಪ.ಇ] ಬೆಂಗಳೂರು, ಪು.೭

೭೭. ಬಾಪೂಜಿ ವಿದ್ಯಾಸಂಸ್ಥೆಯ ಪ್ರಾಂಶುಪಾಲರು, ಡಿ.ಎಚ್. ಗೌರಮ್ಮನವರೊಂದಿಗೆ ನಡೆಸಿದ ಸಂದರ್ಶನ, ದಿನಾಂಕ ೩೦-೩-೨೦೦೭, ತುಮಕೂರು

೭

# ಸಮಾರೋಪ

ಮೊದಲ ರಾಷ್ಟ್ರೀಯ ನಾಯಕರ ರಾಜಕೀಯ ಕಾರ್ಯ ಚಟುವಟಿಕೆಗಳಲ್ಲಿ ಸಾಮ್ರಾಜ್ಯ ಶಾಹಿಯನ್ನು ಕುರಿತು ಅವರು ನಡೆಸಿದ ಆರ್ಥಿಕ ವಿಮರ್ಶೆ ಬಹುಮುಖ್ಯವಾದದ್ದು. ವಸಾಹತುಶಾಹಿ ಅರ್ಥವ್ಯವಸ್ಥೆಯ ಮೂಲ ಲಕ್ಷಣಗಳನ್ನು ಭಾರತದಲ್ಲಿ ಬೆಳೆಸಲು ಬ್ರಿಟಿಷರು ಮಾಡಿದ ಪ್ರಯತ್ನಗಳನ್ನು ಅವರು ಉಗ್ರವಾಗಿ ವಿರೋಧಿಸಿದರು. ಭಾರತವನ್ನು ಕಚ್ಚಾವಸ್ತುಗಳನ್ನು ಒದಗಿಸುವ ದೇಶವಾಗಿ, ಬ್ರಿಟಿಷ್ ಉತ್ಪಾದನೆಗಳಿಗೆ ಮಾರುಕಟ್ಟೆಯಾಗಿ, ವಿದೇಶಿ ಬಂಡವಾಳವನ್ನು ಹೂಡಲು ತಕ್ಕ ಕ್ಷೇತ್ರವಾಗಿ ಪರಿವರ್ತಿಸುವುದೇ ಬ್ರಿಟಿಷರಿಗಿದ್ದ ಉದ್ದೇಶ. ಈ ವಸಾಹತುಶಾಹಿ ರೂಪದ ಮುಖ್ಯ ಆರ್ಥಿಕ ನೀತಿಗಳೆಲ್ಲದರ ವಿರುದ್ಧವಾಗಿಯೂ ಅವರು ಚಳುವಳಿಗಳನ್ನು ಏರ್ಪಡಿಸಿದರು.[೧] ಇವರು ಭಾರತೀಯ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸಲು ಸಾಧನವಾಗಿ ಸ್ವದೇಶಿ ಭಾವನೆಯನ್ನು ಜನಪ್ರಿಯಗೊಳಿಸಿದರು. ಅನೇಕಾನೇಕ ಸ್ವದೇಶಿ ಮಾರಾಟ ಮಳಿಗೆಗಳನ್ನು ಸ್ಥಾಪಿಸಲಾಯಿತು. ಗಣೇಶ ವಾಸುದೇವ ಜೋಶಿ ೧೮೭೭ರ ಚಕ್ರವರ್ತಿ ದರಬಾರಿಗೆ ನಿರ್ಮಲವಾದ, ಕೈಯಲ್ಲೇ ನೂತ ಖಾದಿಯ ವಸ್ತ್ರಗಳನ್ನೇ ಧರಿಸಿ ಹೋದರು. ೧೮೯೬ರಲ್ಲಿ ಮಹಾರಾಷ್ಟ್ರದಲ್ಲಿ ಪ್ರಬಲವಾದ ಒಂದು ಸ್ವದೇಶಿ ಚಳುವಳಿಯನ್ನು ವ್ಯವಸ್ಥೆಗೊಳಿಸಲಾಯಿತು. ಅದರಲ್ಲಿ ವಿದ್ಯಾರ್ಥಿಗಳು ಬಹಿರಂಗವಾಗಿ ವಿದೇಶಿ ಬಟ್ಟೆಗಳನ್ನು ಸುಟ್ಟು ಹಾಕಿದರು.[೨]

ಸ್ವದೇಶಿ ಚಳುವಳಿ ಭಾರತೀಯ ರಾಷ್ಟ್ರೀಯ ಚಳುವಳಿಯಾಗಿ ಪರಿವರ್ತಿತವಾಗಿ ಮುಂದೆ ರಾಷ್ಟ್ರೀಯ ಸ್ವಾತಂತ್ರ್ಯದ ಮಹಾ ಸಂಗ್ರಾಮದಲ್ಲಿ ಲೀನವಾದುದು ಇಪ್ಪತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಸಂಭವಿಸಿದ ಭಾರತದ ಸ್ವಾತಂತ್ರ್ಯ ಹೋರಾಟದ ಪ್ರಮುಖ ಘಟನೆಗಳಲ್ಲೊಂದು. ರಾಷ್ಟ್ರೀಯತೆಯ ಉಗಮ ಮತ್ತು ಅದರ ಬೆಳವಣಿಗೆ ತಿಲಕ್, ಅರವಿಂದ್, ಲಾಲ ಲಜಪತ್ ರಾಯ್ ಮತ್ತು ಬಿಪಿನ್ ಚಂದ್ರಪಾಲ್‌ರವರ ನೇತೃತ್ವದಲ್ಲಿ ನಡೆಯಿತು. ಸ್ವದೇಶಿ ಚಳುವಳಿ ಮತ್ತು ರಾಷ್ಟ್ರೀಯತೆಯ ಕ್ರಿಯೆ-ಪ್ರತಿಕ್ರಿಯೆಗಳು ಪರಸ್ಪರ ಸ್ಪಂದಿಸಿ ಒಂದರ ಮೇಲೆ ಮತ್ತೊಂದು ಪ್ರಭಾವ ಬೀರಿ ಅವುಗಳ ವಲಯಗಳನ್ನು ವಿಸ್ತರಿಸಿತು. ಹೊಸದಾಗಿ ಜಾಗೃತಗೊಂಡ ರಾಷ್ಟ್ರೀಯ ಭಾವನೆಯಿಂದಲ್ಲದೆ ಬಹಿಷ್ಕಾರ ಮತ್ತು ಸ್ವದೇಶಿ ಚಳುವಳಿಗಳು ಇಷ್ಟು ಪ್ರಬಲವಾಗಿ ಬೆಳೆಯಲಾಗುತ್ತಿರಲಿಲ್ಲ. ಆದರೆ ಸ್ವದೇಶಿ ಚಳುವಳಿಯಿಂದಲೇ ರಾಷ್ಟ್ರೀಯತೆ ಕೇವಲ ತತ್ವಜಿಜ್ಞಾಸೆ

ಮತ್ತು ಭಾವನಾತ್ಮಕ ಕ್ಷೇತ್ರಗಳನ್ನು ಮೀರಿ ವ್ಯವಹಾರಿಕ ರಾಜಕೀಯ ಕ್ರಿಯೆಯಾಗಿ ಬೆಳೆದು ಇಡೀ ಭಾರತವನ್ನೇ ವ್ಯಾಪಿಸಿತು. ಒಂದು ಕ್ರಾಂತಿಯ ಸಮಯದಲ್ಲಿ ಜೀವನ ವೇಗವಾಗಿ ಮುಂದೆ ಸಾಗುತ್ತದೆ. ಹತ್ತು ವರ್ಷಗಳಲ್ಲಾಗುವ ಬದಲಾವಣೆ ಸಾಧಾರಣ ಸಮಯದಲ್ಲಿ ನೂರು ವರ್ಷಗಳನ್ನೇ ತೆಗೆದುಕೊಂಡಿತು. ಸ್ವದೇಶಿ ಚಳುವಳಿಯಿಂದ ಈ ಪವಾಡ ಸಂಭವಿಸಿತ್ತು. ೧೯೦೬ ರಿಂದ ೧೯೧೬ರ ಈ ದಶಕದಲ್ಲಿ ಭಾರತ ೧೮೦೫ ರಿಂದ ೧೯೦೫ರ ನಡುವಿನ ಶತಮಾನಕ್ಕಿಂತಲೂ ಹೆಚ್ಚು ದೂರ ತನ್ನ ಆಕಾಂಕ್ಷಿತ ಗುರಿಯೆಡೆಗೆ ಸಾಗಿತ್ತು.[೩]

ಬಂಗಾಳದ ವಿಭಜನೆಯನ್ನು ಪ್ರತಿಭಟಿಸಿ ಕರ್ನಾಟಕ ಪ್ರಾಂತ್ಯದಲ್ಲಿ ಸಭೆ, ಮೆರವಣಿಗೆಗಳಾದವು. ಸ್ವದೇಶಿ ಚಳುವಳಿಯ ಅಂಗವಾಗಿ ವಿದೇಶಿ ವಸ್ತು ಬಹಿಷ್ಕಾರ–ಉಡುಪಗಳ ಸುಡುವಿಕೆ ಮುಂತಾದ ಕೃತ್ಯಗಳು ಅಲ್ಲಲ್ಲಿ ಕಾಣಿಸಿಕೊಂಡವು. ಹಾಗೆಯೇ ಗುಡಿ ಕೈಗಾರಿಕೆಗಳ ಪುನರುತ್ಥಾನಕ್ಕಾಗಿ ಖಾದಿಬಟ್ಟೆ, ಬೆಂಕಿಪೊಟ್ಟಣ, ದೇಶಿ ಸಕ್ಕರೆ ಮುಂತಾದವುಗಳನ್ನು ತಯಾರಿಸಲು ಪ್ರಯತ್ನಗಳು ನಡೆದವು.[೪] ಈ ಸಮಯದಲ್ಲಿ ಆಲೂರು ವೆಂಕಟರಾವ್, ಹರ್ಡೇಕರ್ ಮಂಜಪ್ಪ, ಆರ್.ಎಸ್. ಹುಕ್ಕೇರಿಕರ್, ಗಂಗಾಧರರಾವ್ ದೇಶಪಾಂಡೆಯವರು ಸ್ವದೇಶಿ ಚಳುವಳಿಯಲ್ಲಿ ಭಾಗವಹಿಸಿ ಖಾದಿ ಪ್ರಚಾರ, ವಿದೇಶಿ ವಸ್ತ್ರ ಬಹಿಷ್ಕಾರ, ರಾಷ್ಟ್ರೀಯ ಶಾಲೆಗಳ ಸ್ಥಾಪನೆಯಂತಹ ರಚನಾತ್ಮಕ ಕಾರ್ಯಕ್ರಮಗಳನ್ನು ಕೈಗೊಂಡು ಪ್ರಚಾರ ನಡೆಸಿದರು.

೧೯೨೦ರ ನಾಗಪುರ ಅಧಿವೇಶನದ ನಂತರ ಕಾಂಗ್ರೆಸ್ಸು ಖಾದಿ ಪ್ರಚಾರ, ಅಸ್ಪೃಶ್ಯತಾ ನಿರ್ಮೂಲನ, ಮಧ್ಯಪಾನ ನಿರೋಧ, ರಾಷ್ಟ್ರೀಯ ಶಿಕ್ಷಣ ಮುಂತಾದ ರಚನಾತ್ಮಕ ಕಾರ್ಯಕ್ರಮಗಳನ್ನು ಕೈಗೊಂಡಿತು. ಹಿಂದಿಯನ್ನು ಇತರ ಭಾರತೀಯ ಭಾಷೆಗಳನ್ನು ಬಳಸಿದುದು ವಿದ್ಯಾವಂತರಿಗೂ ಅವಿದ್ಯಾವಂತ ಸಾಮಾನ್ಯ ಜನರಿಗೂ ನಡುವೆ ಇದ್ದ ತಡೆಯನ್ನು ಮುರಿದು ಹಾಕಿತು.[೫] ಅನಂತರ ಕಾಂಗ್ರೆಸ್ ಕಾರ್ಯಕರ್ತರು ಅಸಹಕಾರ ಚಳುವಳಿಯ ಸಮಯದಲ್ಲಿ ಇವುಗಳನ್ನು ದೇಶದಾದ್ಯಂತ ಪ್ರಚಾರ ನಡೆಸಿದರು. ಈ ಸಮಯದಲ್ಲಿ ವಿದೇಶಿ ವಸ್ತುಗಳನ್ನು ಸುಡಲಾಯಿತು. ಎಲ್ಲರೂ ಖಾದಿ ಬಟ್ಟೆಗೆ ಶರಣಾದರು. ಇನ್ನು ನಾವು ದಾಸ್ಯದಿಂದ ಬದುಕುವುದು ಸಾಕು ಎಂದು ಗಾಂಧೀಜಿ ಜನತೆಗೆ ಕರೆ ಕೊಟ್ಟರು.

೧೯೨೪ರ ಬೆಳಗಾಂ ಕಾಂಗ್ರೆಸ್ ಅಧಿವೇಶನದಲ್ಲಿ ಭಾಗವಹಿಸಿದ ತುಮಕೂರು ಜಿಲ್ಲೆಯ ಕೆ.ರಂಗೈಯ್ಯಾಂಗಾರ್, ಟಿ.ಸುಬ್ರಮಣ್ಯಂರವರು ಜಿಲ್ಲೆಗೆ ಬಂದ ನಂತರ ಖಾದಿ ಪ್ರಚಾರ, ವಿದೇಶಿ ಬಹಿಷ್ಕಾರವನ್ನು ಆರಂಭಿಸಿದರು. ಅನಂತರ ಗಾಂಧೀಜಿ ೧೯೨೭ ಜುಲೈ ೧೪ರಂದು ಖಾದಿ ಪ್ರಚಾರದ ನಿಮಿತ್ತವಾಗಿ ತುಮಕೂರಿಗೆ ಭೇಟಿ ನೀಡಿದರು. ಈ ಭೇಟಿಯು ಜಿಲ್ಲೆಯ ಕಾಂಗ್ರೆಸ್ ನಾಯಕರುಗಳ ಹಾಗೂ ಜನತೆಯ ಮೇಲೆ ಸಾಕಷ್ಟು ಪ್ರಭಾವ ಬೀರಿತು. ಗಾಂಧೀಜಿಯವರ ಖಾದಿ ಧರಿಸಿ, ವಿದೇಶಿ ವಸ್ತ್ರ ಬಹಿಷ್ಕಾರದ ಕರೆಗೆ ಬೆಂಬಲವಾಗಿ ತುಮಕೂರು, ತಿಪಟೂರು, ತುರುವೇಕೆರೆ,

ಕುಣಿಗಲ್ಲು, ಮಧುಗಿರಿ, ಪಾವಗಡ ಮುಂತಾದ ಸ್ಥಳಗಳಲ್ಲಿ ವಿದೇಶಿ ವಸ್ತ್ರ ದಹನದಂತಹ ಕಾರ್ಯಗಳು ಭರದಿಂದ ಸಾಗಿದವು.

೧೯೩೦ರ ದಶಕದಲ್ಲಿ ಜಿಲ್ಲೆಯಲ್ಲಿ ಖಾದಿ ಪ್ರಚಾರ, ವಿದೇಶಿ ಬಹಿಷ್ಕಾರದ ಕರೆಗೆ ಬೆಂಬಲವಾಗಿ ತುಮಕೂರು, ತಿಪಟೂರುಗಳಲ್ಲಿ ವಿದೇಶಿ ವಸ್ತ್ರಗಳ ಅಂಗಡಿಗಳು ಮುಂದೆ ಕಾಂಗ್ರೆಸ್ ಕಾರ್ಯಕರ್ತರು ಪಿಕೆಟಿಂಗ್ ನಡೆಸಿದರು. ಈ ದಶಕದಲ್ಲಿ ಕೆ.ಎಸ್.ರಾಜಪ್ಪ ಮತ್ತು ಮಾಲಿಮರಿಯಪ್ಪನವರು ಖಾದಿ ಪ್ರಚಾರವನ್ನು ಕೈಗೊಂಡು ಮುಂದುವರೆಸಿದರು. ಅನಂತರ ೧೯೪೨ರ ಕ್ವಿಟ್ ಇಂಡಿಯಾ ಚಳುವಳಿಯ ಸಂದರ್ಭದಲ್ಲಿಯೂ ವಿದೇಶಿ ವಸ್ತ್ರ ಬಹಿಷ್ಕಾರ, ಸ್ವದೇಶಿ ವಸ್ತ್ರಕ್ಕೆ ಪ್ರೋತ್ಸಾಹದ ಅಂಗವಾಗಿ ತುಮಕೂರು, ಚಿಕ್ಕನಾಯಕನಹಳ್ಳಿ, ಮಧುಗಿರಿಗಳಲ್ಲಿ ಪ್ರಚಾರ ಚಟುವಟಿಕೆಗಳು ನಡೆದವು. ಅನಂತರ ೧೯೫೭ರಲ್ಲಿ ವಿನೋಬಾ ಭಾವೆಯವರು ಜಿಲ್ಲೆಯಲ್ಲಿ ಭೂದಾನ ಯಾತ್ರೆಯನ್ನು ಕೈಗೊಂಡಾಗ ಸಭೆಗಳಲ್ಲಿ ಕಾಂಗ್ರೆಸ್ಸಿನ ಕಾರ್ಯಕರ್ತರಿಗೆ ಮತ್ತು ಜನತೆಗೆ ಖಾದಿಯ ಮಹತ್ವದ ಬಗ್ಗೆ ತಿಳಿಸಿದರು.

ಗ್ರಾಮೋದ್ಯೋಗ ಚಟುವಟಿಕೆಗಳು ಜಿಲ್ಲೆಯಲ್ಲಿ ೧೯೨೦ ರಿಂದಲೇ ಆರಂಭಗೊಂಡವು. ಜಿಲ್ಲೆಯ ಕಾಂಗ್ರೆಸ್ ನಾಯಕರು ಗಾಂಧಿ ಅನುಯಾಯಿಗಳಾದ ಆರ್.ಎಸ್.ಆರಾಧ್ಯ, ಮಾ.ನಂ.ಶ್ರೀಕಂಠಯ್ಯ, ಎಂ.ಪುಟ್ಟತಿಮ್ಮಯ್ಯನವರು ಗ್ರಾಮೋದ್ಯೋಗ ಚಟುವಟಿಕೆಗಳನ್ನು ಸ್ವಾತಂತ್ರ್ಯ ಚಳುವಳಿಯ ಸಮಯದಲ್ಲಿ ಪ್ರಚಾರ ಮಾಡಿದರು. ಜಿಲ್ಲೆಯ ಪ್ರಮುಖ ಗ್ರಾಮೋದ್ಯೋಗವಾದ ಉಣ್ಣೆ ನೇಕಾರ ಉದ್ಯಮವನ್ನು ಎನ್.ಮಲ್ಲಪ್ಪನವರು ಅಭಿವೃದ್ಧಿಗೊಳಿಸಿದರು. ಸ್ವಾತಂತ್ರ್ಯದ ನಂತರ ಸರ್ಕಾರವು ಗ್ರಾಮೋದ್ಯೋಗಗಳನ್ನು ಜಿಲ್ಲೆಯಲ್ಲಿ ಅಭಿವೃದ್ಧಿಗೊಳಿಸಲು ಹಲವು ಯೋಜನೆಗಳನ್ನು ಜಾರಿಗೊಳಿಸಿತು. ಈ ಯೋಜನೆಗಳ ಮೂಲಕ ಜನರಿಗೆ ಉದ್ಯೋಗ ಕಲ್ಪಿಸುವುದರ ಮೂಲಕ ಅವರ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವುದಾಗಿದೆ.

ಅಸ್ಪೃಶ್ಯತೆಯು ಹಿಂದೂ ಧರ್ಮದಲ್ಲಿ ಪಾರಂಪರಿಕವಾಗಿ ಬಂದ ದೋಷ. ಈ ದೋಷ ನಿವಾರಣೆಗಾಗಿ ಗಾಂಧೀಜಿಯವರು ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಪ್ರಯತ್ನಿಸಿದರು. ೧೯೨೭, ೧೯೩೪ರಲ್ಲಿ ತುಮಕೂರಿಗೆ ಭೇಟಿ ನೀಡಿದ ನಂತರ ಜಿಲ್ಲೆಯಲ್ಲಿ ಹರಿಜನೋದ್ಧಾರದ ಕಾರ್ಯಕ್ರಮಗಳು ನಡೆದವು. ಜಿಲ್ಲೆಯ ಕಾಂಗ್ರೆಸ್ ನಾಯಕರಾದ ಟಿ.ಆರ್.ಚನ್ನಿಗರಾಮಯ್ಯ ಶಾಸನಸಭೆ ಸ್ಥಳೀಯ ಸಂಸ್ಥೆಗಳಲ್ಲಿ ಹರಿಜನರಿಗೆ ಮೀಸಲಾತಿ ಕಲ್ಪಿಸಲು ಪ್ರಯತ್ನಿಸಿದರು. ಸಿ.ಟಿ.ಹನುಮಂತಯ್ಯ, ಟಿ.ತಾರೇಗೌಡರವರು ಜಿಲ್ಲೆಯಲ್ಲಿ ದೇವಸ್ಥಾನ ಪ್ರವೇಶ ಚಳುವಳಿಯನ್ನು ಪ್ರಾರಂಭಿಸಿದರು. ಇವರು ಹರಿಜನ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಿದರು. ಆರ್.ಎಸ್.ಆರಾಧ್ಯರು ಹರಿಜನರ ವಿದ್ಯಾರ್ಥಿಗಳ ಅಕ್ಷರ ಜ್ಞಾನದ ಅಭಿವೃದ್ಧಿಗೆ ಶ್ರಮಿಸಿದರು. ಹೆಚ್.ಎಂ.ಗಂಗಾಧರಯ್ಯ, ಹರಿಜನರ ಶಿಕ್ಷಣದ ಪ್ರಗತಿಗಾಗಿ, ಹರಿಜನರಿಗೆ ವಸತಿಗಳನ್ನು,

ಜಮೀನುಗಳನ್ನು ಸರ್ಕಾರದಿಂದ ಮಂಜೂರಾತಿ ಮಾಡಿಸಿದರು. ಟಿ.ಎ.ದಾಸಪ್ಪನವರು ತಿಪಟೂರಿನಲ್ಲಿ ಹೋಟೆಲ್ ಪ್ರವೇಶ ಚಳುವಳಿಯನ್ನು, ತುಮಕೂರು ಮತ್ತು ತಿಪಟೂರಿನಲ್ಲಿ ಹರಿಜನರ ಶಿಕ್ಷಣಕ್ಕಾಗಿ ಶಾಲೆಗಳನ್ನು ಮತ್ತು ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಿ ಅವರ ಏಳಿಗೆಗೆ ದುಡಿದರು.

೧೯೩೦ರಲ್ಲಿ ಪ್ರಾರಂಭವಾದ ಕಾನೂನುಭಂಗ ಚಳುವಳಿಯ ಸಮಯದಲ್ಲಿ ಪಾನ ನಿರೋಧ ಚಳುವಳಿಯು ಮೈಸೂರು ಸಂಸ್ಥಾನದಲ್ಲಿ ಮೊದಲ ಬಾರಿಗೆ ತುಮಕೂರು ಜಿಲ್ಲೆಯಲ್ಲಿ ೧೯೩೧-೩೨ರಲ್ಲಿ ಪ್ರಾರಂಭವಾಗಿ ಯಶಸ್ವಿಯಾಯಿತು. ಮಾಲಿಮರಿಯಪ್ಪ ಜಿಲ್ಲೆಯ ಶಿರಾದ ಬರಗೂರಿನಲ್ಲಿ, ಪಾವಗಡದಲ್ಲಿ ಸಭೆಗಳನ್ನು ನಡೆಸಿ ಪಾನ ನಿರೋಧ ಚಳುವಳಿಯನ್ನು ಯಶಸ್ವಿಗೊಳಿಸಲು ಪ್ರಚಾರ ಮಾಡಿದರು. ಇದು ಅಲ್ಲದೇ ಮಾಲಿಮರಿಯಪ್ಪನವರ ನಾಯಕತ್ವದಲ್ಲಿ ೨೮-೯-೧೯೩೯ರಂದು ಶಿರಾ ತಾಲ್ಲೂಕಿನ ತಾವರೆ ಕೆರೆ, ಎಲೆಯೂರು, ವಡ್ಡನಹಳ್ಳಿಗಳಲ್ಲಿ ಅರಣ್ಯ ಸತ್ಯಾಗ್ರಹವನ್ನು ಯಶಸ್ವಿಗೊಳಿಸಿ ಪಾನ ನಿರೋಧವನ್ನು ಹಮ್ಮಿಕೊಂಡರು. ಕ್ವಿಟ್ ಇಂಡಿಯಾ ಚಳುವಳಿಯ ಸಮಯದಲ್ಲಿ ಜಿಲ್ಲೆಯ ಮಧುಗಿರಿ, ಪಾವಗಡ, ಕೊರಟಗೆರೆ, ಶಿರಾ ತಿಪಟೂರು, ಕುಣಿಗಲ್ಲು, ಚಿಕ್ಕ ನಾಯಕನಹಳ್ಳಿಗಳಲ್ಲಿ ಪಾನ ನಿರೋಧ ಅಂಗವಾಗಿ ಮದ್ಯದ ಅಂಗಡಿಗಳಿಗೆ ಬೆಂಕಿ ಇಡುವ, ಮದ್ಯದ ಅಂಗಡಿಗಳ ಮುಂದೆ ಪಿಕೆಟಿಂಗ್, ಮದ್ಯದ ಪಿಪಾಯಿಗಳನ್ನು ಹೊಡೆದು ಹಾಕುವ, ಮದ್ಯವನ್ನು ಹೊರ ಚೆಲ್ಲುವ ಘಟನೆಗಳು ಯಶಸ್ವಿಯಾಗಿ ನಡೆದವು. ಅದೇ ರೀತಿ ಮೈಸೂರು ಚಲೋ ಚಳುವಳಿಯ ಸಮಯದಲ್ಲಿ ಜಿಲ್ಲೆಯ ಎ.ಎಸ್.ಸೀತಾರಾಮಯ್ಯ, ಮಾನಂ ಶ್ರೀಕಂಠಯ್ಯ, ಜಿ.ವಿ.ನಾರಾಯಣ ಮೂರ್ತಿಯವರು ಮಾಯಸಂದ್ರ, ತುರುವೇಕೆರೆ, ಚಿಕ್ಕನಾಯಕನಹಳ್ಳಿಗಳಲ್ಲಿ ಪಾನ ನಿರೋಧ ಚಳುವಳಿಗಳನ್ನು ನಡೆಸಿ ಯಶಸ್ವಿಗೊಳಿಸಿದರು.

ಭಾರತದ ಸಾರ್ವತ್ರಿಕ ಭಾಷೆಯಾಗಿ, ಉತ್ತರ ಮತ್ತು ದಕ್ಷಿಣ ಭಾರತದ ಏಕತೆಗಾಗಿ ಹಿಂದಿ ಭಾಷೆಯು ಗಾಂಧೀಜಿಯವರಿಗೆ ಸ್ಫೂರ್ತಿ ನೀಡಿತು. ದಕ್ಷಿಣ ಭಾರತದಲ್ಲಿ ಹಿಂದಿ ಪ್ರಚಾರ ಮಾಡಲು ಮದ್ರಾಸಿನಲ್ಲಿ "ದಕ್ಷಿಣ ಭಾರತ ಹಿಂದಿ ಪ್ರಚಾರ ಸಮಿತಿ"ಯನ್ನು ಸ್ಥಾಪಿಸಲಾಯಿತು. ೧೯೨೭ರಲ್ಲಿ ಕರ್ನಾಟಕದಲ್ಲಿ ಗಾಂಧೀಜಿ ಪ್ರವಾಸ ಮಾಡಿದ ನಂತರ ಪ್ರೌಢ ಶಾಲೆಗಳಲ್ಲಿ ಹಿಂದಿ ಭಾಷೆಯನ್ನು ಪ್ರಚಾರ ಮಾಡುವ ಕಾರ್ಯವನ್ನು ಕೈಗೊಳ್ಳಲಾಯಿತು. ಸಂಸ್ಥಾನದ ಸರ್ಕಾರವು ಹಿಂದಿ ಪ್ರಚಾರ ಸಭಾ ಹಾಗೂ ಹಿಂದಿ ಪ್ರೇಮಿ ಮಂಡಲಗಳನ್ನು ಸ್ಥಾಪಿಸಿ ಹಿಂದಿ ಭಾಷೆಯನ್ನು ಪ್ರಚಾರ ಮಾಡಲು ಪ್ರಯತ್ನಿಸಿತು.

೧೯೭೭ರಂದು ಗಾಂಧೀಜಿ ತುಮಕೂರಿಗೆ ಭೇಟಿ ನೀಡಿದ ನಂತರ ಜಿಲ್ಲೆಯಲ್ಲಿ ಹಿಂದಿ ಪ್ರಚಾರದ ಮೇಲೆ ಸಾಕಷ್ಟು ಪ್ರಭಾವ ಬೀರಿದರು. ೧೯೩೦ರಲ್ಲಿ ತುಮಕೂರಿನಲ್ಲಿ ಅ.ತಿ.ಶ್ರೀನಿವಾಸ

ರಾಘವಾಚಾರ್ಯರು, ೧೯೩೬ರಲ್ಲಿ ಮಧುಗಿರಿಯಲ್ಲಿ ಪಿ.ಕೆ.ನಾರಾಯಣಚಾರ್ಯರು ಈ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿ ಯಶಸ್ವಿಯಾದರು. ಜಿ.ವಿ.ನಾರಾಯಣಮೂರ್ತಿಯವರು ಹಿಂದಿ ಭಾಷೆಯನ್ನು ಕಲಿತು ಹಿಂದಿ ನಾಟಕಗಳನ್ನು ಪ್ರದರ್ಶನ ನೀಡುವುದರ ಮೂಲಕ ಹಿಂದಿ ಪ್ರಚಾರವನ್ನು ಯಶಸ್ವಿಗೊಳಿಸಿದರು. ಇದೇ ರೀತಿ ೧೯೪೫ರಲ್ಲಿ ತುಮಕೂರಿನಲ್ಲಿ ಪ್ರಾರಂಭವಾದ ಹಿಂದಿ ಪ್ರಚಾರ ಸಮಿತಿ, ೧೯೪೬ರಲ್ಲಿ ತುಮಕೂರಿನಲ್ಲಿ ಪ್ರಾರಂಭವಾದ ಜಿಲ್ಲಾ ಹಿಂದಿ ಪ್ರಚಾರ ಸಮಿತಿ, ಹಾಗೂ ೧೯೫೪ರಲ್ಲಿ ಹಿಂದಿ ಪ್ರಚಾರ ಸಮಿತಿಯು ಸ್ಥಾಪಿಸಿದ ಹಿಂದಿ ವಿದ್ಯಾರ್ಥಿ ಸಂಘ ಎಂಬ ಸಂಸ್ಥೆಗಳು ಜಿಲ್ಲೆಯಲ್ಲಿ ಹಿಂದಿ ಪ್ರಚಾರ ಕಾರ್ಯಗಳನ್ನು ಕೈಗೊಂಡು ಯಶಸ್ವಿಗೊಳಿಸಿದವು.

ಗಾಂಧೀಜಿಯವರು ಭಾರತದ ಅಭಿವೃದ್ಧಿ ಆದರ ಅನಂತವಾದ ಏಳೂವರೆ ಲಕ್ಷ ಹಳ್ಳಿಗಳಲ್ಲಿ ಅಡಗಿದೆ ಎಂದು ಹೇಳಿದರು. ತುಮಕೂರು ಜಿಲ್ಲೆಯ ಮಾಲಿಮರಿಯಪ್ಪನವರು ರೈತರ, ಹೊಲ, ಗದ್ದೆ ಹಣಕಾಸಿನ ವ್ಯಾಜ್ಯಗಳನ್ನು ಬಗೆಹರಿಸಿ ಹಳ್ಳಿಗಳ ಸಂಸಾರಗಳು ಹಾಳಾಗುವುದನ್ನು ತಡೆಗಟ್ಟದರು. ಅಲ್ಲದೇ ಮಧುಗಿರಿಯ ಉಪವಿಭಾಗದಲ್ಲಿ ಕೃಷಿ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡು ಗ್ರಾಮೀಣಾಭಿವೃದ್ಧಿ ಕಾರ್ಯವನ್ನು ಯಶಸ್ವಿಗೊಳಿಸಿದರು.

ಮೈಸೂರು ಸಂಸ್ಥಾನದಲ್ಲಿ ಗ್ರಾಮೀಣಾಭಿವೃದ್ಧಿಯ ಕಾರ್ಯಗಳು ೧೯೪೩ರಲ್ಲಿ ಪ್ರಾರಂಭವಾದವು. ಆದರೆ ತುಮಕೂರು ಜಿಲ್ಲೆಯಲ್ಲಿ ೧೯೪೦-೪೧ರಿಂದಲೇ ರಸ್ತೆಗಳ ನಿರ್ಮಾಣ, ಬಾವಿಗಳನ್ನು ತೊಡಿಸುವ ಕಾರ್ಯಗಳನ್ನು ಕೈಗೊಳ್ಳಲಾಯಿತು. ಜಿಲ್ಲೆಯ ಕಾಂಗ್ರೆಸ್ಸಿನ ನಾಯಕರಾದ ಎಂ.ಪುಟ್ಟತಿಮ್ಮಯ್ಯ, ಟಿ.ಎ.ದಾಸಪ್ಪ, ವಿ.ಎನ್.ರೆಡ್ಡಿಯವರು ಗ್ರಾಮೀಣಾಭಿವೃದ್ಧಿಯ ಅಂಗವಾಗಿ ರಸ್ತೆಗಳ ನಿರ್ಮಾಣ, ರಸ್ತೆಗಳ ದುರಸ್ತಿ, ಹಳ್ಳಿಗಳ ಸ್ವಚ್ಛತೆ, ಬಡವರಿಗೆ ನಿವೇಶನಗಳ ಹಂಚಿಕೆ, ಗ್ರಾಮ ನೈರ್ಮಲ್ಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಯಶಸ್ವಿಗೊಳಿಸಿದರು. ಖಾದಿ ಗಂಗಪ್ಪನವರು ಪಾವಗಡ ತಾಲ್ಲೂಕಿನಲ್ಲಿ ಸರ್ವ ಸೇವಾ ಪಾರಂನ್ನು ಆರಂಭಿಸಿ ಅದರ ಮೂಲಕ ರೈತರಿಗೆ ಆರ್ಥಿಕ ಸಹಾಯ, ಸ್ವಯಂ ಉದ್ಯೋಗದ ತರಬೇತಿ, ಶಾಲೆಗಳಿಗೆ ಪಿಠೋಪಕರಣ, ಪಾಠೋಪಕರಣಗಳನ್ನು ನೀಡುವುದರ ಮೂಲಕ ಗ್ರಾಮೀಣಾಭಿವೃದ್ಧಿ ಕಾರ್ಯವನ್ನು ಯಶಸ್ವಿಗೊಳಿಸಿದರು. ಒಟ್ಟಾರೆ ಗಾಂಧೀಜಿಯವರ ಕನಸಿನಂತೆ ನಮ್ಮ ರಾಜ್ಯ ರಾಮರಾಜ್ಯವಾಗಬೇಕಾದರೆ ಹಳ್ಳಿಗಳ ಉದ್ಧಾರದಿಂದಲೇ ಸಾಧ್ಯ ಎಂಬುದನ್ನು ಗ್ರಾಮೀಣ ಜನತೆಗೆ ತೋರಿಸಿಕೊಟ್ಟರು.

ಸರ್ವೋದಯ ಕಾರ್ಯಕ್ರಮವನ್ನು ಮತ್ತು ಭೂದಾನ ಚಳುವಳಿಯನ್ನು ತುಮಕೂರು ಜಿಲ್ಲೆಯಲ್ಲಿ ಜಿ.ವಿ.ನಾರಾಯಣಮೂರ್ತಿ, ಮಾ.ಕೃ.ನರಸಿಂಹಯ್ಯ, ಖಾದಿಗಂಗಪ್ಪ, ಸೆಟ್ಲೂರ್ ಕೃಷ್ಣಮೂರ್ತಿ, ಎಂ.ಪುಟ್ಟತಿಮ್ಮಯ್ಯ, ಟಿ.ಎ.ದಾಸಪ್ಪ, ಕೆ.ಎಸ್.ರಾಜಪ್ಪನವರು ಹಮ್ಮಿಕೊಂಡು ಯಶಸ್ವಿಗೊಳಿಸಿದರು. ಪಶುಸಂಗೋಪನೆ ಮತ್ತು ಗೋ-ಹತ್ಯೆ ನಿಷೇಧ ಕಾರ್ಯಕ್ರಮವನ್ನು

ತುಮಕೂರು ಜಿಲ್ಲೆಯಲ್ಲಿ ಕೆ.ರಂಗೈಯ್ಯಾಂಗಾರ, ಟಿ.ಸುಬ್ರಮಣ್ಯಂರವರು ಪ್ರಾರಂಭಿಸಿದರು. ಈ ಕಾರ್ಯಕ್ರಮವನ್ನು ತುಮಕೂರಿನ ಪ್ರಾಣಿದಯಾ ಪ್ರಚಾರಕ ಸಂಘವು ಲೇಖನಗಳನ್ನು ಪ್ರಕಟಿಸುವುದರ ಮೂಲಕ ಯಶಸ್ವಿಗೊಳಿಸಿತು. ಈ ಕಾರ್ಯದಲ್ಲಿ ಹೆಚ್.ಎಂ.ಗಂಗಾಧರಯ್ಯ, ಕೆ.ಎಸ್.ರಾಜಪ್ಪ, ಟಿ.ಜಿ.ಗುಬ್ಬಿ ಹುಚ್ಚಪ್ಪನವರು ಪಾಲ್ಗೊಂಡು ಪ್ರಚಾರ ನಡೆಸಿ ಯಶಸ್ವಿಗೊಳಿಸಿದರು. ಗಾಂಧೀಜಿಯವರ ವಯಸ್ಕರ ಶಿಕ್ಷಣ ಕಾರ್ಯಕ್ರಮವನ್ನು ಜಿಲ್ಲೆಯ ಟಿ.ಆರ್.ಚನ್ನಪ್ಪ, ಜಿ.ವಿ.ನಾರಾಯಣಮೂರ್ತಿ, ವಿ.ಎನ್.ರೆಡ್ಡಿಯವರು ಯಶಸ್ವಿಗೊಳಿಸಿದರು. ಈ ಕಾರ್ಯಕ್ರಮದ ಅಡಿಯಲ್ಲಿ ರಾತ್ರಿ ಶಾಲೆಗಳನ್ನು ನಡೆಸುವಾಗ ಅನಕ್ಷರಸ್ಥರಿಗೆ ರಾಷ್ಟ್ರೀಯ ಚಳುವಳಿಯ ಬಗ್ಗೆ, ರಾಷ್ಟ್ರ ನಾಯಕರ ಬಗ್ಗೆ ತಿಳಿಸುವುದರ ಮೂಲಕ ಜನತೆಯು ಚಳುವಳಿಗಳಲ್ಲಿ ಭಾಗವಹಿಸಲು ಪ್ರೇರಣೆ ನೀಡಿದರು. ಪಾವಗಡ ತಾಲ್ಲೂಕಿನ ವಿ.ಎನ್.ರೆಡ್ಡಿಯವರು ವಯಸ್ಕರ ಶಿಕ್ಷಣ ಶಾಲೆಗಳನ್ನು ಕ್ವಿಟ್ ಇಂಡಿಯಾ ಚಳುವಳಿಯ ಸಮಯದಲ್ಲಿ ನಡೆಸಿ, ಜನತೆಯು ಚಳುವಳಿಯಲ್ಲಿ ಭಾಗವಹಿಸಲು ಪ್ರೇರಣೆ ನೀಡಿದರು. ರಾಷ್ಟ್ರೀಯ ಶಿಕ್ಷಣ ಕಾರ್ಯಕ್ರಮವನ್ನು ಜಿಲ್ಲೆಯ ಚಿಕ್ಕ ನಾಯಕನ ಹಳ್ಳಿಯ ಜಿ.ವಿ.ನಾರಾಯಣಮೂರ್ತಿ ಮತ್ತು ಸಿ.ಹೆಚ್. ಲಿಂಗದೇವರು ಅವರು ದೇಶೀಯ ವಿದ್ಯಾಪೀಠ ಸ್ಥಾಪಿಸಿ, ಇದರ ಅಡಿಯಲ್ಲಿ ೧೯೪೩ರಲ್ಲಿ ಪ್ರೌಢಶಾಲೆಯನ್ನು ಆರಂಭಿಸಿದರು. ಈ ಪ್ರೌಢಶಾಲೆಯು ಚಿಕ್ಕನಾಯಕನಹಳ್ಳಿ ತಾಲ್ಲೂಕಿನಲ್ಲಿ ಮೈಸೂರು ಚಲೋ ಚಳುವಳಿ ಯನ್ನು ಯಶಸ್ವಿಗೊಳಿಸಿತು. ಹಿಂದೂ – ಮುಸ್ಲಿಮ್ ಐಕ್ಯತೆ ಕಾರ್ಯಕ್ರಮವನ್ನು ತುಮಕೂರಿನಲ್ಲಿ ಗುಬ್ಬಿ ಹುಚ್ಚಪ್ಪ, ಸೆಟ್ಲೂರ್, ಪುಟ್ಟಮುದ್ದಯ್ಯ, ಗಫಾರಖಾನ್, ಕೆ.ವಿ.ಕೃಷ್ಣಸ್ವಾಮಿಯವರು ಹಮ್ಮಿಕೊಂಡು ಪ್ರಚಾರ ಮಾಡಿ ಯಶಸ್ವಿಗೊಳಿಸಿದರು. ಗ್ರಾಮ ನೈರ್ಮಲ್ಯ ಕಾರ್ಯಕ್ರಮವನ್ನು ೧೯೬೯ರಲ್ಲಿ ಸ್ಥಾಪಿಸತವಾದ ಬಾಪೂಜಿ ವಿದ್ಯಾಸಂಸ್ಥೆಯು ತನ್ನ ವಿದ್ಯಾರ್ಥಿಗಳ ಸೇವಾ ಶಿಬಿರಗಳನ್ನು ಹಮ್ಮಿಕೊಂಡು ತುಮಕೂರಿನಲ್ಲಿ ಕೊಳಚೆ ನಿರ್ಮೂಲನೆ, ಒಳಚರಂಡಿ ವ್ಯವಸ್ಥೆಯನ್ನು ಸ್ವಚ್ಚಗೊಳಿಸುವುದರ ಮೂಲಕ ಯಶಸ್ವಿ ಗೊಳಿಸಿತು.

ವಸಾಹತು ಆಳ್ವಿಕೆಯ ಸಂದರ್ಭದಲ್ಲಿ ಗಾಂಧೀಜಿಯವರ ನೇತೃತ್ವದಲ್ಲಿ ನಡೆದ ಈ ರೀತಿಯ ರಚನಾತ್ಮಕ ಕಾರ್ಯಕ್ರಮಗಳು ದೇಶದುದ್ದಕ್ಕೂ ಹೊಸ ಬಗೆಯ ಚಿಂತನೆ ರೂಪುಗೊಳ್ಳುವುದಕ್ಕೆ ಸಹಕಾರಿಯಾದವು. ವಿದೇಶಿ ಆಳ್ವಿಕೆಯಿಂದ ಹಳಿ ತಪ್ಪುತ್ತಿದ್ದ ಭಾರತೀಯ ಸಮಾಜವನ್ನು ಸರಿದಾರಿಗೆ ತರುವುದು ಹಾಗೂ ಸ್ಥಳೀಯ ಜಾತಿಯಾಧಾರಿತ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವುದು ಗಾಂಧೀಜಿಯವರ ಹೋರಾಟದ ಮೂಲ ಉದ್ದೇಶವಾಗಿತ್ತು. ತುಮಕೂರು ಪ್ರದೇಶ ಗಾಂಧೀಜಿಯವರ ಪ್ರವೇಶ ಹಾಗೂ ಪ್ರಭಾವದಿಂದಾಗಿ ಈ ರೀತಿಯ ರಚನಾತ್ಮಕ ಕಾರ್ಯಕ್ರಮ ಗಳಿಗೆ ತನ್ನನ್ನು ತಾನು ತೆರೆದುಕೊಂಡಿತು. ಈ ಕಾರ್ಯಕ್ರಮಗಳು ಭಾರತವನ್ನು ವಿದೇಶಿಯರಿಂದ ಮುಕ್ತಗೊಳಿಸುವುದಷ್ಟಕ್ಕೆ ಸೀಮಿತಗೊಳ್ಳದೆ, ಸ್ಥಳೀಯ ಸಮಸ್ಯೆಗಳನ್ನು ನಿವಾರಿಸಿ ಆದರ್ಶ

ಸಮಾಜವನ್ನು ನಿರ್ಮಿಸುವ ಉದ್ದೇಶವನ್ನು ಹೊಂದಿದ್ದವು. ಸ್ವಾತಂತ್ರ್ಯೋತ್ತರ ಸಂದರ್ಭದಲ್ಲೂ ಈ ಕಾರ್ಯಕ್ರಮಗಳು ಜಿಲ್ಲೆಯಲ್ಲಿ ಮುಂದುವರಿದಿರುವುದು ಇದಕ್ಕೆ ನಿದರ್ಶನವಾಗಿದೆ.

**ಅಡಿ ಟಿಪ್ಪಣಿಗಳು**

೧. ಬಿಪನ್ ಚಂದ್ರ, ಅಮಲೇಶ ತ್ರಿಪಾಠಿ,ಬರುನ್‌ಡೇ(ಅನು) ಆರ್.ಎಲ್.ಅನಂತರಾಮಯ್ಯ, ಸ್ವಾತಂತ್ರ್ಯದ ಹೋರಾಟ, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ, ೧೯೭೪, ಪು.೫೬, ೫೭

೨. ಅದೇ, ಪು.೫೮

೩. ನಾರಾಯಣಶಾಸ್ತ್ರೀ, ರಾಷ್ಟ್ರೀಯ ಮಹಾಪುರುಷರು, ಸಮಾಜ ಪುಸ್ತಕಾಲಯ, ಧಾರವಾಡ, ೧೯೯೮, ಪು.೮೪

೪. ಚಂದ್ರಶೇಖರ ಎಸ್.(ಲೇ), ಕರ್ನಾಟಕ ಇತಿಹಾಸ ಶತಮಾನದ ಮುಖ್ಯ ಪುಟಗಳು, ಟಿ.ಸತೀಶ್ ಯು.ಪೈ(ಸಂ), ಉದಯವಾಣಿ, ೧೯೯೯, ಪು.೨೫೭

೫. ಬಿಪನ್‌ಚಂದ್ರ, ಅಮಲೇಶ ತ್ರಿಪಾಟಿ, ಬರುನ್‌ಡೇ, ಪೂರ್ವೋಕ್ತ, ಪು.೧೩೦



೧೯೨೭ ಜುಲೈ ೧೪ರಂದು ಖಾದಿ ಪ್ರಚಾರ ನಿಮಿತ್ತವಾಗಿ ಗಾಂಧೀಜಿ ಅವರು ತುಮಕೂರಿಗೆ ಭೇಟಿ ನೀಡಿದ ಚಿತ್ರ



ತುಮಕೂರಿನ ಖಾದಿ ವಸ್ತ್ರಾಲಯ ಸಂಸ್ಥಾಪಕರು ಶ್ರೀ ನೀಲಕಂಠರಾವ್



ತುಮಕೂರು ಜಿಲ್ಲೆಯಲ್ಲಿ ಖಾದಿ ಪ್ರಚಾರ, ಪಾನ ನಿರೋಧ, ಹಿಂದಿ ಪ್ರಚಾರದಲ್ಲಿ ದುಡಿದ ಶ್ರೀ ಟಿ.ಸುಬ್ರಮಣ್ಯಂ ಅವರು



ತುಮಕೂರು ಜಿಲ್ಲೆಯಲ್ಲಿ ಖಾದಿ ಪ್ರಚಾರ, ಮತ್ತು ಸರ್ವೋದಯ ಕಾರ್ಯಕ್ರಮದಲ್ಲಿ ಭಾಗವಹಿಸಿದ ಶ್ರೀ ಕೆ.ಎಸ್.ರಾಜಪ್ಪನವರು



ತುಮಕೂರು ಜಿಲ್ಲೆಯಲ್ಲಿ ಹರಿಜನೋದ್ಧಾರ ಮತ್ತು ಸರ್ವೋದಯ
ಕಾರ್ಯಕ್ರಮಗಳಲ್ಲಿ ಭಾಗವಹಿಸಿದ ಶ್ರೀ ಎಚ್.ಎಂ.ಗಂಗಾಧರಯ್ಯನವರು



ತುಮಕೂರು ಜಿಲ್ಲೆಯಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಸರ್ವೋದಯ
ಕಾರ್ಯಕ್ರಮಗಳಲ್ಲಿ ಭಾಗವಹಿಸಿದ ಎಂ.ಪುಟ್ಟತಿಮ್ಮಯ್ಯನವರು



ತುಮಕೂರು ಜಿಲ್ಲಾ ಖಾದಿ ಮತ್ತು ಗ್ರಾಮೋದ್ಯೋಗ ಸಹಕಾರ ಸಂಘದಲ್ಲಿ
ಸೇವೆ ಸಲ್ಲಿಸಿದ ಶ್ರೀಮತಿ ಜೆ.ಸಿ.ಭಾಗೀರಥಮ್ಮನವರು



ತುಮಕೂರು ಜಿಲ್ಲೆಯ ಗ್ರಾಮೀಣಾಭಿವೃದ್ಧಿ ಮತ್ತು ಸರ್ವೋದಯ
ಕಾರ್ಯಕ್ರಮಗಳಲ್ಲಿ ಭಾಗವಹಿಸಿದ ಶ್ರೀ ಖಾದಿ ಗಂಗಪ್ಪನವರು

## ೨. ಆಕರ ಗ್ರಂಥಗಳು


೧. ಆಚಾರ್ಯ.ಕೆ.ಎಸ್., ಗಾಂಧೀ ವಿಚಾರ ಧಾರೆ, ಗಾಂಧೀ ವಿಜ್ಞಾನ ಟ್ರಸ್ಟ್ , ಬೆಂಗಳೂರು, ೧೯೩೩

೨. ಆ್ಯಂಟೋನಿ ಗ್ರಾಂಸಿ, ಸೆಲಕ್ಷನ್ ಫ್ರಂ ದ ಪ್ರಿಸನ್ ನೋಟ್‌ಬುಕ್ಸ್, ಕ್ವಿಂಟನ್ ಹೋರೆಗಿಯೋ, ಫ್ರಿ ನಾವೆಲ್ ಸ್ಮಿತ್, ಲಂಡನ್, ೧೯೭೧

೩. ಕಮಲೇಶ್ ಕೆ.ಆರ್.(ಸಂ), ಕರ್ನಾಟಕದಲ್ಲಿ ಗ್ರಾಮೀಣಾಭಿವೃದ್ಧಿ, ಗ್ರಾಮಚೇತನ, ಎಂ.ವಿ.ರಾಜಶೇಖರನ್ ಅಭಿನಂದನಾ ಗ್ರಂಥ ಸಮಿತಿ, ಬೆಂಗಳೂರು, ೨೦೦೫

೪. ಕವಿತಾ ಕೃಷ್ಣ, ಸ್ವಾತಂತ್ರ್ಯ ಶ್ರೀ, ಕವಿತಾ ಪ್ರಕಾಶನ, ಕ್ಯಾತ್ಸಂದ್ರ, ತುಮಕೂರು, ೧೯೯೦

೫. ಕವಿತಾ ಕೃಷ್ಣ, ಸರ್ವೋದಯ ಕಿರಣ ಟಿ.ಎ.ದಾಸಪ್ಪ, ರಾಕ್‌ಲೈನ್ ಪ್ರಕಾಶನ, ತುಮಕೂರು, ೨೦೦೧

೬. ಕವಿತಾ ಕೃಷ್ಣ (ಸಂ), ವೀರವನಿತೆ, ಜೆ.ಸಿ.ಭಾಗೀರಥಮ್ಮ ಅಭಿನಂದನಾಗ್ರಂಥ ಸಮಿತಿ, ತುಮಕೂರು, ೧೯೮೮

೭. ಕೃಷ್ಣಪ್ಪ ಸಿ., ಖಾದಿಗಂಗಪ್ಪ, ಗಾಂಧಿ ಅಧ್ಯಯನ ಮಾಲೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೨೦೦೬

೮. ಕೃಷ್ಣಸ್ವಾಮಿ, ಗಾಂಧೀಜಿಯ ೧೨೫ನೇ ಜನ್ಮದಿನೋತ್ಸವದ ಸ್ಮರಣ ಸಂಚಿಕೆ, ಕರ್ನಾಟಕ ರಾಜ್ಯ ಗಾಂಧೀ ಸ್ಮಾರಕ ನಿಧಿ, ಬೆಂಗಳೂರು, ೧೯೯೫

೯. ಗಾಂಧೀಜಿ ಎಂ.ಕೆ., ಕನ್‌ಸ್ಟ್ರಕ್ಟಿವ್ ಪ್ರೋಗ್ರಾಮ್ಸ್ ಇಟ್ಸ್ ಮೀನಿಂಗ್ ಅಂಡ್ ಪ್ಲೇಸ್, ನವಜೀವನ, ಅಹಮದಾಬಾದ್, ೧೯೪೧

೧೦. ಗಾಂಧೀಜಿ ಎಂ.ಕೆ., ಕಮ್ಯುನಲ್ ಯುನಿಟ, ನವಜೀವನ, ಅಹಮದಾಬಾದ್, ೧೯೪೯

೧೧. ಗಾಂಧೀಜಿ ಎಂ.ಕೆ., ವಿಮೆನ್ ಅಂಡ್ ಸೋಷಿಯಲ್ ಇನ್‌ಜೇಸ್ಟೀಸ್, ನವಜೀವನ, ಅಹಮದಾಬಾದ್, ೧೯೪೭

೧೨. ಗಾಂಧೀಜಿ ಎಂ.ಕೆ., ವಿಲೇಜ್ ಇಂಡಸ್ಟ್ರೀಸ್, ನವಜೀವನ, ಅಹಮದಾಬಾದ್, ೧೯೬೦

೧೩. ಗೊರೂರು ಅಯ್ಯಂಗಾರ್, ಮಹಾತ್ಮ ಗಾಂಧೀಜಿಯವರ ಪೂರ್ಣ ಸ್ವದೇಶಿ, ಗೊರೂರು, ೧೯೪೦

೧೪. ಗೋಪಾಲರಾವ್ ಎಚ್.ಎಸ್.(ಸಂ), ಕರ್ನಾಟಕ ಏಕೀಕರಣ ಇತಿಹಾಸ, ನವಪ್ರಕಾಶನ, ೧೯೯೬

೧೫. ಚಂದ್ರಶೇಖರ್ ಕೆ., ಮಹಾತ್ಮಗಾಂಧೀಜಿ ಮತ್ತು ಗ್ರಾಮಸ್ವರಾಜ್ಯ, ಪ್ರಸಾರಾಂಗ, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ, ೨೦೦೧

೧೬. ಚಂದ್ರಶೇಖರ್ ಎಸ್.(ಲೇ), ಕರ್ನಾಟಕ ಇತಿಹಾಸ ಶತಮಾನದ ಮುಖ್ಯ ಪುಟಗಳು, ಟಿ.ಸತೀಶ ಯು.ಪೈ(ಸಂ), ಉದಯವಾಣಿ, ೧೯೯೯

೧೭. ಚಂದ್ರಶೇಖರ್ ಎಸ್., ದಕ್ಷಿಣ ಭಾರತ, ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೦

೧೮. ಚಂದ್ರಶೇಖರ್ ಎಸ್.(ಸಂ), ಕರ್ನಾಟಕ ಚರಿತ್ರೆ, ಸಂಪುಟ ೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೭

೧೯. ಚಿಕ್ಕಣ್ಣ ಎನ್., ಎಂ.ಪುಟ್ಟತಿಮ್ಮಯ್ಯ, ಗಾಂಧಿ ಅಧ್ಯಯನ ಮಾಲೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೨೦೦೬

೨೦. ಜವರೇಗೌಡ ದೇ.(ಸಂ), ಸರ್ವೋದಯಪಥ, ಜಿ.ವಿ.ನಾ ಅಭಿನಂದನಾ ಗ್ರಂಥ ಸಮಿತಿ, ಚಿಕ್ಕನಾಯಕನ ಹಳ್ಳಿ, ೧೯೮೨

೨೧. ಜ್ಯೂಡಿತ್ ಎಂ.ಬ್ರೌನ್, ಗಾಂಧೀ ಪ್ರಿಸನರ್ ಆಫ್ ಹೋಪ್, ಆಕ್ಸ್‌ಫರ್ಡ ಯೂನಿವರ್ಸಿಟಿ ಪ್ರೆಸ್, ನ್ಯೂಡೆಲ್ಲಿ, ೧೯೯೨

೨೨. ತಾಳಿಕೆರೆ ಸುಬ್ರಮಣ್ಯಂರವರ ಜನ್ಮ ಶತಮಾನೋತ್ಸವ ಸ್ಮರಣ ಸಂಚಿಕೆ, ೧೯೭೭

೨೩. ತಿರುಮಲೆ ಅನಂತರಂಗಾಚಾರ್(ಅನು), ತುಮಕೂರು ಜಿಲ್ಲೆಯಲ್ಲಿ ಪೂಜ್ಯ ವಿನೋಬಾ, ಗಾಂಧೀ ವಿಚಾರ ಪರಿಷತ್, ತುಮಕೂರು, ೧೯೫೭

೨೪. ತುಮಕೂರು ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರ ಸಂಘ(ರಿ), ತುಮಕೂರು ಜಿಲ್ಲೆಯ ಚಲೇಜಾವ್ ಚಳುವಳಿಯ ೫೦ನೇ ವಾರ್ಷಿಕೋತ್ಸವದ ಸ್ಮರಣ ಸಂಚಿಕೆ, ೧೯೯೨

೨೫. ತುಮಕೂರು ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರ ಸಮ್ಮೇಳನ, ೧೯೮೩-೮೪, ಶ್ರೀನಿವಾಸ ಪ್ರೆಸ್, ರೈಲ್ವೆ ಸ್ಟೇಷನ್ ರಸ್ತೆ, ಪ್ರಭಾತ ಕಾಫೀ ಡಿಪೋ, ಬಿ.ಹೆಚ್ .ರಸ್ತೆ, ತಿಪಟೂರು

೨೬. ತೆಂಡೂಲ್ಕರ್ ಡಿ.ಜಿ., ಮಹಾತ್ಮ, ಸಂಪುಟ-೩, ಗಾಂಧೀಭವನ, ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೬

೨೭. ದಿ ಕಲೆಕ್ಟೆಡ್ ವರ್ಕ್ಸ್ ಆಫ್ ಮಹಾತ್ಮಗಾಂಧಿ, ಸಂಪುಟ-೫೬, ನವಜೀವನ, ಅಹಮದಾಬಾದ್, ೧೯೪೭

೨೮. ದೊರೆಸ್ವಾಮಿ ಹೆಚ್.ಎಸ್., ನೆನಪಿನ ಸುರಳಿ ತೆರೆದಾಗ, ಸುವಿದ್ಯಾ ಪ್ರಕಾಶನ, ಬೆಂಗಳೂರು, ೧೯೯೭

೨೯. ನಂಜುಂಡಸ್ವಾಮಿ ಬಿ.(ಸಂ), ಧಾನ್ಯ ಲಕ್ಷ್ಮಿ ವಜ್ರ ಮಹೋತ್ಸವದ ಸ್ಮರಣ ಸಂಚಿಕೆ, ೧೯೨೬-೨೦೦೧, ಧಾನ್ಯ ವ್ಯಾಪಾರಿಗಳ ಸಂಘ(ರಿ), ವಜ್ರ ಮಹೋತ್ಸವದ ಸಮಿತಿ, ತುಮಕೂರು, ೨೦೦೧

೩೦. ನಂಜುಂಡಸ್ವಾಮಿ ಬಿ.,(ಸಂ), ಕಲ್ಪಸಿರಿ, ಅಖಿಲಭಾರತ ೬೯ನೇ ಕನ್ನಡ ಸಾಹಿತ್ಯ ಸಮ್ಮೇಳನ ತುಮಕೂರು ೨೦೦೨ರ ಸ್ಮರಣ ಸಂಚಿಕೆ, ಕನ್ನಡ ಸಾಹಿತ್ಯ ಪರಿಷತ್ ಚಾಮರಾಜಪೇಟೆ, ಬೆಂಗಳೂರು, ೨೦೦೨

೩೧. ನಂಜುಂಡಸ್ವಾಮಿ ಬಿ.(ಸಂ), ಬಹುಧಾನ್ಯ ಸಿರಿ, ಸ್ಮರಣ ಸಂಚಿಕೆ, ಧಾನ್ಯ ವ್ಯಾಪಾರಿಗಳ ಸಂಘ(ರಿ), ತುಮಕೂರು, ೧೯೯೮

೩೨. ನನ್ನೂರು ನನ್ನ ಜನ ತುಮಕೂರು ಜಿಲ್ಲೆ, ತುಷಾರ, ಸೆಪ್ಟೆಂಬರ್, ೧೯೪೨

೩೩. ನಾಗರತ್ನಮ್ಮ ಎಸ್., ತುಮಕೂರು ಜಿಲ್ಲೆಯಲ್ಲಿ ಸ್ವಾತಂತ್ರ್ಯ ಹೋರಾಟ, ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿ.ಲ್.ನಿಬಂಧ, ೧೯೯೬

೩೪. ನಾರಾಯಣಶಾಸ್ತ್ರೀ, ರಾಷ್ಟ್ರೀಯ ಮಹಾಪುರುಷರು, ಸಮಾಜ ಪುಸ್ತಕಾಲಯ, ಧಾರವಾಡ, ೧೯೯೮

೩೫. ನಾರಾಯಣರಾವ್ ವಿ.ಎಸ್., ಕರ್ನಾಟಕದಲ್ಲಿ ಗಾಂಧೀಜಿ ಪ್ರಭಾವ, ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು, ೧೯೮೦

೩೬. ನಾಗರತ್ನಮ್ಮ ಎಸ್.(ಲೇ), ತುಮಕೂರು ಜಿಲ್ಲೆಯಲ್ಲಿ ಸ್ವಾತಂತ್ರ್ಯ ಚಳುವಳಿ, ಯೋಗೀಶ್ ಡಿ.ಎನ್.(ಸಂ), ಜಯಮಂಗಲಿ, ೬೯ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ತುಮಕೂರು ಸ್ಮರಣ ಸಂಚಿಕೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೨

೩೭. ನಿರಂಜನ, ಕಿರಿಯರ ವಿಶ್ವಕೋಶ, ಸಂಪುಟ-೭, ಕರ್ನಾಟಕ ಸಹಕಾರಿ ಪ್ರಕಾಶನ, ಬೆಂಗಳೂರು, ೧೯೯೪

೩೮. ಪುಟ್ಟಗಂಗಮ್ಮ ಬಿ.ಆರ್., ಕೆ.ಎಸ್.ರಾಜಪ್ಪನವರ ಜೀವನ ಚರಿತ್ರೆ ಸಾಧನೆ ಮತ್ತು ಸಿದ್ಧಿ, ಬೆಂಗಳೂರು, ೨೦೦೧

೩೯. ಭಾಸ್ಕರಪ್ಪ ಸಿ.ಎನ್.(ಸಂ), ತುಮಕೂರು ಜಿಲ್ಲಾದರ್ಶನ, ಟೈಮ್ಸ್ ಪಬ್ಲಿಕೇಷನ್ಸ್, ತುಮಕೂರು, ೧೯೮೧

೪೦. ಬಿಪನ್ ಚಂದ್ರ ಮತ್ತು ಇತರರು, ಇಂಡಿಯಾಸ್ ಸ್ಟ್ರಗಲ್ ಫಾರ್ ಇಂಡಿಪೆಂಡೆನ್ಸ್, ಪೆಂಗ್ವಿನ್ ಬುಕ್ಸ್, ನ್ಯೂಡೆಲ್ಲಿ, ೧೯೮೮

೪೧. ಬಿಪನ್ ಚಂದ್ರ, ಅಮಲೇಶ್ ತ್ರಿಪಾಟ, ಬರುನ್‌ಡೆ, ಫ್ರೀಡಮ್ ಸ್ಟ್ರಗಲ್, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ, ಹೊಸದೆಹಲಿ, ೧೯೭೪

೪೨. ಭರತನ ಕುಮಾರಪ್ಪ ವೈ., ಪ್ರಾಹಿಭಿಷನ್, ನವಜೀವನ, ಅಹಮದಾಬಾದ್, ೧೯೫೨

೪೩. ಮಜುಂದಾರ್ ಆರ್.ಸಿ., ಸ್ವಾತಂತ್ರ್ಯ ಸಂಗ್ರಾಮ, ನಾರಾಯಣಸ್ವಾಮಿ ಕೆ.ಎಸ್.(ಅನು) ಭಾಗ ೧, ಸಂಪುಟ ೨೩, ಭಾರತೀಯ ವಿದ್ಯಾಭವನ, ಬೆಂಗಳೂರು, ೧೯೯೮

೪೪. ಮಜುಂದಾರ್ ಆರ್.ಸಿ., ಸ್ವಾತಂತ್ರ್ಯ ಸಂಗ್ರಾಮ, ನರಸಿಂಹಮೂರ್ತಿ ಎ.ವಿ.(ಅನು) ಭಾಗ ೨, ಸಂಪುಟ ೨೪, ಭಾರತೀಯ ವಿದ್ಯಾಭವನ, ಬೆಂಗಳೂರು, ೧೯೯೮

೪೫. ಮಾಲಿಮುದ್ದಣ, ಮಾಲಿಮರಿಯಪ್ಪ, ಸಾಹಿತ್ಯಾಲಯ, ಗಾಂಧೀನಗರ, ತುಮಕೂರು, ೧೯೬೯

೪೬. ಮಾದೇವ್ ಭರಣಿ, ಶಿಕ್ಷಣ ಭೀಷ್ಮ, ಸಿದ್ಧಾರ್ಥ ಶಿಕ್ಷಣ ಸಂಸ್ಥೆ, ಸಿದ್ಧಾರ್ಥನಗರ, ತುಮಕೂರು, ೧೯೯೪

೪೭. ಮುನ್ಷೇಗೌಡ ಕೆ.ಎಸ್., ಡೆವಲಪ್‌ಮೆಂಟ್ ಆಫ್ ಕರ್ನಾಟಕ ಲೆಜಿಸ್ಲೆಚರ್, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ೧೯೮೮

೪೮. ಮೂಡ್ಲಗಿರೀಶ್ ಎಂ.ವಿ., ಮಧುಗಿರಿ ಗಾಂಧಿ ಎಂ.ಪುಟ್ಟತಿಮ್ಮಯ್ಯ, ಮಧುಗಿರಿ, ೨೦೦೨

೪೯. ಮೌಲಾನ ಅಬ್ದುಲ್ ಕಲಾಂ ಅಜಾದ್, ಗಾಂಧೀಯನ್ ಔಟ್‌ಲುಕ್ ಅಂಡ್ ಟೆಕ್ನಿಕ್ಸ್, ಭಾರತ ಸರ್ಕಾರ, ದೆಹಲಿ, ೧೯೫೩

೫೦. ರಂಜಿತ್ ಗುಹಾ, ಸಬಾಲ್ಟ್ರರ್ನ್ ಸ್ಟಡೀಸ್, ಸಂಪುಟ-೧ ರಿಂದ ೬, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಡೆಲ್ಲಿ, ೧೯೮೫

೫೧. ರಜತ ಮಹೋತ್ಸವ ಸಂಚಿಕೆ, ಜಿಲ್ಲಾ ಹಿಂದಿ ಪ್ರಚಾರ ಸಮಿತಿ, ತುಮಕೂರು, ೧೯೬೯

೫೨. ಲೀಲಾಮಣ್ಣಾಲ, ನಿರಂತರ ಸತ್ಯ, ನಿಸರ್ಗ ಪ್ರಕಾಶನ, ಸಿದ್ದಾರ್ಥನಗರ, ಮೈಸೂರು, ೨೦೦೧

೫೩. ಲಿಂಗಯ್ಯ ಡಿ., ಸತ್ಯಾಗ್ರಹಿಗಳ ನೆನಪುಗಳು, ಬನಶಂಕರಿ ಪ್ರಕಾಶನ, ಬೆಂಗಳೂರು, ೧೯೮೦

೫೪. ವೀರತಪ್ಪ ಕೆ., ಮೈಸೂರು ಸಂಸ್ಥಾನದಲ್ಲಿ ಸ್ವಾತಂತ್ರ್ಯ ಚಳುವಳಿ, ವಿಜಯರವಿ ಪ್ರಕಾಶನ, ಬೆಂಗಳೂರು, ೧೯೭೭

೫೫. ವೀರತಪ್ಪ ಕೆ., ರೀಡಿಂಗ್ಸ್ ಇನ್ ಮಾರ್ಡನ್ ಹಿಸ್ಟರಿ ಆಫ್ ಮೈಸೂರ್, ಎಸ್.ಚಂದು ಅಂಡ್ ಕಂಪನಿ ಲಿಮಿಟೆಡ್, ನ್ಯೂಡೆಲ್ಲಿ, ೧೯೮೫

೫೬. ವೀರಮುಕ್ತ ಬಿಹಾರಿ, ಹಿಸ್ಟರಿ ಆಫ್ ಹರಿಜನ ಸೇವಕ ಸಂಘ, ದೆಹಲಿ, ೧೯೭೧

೫೭. ವೇಮಗಲ್ ಸೋಮಶೇಖರ್, ಮಹಾತ್ಮಗಾಂಧೀಜಿ ಮತ್ತು ಅಸ್ಪೃಶ್ಯತೆ, ಗಾಂಧೀ ಅಧ್ಯಯನ ಮಾಲೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೨೦೦೫

೫೮. ಶ್ರೀನಿವಾಸ ಮೂರ್ತಿ ಹೆಚ್.ವಿ., ರಾಮಕೃಷ್ಣನ್ ಆರ್., ಸಮಗ್ರ ಕರ್ನಾಟಕ ಚರಿತ್ರೆ, ಓರಿಯೆಂಟ್ ಲಾಂಗ್‌ಮನ್ ಲಿಮಿಟೆಡ್, ಬೆಂಗಳೂರು, ೧೯೯೫

೫೯. ಸಂಪದ್ಗಿರಿರಾವ್ ಕೆ., ಸ್ವರಾಜ್ಯ, ಐ.ಬಿ.ಹೆಚ್, ಪ್ರಕಾಶನ, ಬೆಂಗಳೂರು, ೧೯೭೨

೬೦. ಸ್ವಾತಂತ್ರ್ಯ ಯೋಧರ ಮತ್ತು ಉತ್ತರಾಧಿಕಾರಿಗಳ ಕ್ವಿಟ್ ಇಂಡಿಯಾ ಚಳುವಳಿಯ ಸುವರ್ಣ ಮಹೋತ್ಸವದ ಸ್ಮರಣ ಸಂಚಿಕೆ, ಬೆಂಗಳೂರು, ೧೯೯೩

೬೧. ಸಿದ್ದವ್ವನಹಳ್ಳಿ ಕೃಷ್ಣಶರ್ಮ(ಸಂ), ಗಾಂಧೀ ಮತ್ತು ಕರ್ನಾಟಕ, ಗಾಂಧೀ ಸ್ಮಾರಕ ನಿಧಿ, ಬೆಂಗಳೂರು, ೧೯೬೯

೬೨. ಸುಂದರ ಅ.(ಸಂ), ಕರ್ನಾಟಕ ಚರಿತ್ರೆ, ಸಂಪುಟ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೭

೬೩. ಸುಮಿತ್ ಸರ್ಕಾರ್, ಮಾರ್ಡನ್ ಇಂಡಿಯಾ ೧೮೮೫-೧೯೪೭, ಮ್ಯಾಕ್‌ಮಿಲನ್ ಇಂಡಿಯಾ ಲಿಮಿಟೆಡ್, ನ್ಯೂಡೆಲ್ಲಿ, ೧೯೮೩

೬೪. ಸುಮಿತ್ ಸರ್ಕಾರ್, ದಿ ಸ್ವದೇಶಿ ಮೂವ್‌ಮೆಂಟ್ ಇನ್ ಬೆಂಗಾಳ್ ೧೯೦೩-೧೯೦೮ರವರೆಗೆ, ನ್ಯೂಡೆಲ್ಲಿ, ೧೯೭೩

೬೫. ಸೂರ್ಯನಾಥ ಕಾಮತ್(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂಪುಟ-೧, ಗೀತಾ ಬುಕ್ ಹೌಸ್, ಮೈಸೂರು, ೧೯೭೪

೬೬. ಸೂರ್ಯನಾಥ ಕಾಮತ್ (ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂಪುಟ-೨, ಗೀತಾ ಬುಕ್ ಹೌಸ್, ಮೈಸೂರು, ೧೯೭೭

೬೭. ಸೂರ್ಯನಾಥ ಕಾಮತ್(ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂಪುಟ-೩, ಗೀತಾ ಬುಕ್ ಹೌಸ್, ಮೈಸೂರು, ೧೯೮೦

೬೮. ಸೂರ್ಯನಾಥ ಕಾಮತ್(ಸಂ), ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಸಂಪುಟ-೨, ಕರ್ನಾಟಕ ರಾಜ್ಯ ಸರ್ಕಾರ, ಬೆಂಗಳೂರು, ೧೯೮೫

೬೯. ಸೂರ್ಯನಾಥ ಕಾಮತ್(ಸಂ), ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಸಂಪುಟ-೩, ಕರ್ನಾಟಕರಾಜ್ಯ ಸರ್ಕಾರ, ಬೆಂಗಳೂರು, ೧೯೮೯

೭೦. ಸೂರ್ಯನಾಥ ಕಾಮತ್(ಸಂ), ತುಮಕೂರ್ ಡಿಸ್ಟ್ರಿಕ್ ಗ್ಯಾಸೆಟಿಯರ್, ಗೌರ್ನಮೆಂಟ್ ಪ್ರೆಸ್, ಮೈಸೂರು, ೧೯೬೮

೭೧. ಸೂರ್ಯನಾಥ ಕಾಮತ್(ಸಂ), ಕರ್ನಾಟಕದಲ್ಲಿ ಕ್ವಿಟ್ ಇಂಡಿಯಾ ಚಳುವಳಿ, ಲೋಕ ಶಿಕ್ಷಣ ಟ್ರಸ್ಟ್ ಗ್ರಂಥಮಾಲೆ, ಹುಬ್ಬಳ್ಳಿ, ಬೆಂಗಳೂರು, ೧೯೯೨

೭೨. ಸೂರ್ಯನಾಥ ಕಾಮತ್, ಕ್ವಿಟ್ ಇಂಡಿಯಾ ಮೂಮೆಂಟ್ ಇನ್ ಕರ್ನಾಟಕ, ಲಿಪಿ ಪ್ರಕಾಶನ, ಬೆಂಗಳೂರು, ೧೯೬೮

೭೩. ಹಯವದನರಾವ್(ಸಂ), ಮೈಸೂರು ರಾಜ್ಯ ಗ್ಯಾಸೆಟಿಯರ್, ಗೌರ್ನಮೆಂಟ್ ಪ್ರೆಸ್, ಬೆಂಗಳೂರು, ೧೯೩೦

೭೪. ಹಾಲಪ್ಪ ಜಿ.ಎಸ್.(ಸಂ), ಹಿಸ್ಟರಿ ಆಫ್ ಫ್ರೀಡಮ್ ಮೂವ್‌ಮೆಂಟ್ ಇನ್ ಕರ್ನಾಟಕ, ಸಂಪುಟ-೨, ಗೌರ್ನಮೆಂಟ್ ಆಫ್ ಮೈಸೂರ್, ೧೯೬೪

ಕರ್ನಾಟಕ ರಾಜ್ಯ ಪತ್ರಗಾರ ಇಲಾಖೆಯ ಕಡತಗಳು

೧. ಕಾಂಗ್ರೆಸ್ ಮೀಟಿಂಗ್ಸ್ ಇನ್ ತುಮಕೂರ್ ಡಿಸ್ಟ್ರಿಕ್ಟ್, ಕಡತದ ಸಂಖ್ಯೆ, ದಿನಾಂಕ ೬-೧-೧೯೩೮ ರಿಂದ ೨೮-೩-೧೯೩೮ ರವರೆಗೆ (ಕ.ರಾ.ಪ.ಇ) ಬೆಂಗಳೂರು.

೨. ಕಾಂಗ್ರೆಸ್ ಮೀಟಿಂಗ್ಸ್ ಇನ್ ತುಮಕೂರ್ ಡಿಸ್ಟ್ರಿಕ್ಟ್ ಕಡತದ ಸಂಖ್ಯೆ, ೬-೫-೧೯೩೮ ರಿಂದ ೨೬-೬-೧೯೩೮ ರವರೆಗೆ, ದಿನಾಂಕ ೨೮-೪-೧೯೩೮ (ಕ.ರಾ.ಪ.ಇ) ಬೆಂಗಳೂರು

೩. ಕಾಂಗ್ರೆಸ್ ಮೀಟಿಂಗ್ಸ್ ಇನ್ ತುಮಕೂರ್ ಡಿಸ್ಟ್ರಿಕ್ಟ್ ಕಡತದ ಸಂಖ್ಯೆ, ೬-೧-೧೯೩೮ ರಿಂದ ೩-೩-೧೯೩೮ ರವರೆಗೆ, ದಿನಾಂಕ ೩-೨-೧೯೩೮ (ಕ.ರಾ.ಪ.ಇ) ಬೆಂಗಳೂರು

೪. ಡೈಲಿ ಅಬಸ್ಟ್ರಾಕ್ ಆಫ್ ಇನ್‌ಫರ್‌ಮೇಷನ್ ಆನ್ ದಿ ಸಿವಿಲ್ ಡಿಸ್ ಒಬಿಡಿಯಂಟ್ ಮೂಮೆಂಟ್ ಇನ್ ತುಮಕೂರ್ ಡಿಸ್ಟ್ರಿಕ್ಟ್. ಕಾನ್ ಫಿಡೆಂಷಿಯಲ್ ಕಲೆಕ್ಷನ್ ನಂ.೪೦, ೪೩, ಸಿ.ಬಿ.ಫೈಲ್ ೧೪೭, ೪೨-೧೭

೫. ಪಾರೆಸ್ಟ್ ಸತ್ಯಾಗ್ರಹ ಇನ್ ತುಮಕೂರ್ ಡಿಸ್ಟ್ರಿಕ್ಟ್, ಕಡತದ ಸಂಖ್ಯೆ ಎಸ್ .ಬಿ.ಸಂ-೮೬೧, ೩೯-೪೦, ೨೦-೯-೧೯೩೯ ರಿಂದ ೯-೧೨-೧೯೩೯, ದಿನಾಂಕ ೨೯-೯-೧೯೩೯ (ಕ.ರಾ.ಪ.ಇ) ಬೆಂಗಳೂರು

೬. ಪಾರೆಸ್ಟ್ ಸತ್ಯಾಗ್ರಹ ಇನ್ ತುಮಕೂರ್ ಡಿಸ್ಟ್ರಿಕ್ಟ್, ಕಡತದ ಸಂಖ್ಯೆ ೧೪೨-೨೯-೩೦ ಎಸ್.ಬಿ.ಫೈಲ್ ನಂ. ೮೬-೩೯-೪೦, ದಿನಾಂಕ ೨೮-೯-೧೯೩೯ ರಿಂದ ೭-೧೨-೧೯೩೯ ರವರೆಗೆ (ಕ.ರಾ.ಪ.ಇ) ಬೆಂಗಳೂರು

೭. ಫಾರೆಸ್ಟ್ ಸತ್ಯಾಗ್ರಹ ಇನ್ ತುಮಕೂರ್ ಡಿಸ್ಟ್ರಿಕ್ಟ್, ಕಡತದ ಸಂಖ್ಯೆ ೧೪೨-೩೯-೪೦, ಎಸ್. ಬಿ.ಫೈಲ್ ನಂ. ೮೬-೩೯-೪೦, ದಿನಾಂಕ ೨೦-೧೦-೧೯೩೯, (ಕ.ರಾ.ಪ.ಇ) ಬೆಂಗಳೂರು

೮. ಫಾರೆಸ್ಟ್ ಸತ್ಯಾಗ್ರಹ ಇನ್ ತುಮಕೂರ್ ಡಿಸ್ಟ್ರಿಕ್ಟ್ ಕಡತದ ಸಂಖ್ಯೆ, ಎಸ್. ಬಿ.೧೫೮, ೩೯-೪೦, ದಿನಾಂಕ ೬-೧೧-೧೯೩೯ (ಕ.ರಾ.ಪ.ಇ) ಬೆಂಗಳೂರು.

೯. ಫಾರೆಸ್ಟ್ ಸತ್ಯಾಗ್ರಹ ಇನ್ ತುಮಕೂರ್ ಡಿಸ್ಟ್ರಿಕ್ಟ್, ಕಡತದ ಸಂಖ್ಯೆ ೧೪೨-೩೯-೪೦, ಎಸ್.ಬಿ.ಫೈಲ್, ನಂ. ೮೬-೩೯-೪೦, ದಿನಾಂಕ ೧-೧೨-೧೯೩೯ (ಕ.ರಾ.ಪ.ಇ) ಬೆಂಗಳೂರು

೧೦. ಫಾರೆಸ್ಟ್ ಸತ್ಯಾಗ್ರಹ ಇನ್ ತುಮಕೂರ್ ಡಿಸ್ಟ್ರಿಕ್ಟ್, ಕಡತದ ಸಂಖ್ಯೆ ೧೪೨-೩೯-೪೦, ಎಸ್.ಬಿ.ಫೈಲ್, ನಂ-೮೬-೩೯-೪೦, ದಿನಾಂಕ ೯-೧೨-೧೯೩೯ (ಕ.ರಾ.ಪ.ಇ) ಬೆಂಗಳೂರು

೧೧. ಮೈಸೂರು ಕಾಂಗ್ರೆಸ್ ಸಪ್ತಾಹದ ವರದಿ, ಕಡತದ ಸಂಖ್ಯೆ ೮೩೦-೧೨-೧೯೩೯, ದಿನಾಂಕ ೩-೭-೧೯೩೯ (ಕ.ರಾ.ಪ.ಇ) ಬೆಂಗಳೂರು

೧೨. ಮೈಸೂರು ಕಾಂಗ್ರೆಸ್ ಸಪ್ತಾಹದ ವರದಿ, ಮೈಸೂರು ಕಾಂಗ್ರೆಸ್ ದಿನಾಂಕ : ೨-೧-೧೯೩೯ ರಿಂದ ೨೬-೬-೧೯೩೯ (ಕ.ರಾ.ಪ.ಇ) ಬೆಂಗಳೂರು

ಖಾಸಗಿ ದಾಖಲೆಗಳು

೧. ಆಲ್ ಇಂಡಿಯಾ ಕಾಂಗ್ರೆಸ್ ಕಮಿಟಿ, ಬುಲೆಟಿನ್ ನಂ-೧೭, ದಿನಾಂಕ ೪-೧೨-೧೯೪೨, ಖಾದಿ ಶಂಕರಪ್ಪ ಸಂಗ್ರಹ, ಫೈಲ್ ನಂ.೨, (ಕ.ರಾ.ಪ.ಇ) ಬೆಂಗಳೂರು

೨. ಕರ್ನಾಟಕ ಪ್ರಾಂತೀಯ ಹಿಂದೀ ಪ್ರಚಾರ ಸಭೆ, ಭೀಷೆ ಕಲೆಕ್ಷನ್ಸ್ (ಕ.ರಾ.ಪ.ಇ) ಬೆಂಗಳೂರು

೩. ನಟರಾಜನ್ ಸಂಗ್ರಹ, ತುಮಕೂರು ಕೈಪಿಡಿ, ಖಾಸಗಿ ದಾಖಲೆ (ಕ.ರಾ.ಪ.ಇ) ಬೆಂಗಳೂರು

೪. ನಾರಾಯಣ ಸಿಂಗ್ ಬೀಷೆ ಕಲೆಕ್ಷನ್ಸ್ (ಕ.ರಾ.ಪ.ಇ) ಬೆಂಗಳೂರು

೫. ಪರಶುರಾಮನ್ ಸಂಗ್ರಹ, ಖಾಸಗಿ ದಾಖಲೆ, ಕಡತದ ಸಂಖ್ಯೆ ೨೩೭, ದಿನಾಂಕ ೫-೧೦-೧೯೩೯ (ಕ.ರಾ.ಪ.ಇ) ಬೆಂಗಳೂರು

೬. ಪಾಪಣ್ಣ ಕೆ.ಎಂ., ಪಾಪಣ್ಣ ಕೊತ್ತನೂರು ಇವರ ಸಂಗ್ರಹ, ಮೈಸೂರು ಚರಕಾ ಪ್ರಚಾರಕ ಸಂಘ (ಕ.ರಾ.ಪ.ಇ), ಬೆಂಗಳೂರು

ಸಂದರ್ಶನಗಳು

೧. ಕೃಷ್ಣಮೂರ್ತಿ., ತುಮಕೂರು ಜಿಲ್ಲಾ ಹಿಂದೀ ಪ್ರಚಾರ ಸಮಿತಿಯ ಪ್ರಾಂಶುಪಾಲರು ಮತ್ತು ಸ್ವಾತಂತ್ರ್ಯ ಹೋರಾಟಗಾರರು, ದಿನಾಂಕ ೨೦-೨-೨೦೦೭, ತುಮಕೂರು.

೨. ಗೌರಮ್ಮ ಡಿ.ಎಚ್., ಬಾಪೂಜಿ ವಿದ್ಯಾಸಂಸ್ಥೆಯ ಪ್ರಾಂಶುಪಾಲರು, ದಿನಾಂಕ ೩೦-೩-೨೦೦೭, ತುಮಕೂರು

೩. ಡೇನಿಯಲ್ ಗುಂಡಪ್ಪ, ಸ್ವಾತಂತ್ರ್ಯ ಹೋರಾಟಗಾರರು, ದಿನಾಂಕ ೨೪-೨-೨೦೦೭, ತುಮಕೂರು

೪. ಭಾಗೀರಥಮ್ಮ ಜೆ.ಸಿ., ಸ್ವಾತಂತ್ರ್ಯ ಹೋರಾಟಗಾರ್ತಿ, ದಿನಾಂಕ ೧೫-೨-೨೦೦೭, ತುಮಕೂರು

೫. ರಾಜಪ್ಪ.ಕೆ.ಎಸ್., ಸ್ವಾತಂತ್ರ್ಯ ಹೋರಾಟಗಾರರು, ದಿನಾಂಕ ೨೦-೨-೨೦೦೭, ಕ್ಯಾತ್ಸಂದ್ರ

ಪತ್ರಿಕೆಗಳು

೧. ಕಂಠೀರವ
೨. ಜನವಾಣಿ
೩. ತಾಯಿನಾಡು
೪. ನವಭಾರತ
೫. ಪ್ರಜಾವಾಣಿ
೬. ಪ್ರಜಾಧ್ವನಿ
೭. ಪೌರವಾಣಿ
೮. ಮೈಸೂರು ಸ್ಟಾರ್
೯. ವಿಶ್ವಕರ್ನಾಟಕ
೧೦. ಸತ್ಯವಾದಿ

